# ಅಥ ಶ್ರೀಲಲಿತಾತ್ರಿಶತೀನಾಮಾವಳಿ

ಓಂ ಕಕಾರರೂಪಾಯೈ ನಮಃ
ಕಲ್ಯಾಣ್ಯೈ ನಮಃ
ಕಲ್ಯಾಣಗುಣಶಾಲಿನ್ಯೈ ನಮಃ
ಕಲ್ಯಾಣಶೈಲನಿಲಯಾಯೈ ನಮಃ
ಕಮನೀಯಾಯೈ ನಮಃ
ಕಲಾವತ್ಯೈ ನಮಃ
ಕಮಲಾಕ್ಷ್ಯೈ ನಮಃ
ಕಲ್ಮಷಘ್ನ್ಯೈ ನಮಃ
ಕರುಣಾಮೃತಸಾಗರಾಯೈ ನಮಃ
ಕದಮ್ಬಕಾನನಾವಾಸಾಯೈ ನಮಃ
ಕದಮ್ಬಕುಸುಮಪ್ರಿಯಾಯೈ
ಕನ್ದರ್ಪವಿದ್ಯಾಯೈ ನಮಃ
ಕನ್ದರ್ಪಜನಕಾಪಾಙ್ಗವೀಕ್ಷಣಾ- [ಯೈ ನಮಃ
ಕರ್ಪೂರವೀಟೀಸೌರಭ್ಯಕಲ್ಲೋ- [ಲಿತಕಕುಪ್ತಟಾಯೈ ನಮಃ
ಕಲಿದೋಷಹರಾಯೈ ನಮಃ
ಕಞ್ಜಲೋಚನಾಯೈ ನಮಃ
ಕರ್ಮವಿಗ್ರಹಾಯೈ ನಮಃ
ಕರ್ಮಾದಿಸಾಕ್ಷಿಣ್ಯೈ ನಮಃ
ಕಾರಯಿತ್ರ್ಯೈ ನಮಃ
ಕರ್ಮಫಲಪ್ರದಾಯೈ ನಮಃ
ಏಕಾರರೂಪಾಯೈ ನಮಃ
ಏಕಾಕ್ಷರ್ಯೈ ನಮಃ
ಏಕಾನೇಕಾಕ್ಷರಾಕೃತ್ಯೈ ನಮಃ
ಏತತ್ತದಿತ್ಯನಿರ್ದೇಶಾಯೈ ನಮಃ

ಓಂ ಏಕಾನನ್ದಚಿದಾಕೃತ್ಯೈ ನಮಃ
ಏವಮಿತ್ಯಾಗಮಾಬೋಧ್ಯಾಯೈ
ಏಕಭಕ್ತಿಮದರ್ಚಿತಾಯೈ ನಮಃ
ಏಕಾಗ್ರಚಿತ್ತನಿರ್ಧ್ಯಾತಾಯೈ
ಏಷಣಾರಹಿತಾದೃತಾಯೈ ನಮಃ
ಏಲಾಸುಗನ್ಧಿಚಿಕುರಾಯೈ ನಮಃ
ಏನಃಕೂಟವಿನಾಶಿನ್ಯೈ ನಮಃ
ಏಕಭೋಗಾಯೈ ನಮಃ
ಏಕರಸಾಯೈ ನಮಃ
ಏಕೈಶ್ವರ್ಯಪ್ರದಾಯಿನ್ಯೈ ನಮಃ
ಏಕಾತಪತ್ರಸಾಮ್ರಾಜ್ಯಪ್ರದಾ- [ಯೈ ನಮಃ
ಏಕಾನ್ತಪೂಜಿತಾಯೈ ನಮಃ
ಏಧಮಾನಪ್ರಭಾಯೈ ನಮಃ
ಏಜದನೇಕಜಗದೀಶ್ವರ್ಯೈ ನಮಃ
ಏಕವೀರಾದಿಸಂಸೇವ್ಯಾಯೈ ನಮಃ
ಏಕಪ್ರಾಭವಶಾಲಿನ್ಯೈ ನಮಃ
ಈಕಾರರೂಪಾಯೈ ನಮಃ
ಈಶಿತ್ರ್ಯೈ ನಮಃ
ಈಪ್ಸಿತಾರ್ಥಪ್ರದಾಯಿನ್ಯೈ ನಮಃ
ಈದೃಗಿತ್ಯವಿನಿರ್ದೇಶ್ಯಾಯೈ ನಮಃ
ಈಶ್ವರತ್ವವಿಧಾಯಿನ್ಯೈ ನಮಃ
ಈಶಾನಾದಿಬ್ರಹ್ಮಮಯ್ಯೈ ನಮಃ
ಈಶಿತ್ವಾದ್ಯಷ್ಟಸಿದ್ಧಿದಾಯೈ ನಮಃ
ಈಕ್ಷಿತ್ರ್ಯೈ ನಮಃ
ಈಕ್ಷಣಸೃಷ್ಟಾಣ್ಡಕೋಟ್ಯೈ ನಮಃ

ಓಂ ಈಶ್ವರವಲ್ಲಭಾಯೈ ನಮಃ
ಈಡಿತಾಯೈ ನಮಃ
ಈಶ್ವರಾರ್ಧಾಂಗಶರೀರಾಯೈ
ಈಶಾಧಿದೇವತಾಯೈ ನಮಃ
ಈಶ್ವರಪ್ರೇರಣಕರ್ಯೈ ನಮಃ
ಈಶತಾಂಡವಸಾಕ್ಷಿಣ್ಯೈ ನಮಃ
ಈಶ್ವರೋತ್ಸಂಗನಿಲಯಾಯೈ
ಈತಿಬಾಧಾವಿನಾಶಿನ್ಯೈ ನಮಃ
ಈಹಾವಿರಹಿತಾಯೈ ನಮಃ
ಈಶಶಕ್ತ್ಯೈ ನಮಃ
ಈಷತ್ಸ್ಮಿತಾನನಾಯೈ ನಮಃ
ಲಕಾರರೂಪಾಯೈ ನಮಃ
ಲಲಿತಾಯೈ ನಮಃ
ಲಕ್ಷ್ಮೀವಾಣೀನಿಷೇವಿತಾಯೈ
ಲಾಕಿನ್ಯೈ ನಮಃ
ಲಲನಾರೂಪಾಯೈ ನಮಃ
ಲಸದ್ದಾಡಿಮಪಾಟಲಾಯೈ ನಮಃ
ಲಲಂತಿಕಾಲಸತ್ಫಾಲಾಯೈ ನಮಃ
ಲಲಾಟನಯನಾರ್ಚಿತಾಯೈ
ಲಕ್ಷಣೋಜ್ಜ್ವಲದಿವ್ಯಾಂಗ್ಯೈ
ಲಕ್ಷಕೋಟ್ಯಂಡನಾಯಿಕಾಯೈ
ಲಕ್ಷ್ಯಾರ್ಥಾಯೈ ನಮಃ
ಲಕ್ಷಣಾಗಮ್ಯಾಯೈ ನಮಃ
ಲಬ್ಧಕಾಮಾಯೈ ನಮಃ
ಲತಾತನ್ವೈ ನಮಃ
ಲಲಾಮರಾಜದಳಿಕಾಯೈ ನಮಃ
ಲಂಬಿಮುಕ್ತಾಲತಾಂಚಿತಾಯೈ
ಲಂಬೋದರಪ್ರಸ್ವೈ ನಮಃ

ಓಂ ಲಭ್ಯಾಯೈ ನಮಃ
ಲಜ್ಜಾಢ್ಯಾಯೈ ನಮಃ
ಲಯವರ್ಜಿತಾಯೈ ನಮಃ
ಹ್ರೀಂಕಾರರೂಪಾಯೈ ನಮಃ
ಹ್ರೀಂಕಾರನಿಲಯಾಯೈ ನಮಃ
ಹ್ರೀಂಪದಪ್ರಿಯಾಯೈ ನಮಃ
ಹ್ರೀಂಕಾರಬೀಜಾಯೈ ನಮಃ
ಹ್ರೀಂಕಾರಮಂತ್ರಾಯೈ ನಮಃ
ಹ್ರೀಂಕಾರಲಕ್ಷಣಾಯೈ ನಮಃ
ಹ್ರೀಂಕಾರಜಪಸುಪ್ರೀತಾಯೈ
ಹ್ರೀಂಮತ್ಯೈ ನಮಃ
ಹ್ರೀಂವಿಭೂಷಣಾಯೈ ನಮಃ
ಹ್ರೀಂಶೀಲಾಯೈ ನಮಃ
ಹ್ರೀಂಪದಾರಾಧ್ಯಾಯೈ ನಮಃ
ಹ್ರೀಂಗರ್ಭಾಯೈ ನಮಃ
ಹ್ರೀಂಪದಾಭಿಧಾಯೈ ನಮಃ
ಹ್ರೀಂಕಾರವಾಚ್ಯಾಯೈ ನಮಃ
ಹ್ರೀಂಕಾರಪೂಜ್ಯಾಯೈ ನಮಃ
ಹ್ರೀಂಕಾರಪೀಠಿಕಾಯೈ ನಮಃ
ಹ್ರೀಂಕಾರವೇದ್ಯಾಯೈ ನಮಃ
ಹ್ರೀಂಕಾರಚಿಂತ್ಯಾಯೈ ನಮಃ
ಹ್ರೀಂ ನಮಃ
ಹ್ರೀಂಶರೀರಿಣ್ಯೈ ನಮಃ ೧೦೦
ಹಕಾರರೂಪಾಯೈ ನಮಃ
ಹಲಭೃತ್ಪೂಜಿತಾಯೈ ನಮಃ
ಹರಿಣೇಕ್ಷಣಾಯೈ ನಮಃ
ಹರಪ್ರಿಯಾಯೈ ನಮಃ
ಹರಾರಾಧ್ಯಾಯೈ ನಮಃ

ಓಂ ಹರಿಬ್ರಹ್ಮೇಂದ್ರಸನ್ವಿತಾಯೈ
ಹಯಾರೂಢಾಸೇವಿತಾಂಘ್ರ್ಯೈ
ಹಯಮೇಧಸಮರ್ಚಿತಾಯೈ
ಹರ್ಯಕ್ಷವಾಹನಾಯೈ ನಮಃ
ಹಂಸವಾಹನಾಯೈ ನಮಃ
ಹತದಾನವಾಯೈ ನಮಃ
ಹತ್ಯಾದಿಪಾಪಶಮನ್ಯೈ ನಮಃ
ಹರಿದಶ್ವಾದಿಸೇವಿತಾಯೈ ನಮಃ
ಹಸ್ತಿಕುಮ್ಭೋತ್ತುಙ್ಗಕುಚಾಯೈ
ಹಸ್ತಿಕೃತ್ತಿಪ್ರಿಯಾಙ್ಗನಾಯೈ
ಹರಿದ್ರಾಕುಙ್ಕುಮಾದಿಗ್ಧಾಯೈ
ಹರ್ಯಶ್ವಾದ್ಯಮರಾರ್ಚಿತಾಯೈ
ಹರಿಕೇಶಸಖ್ಯೈ ನಮಃ
ಹಾದಿವಿದ್ಯಾಯೈ ನಮಃ
ಹಾಲಾಮದಾಲಸಾಯೈ ನಮಃ
ಸಕಾರರೂಪಾಯೈ ನಮಃ
ಸರ್ವಜ್ಞಾಯೈ ನಮಃ
ಸರ್ವೇಶ್ಯೈ ನಮಃ
ಸರ್ವಮಙ್ಗಳಾಯೈ ನಮಃ
ಸರ್ವಕರ್ತ್ರ್ಯೈ ನಮಃ
ಸರ್ವಭರ್ತ್ರ್ಯೈ ನಮಃ
ಸರ್ವಹರ್ತ್ರ್ಯೈ ನಮಃ
ಸನಾತನಾಯೈ ನಮಃ
ಸರ್ವಾನವದ್ಯಾಯೈ ನಮಃ
ಸರ್ವಾಙ್ಗಸುನ್ದರ್ಯೈ ನಮಃ
ಸರ್ವಸಾಕ್ಷಿಣ್ಯೈ ನಮಃ
ಸರ್ವಾತ್ಮಿಕಾಯೈ ನಮಃ
ಸರ್ವಸೌಖ್ಯದಾತ್ರ್ಯೈ ನಮಃ

ಓಂ ಸರ್ವವಿಮೋಹಿನ್ಯೈ ನಮಃ
ಸರ್ವಾಧಾರಾಯೈ ನಮಃ
ಸರ್ವಗತಾಯೈ ನಮಃ
ಸರ್ವಾವಗುಣವರ್ಜಿತಾಯೈ
ಸರ್ವಾರುಣಾಯೈ ನಮಃ
ಸರ್ವಮಾತ್ರೇ ನಮಃ
ಸರ್ವಭೂಷಣಭೂಷಿತಾಯೈ
ಕಕಾರಾರ್ಥಾಯೈ ನಮಃ
ಕಾಲಹನ್ತ್ರ್ಯೈ ನಮಃ
ಕಾಮೇಶ್ಯೈ ನಮಃ
ಕಾಮಿತಾರ್ಥದಾಯೈ ನಮಃ
ಕಾಮಸಂಜೀವಿನ್ಯೈ ನಮಃ
ಕಲ್ಯಾಯೈ ನಮಃ
ಕಠಿನಸ್ತನಮಣ್ಡಲಾಯೈ ನಮಃ
ಕರಭೋರ್ವೈ ನಮಃ
ಕಲಾನಾಥಮುಖ್ಯೈ ನಮಃ
ಕಚಜಿತಾಮ್ಬುದಾಯೈ ನಮಃ
ಕಟಾಕ್ಷಸ್ಯನ್ದಿಕರುಣಾಯೈ ನಮಃ
ಕಪಾಲಿಪ್ರಾಣನಾಯಿಕಾಯೈ
ಕಾರುಣ್ಯವಿಗ್ರಹಾಯೈ ನಮಃ
ಕಾನ್ತಾಯೈ ನಮಃ
ಕಾನ್ತಿಧೂತಜಪಾವಳ್ಯೈ ನಮಃ
ಕಲಾಲಾಪಾಯೈ ನಮಃ
ಕಮ್ಬುಕಣ್ಠ್ಯೈ ನಮಃ
ಕರನಿರ್ಜಿತಪಲ್ಲವಾಯೈ ನಮಃ
ಕಲ್ಪವಲ್ಲೀಸಮಭುಜಾಯೈ ನಮಃ
ಕಸ್ತೂರೀತಿಲಕಾಂಚಿತಾಯೈ
ಹಕಾರಾರ್ಥಾಯೈ ನಮಃ

ಓಂ ಹಂಸಗತ್ಯೈ ನಮಃ
ಹಾಟಕಾಭರಣೋಜ್ಜ್ವಲಾಯೈ
ಹಾರಹಾರಿಕುಚಾಭೋಗಾಯೈ
ಹಾಕಿನ್ಯೈ ನಮಃ
ಹಲ್ಯವರ್ಜಿತಾಯೈ ನಮಃ
ಹರಿತ್ಪತಿಸಮಾರಾಧ್ಯಾಯೈ ನಮಃ
ಹಠಾತ್ಕಾರಹತಾಸುರಾಯೈ ನಮಃ
ಹರ್ಷಪ್ರದಾಯೈ ನಮಃ
ಹವಿರ್ಭೋಕ್ತ್ರ್ಯೈ ನಮಃ
ಹಾರ್ದಸಂತಮಸಾಪಹಾಯೈ
ಹಲ್ಲೀಸಲಾಸ್ಯಸಂತುಷ್ಟಾಯೈ
ಹಂಸಮಂತ್ರಾರ್ಥರೂಪಿಣ್ಯೈ ನಮಃ
ಹಾನೋಪಾದಾನನಿರ್ಮುಕ್ತಾಯೈ
ಹರ್ಷಿಣ್ಯೈ ನಮಃ
ಹರಿಸೋದರ್ಯೈ ನಮಃ
ಹಾಹಾಹೂಹೂಮುಖಸ್ತು-
[ತ್ಯಾಯೈ ನಮಃ
ಹಾನಿವೃದ್ಧಿವಿವರ್ಜಿತಾಯೈ ನಮಃ
ಹಯ್ಯಂಗವೀನಹೃದಯಾಯೈ
ಹರಿಗೋಪಾರುಣಾಂಶುಕಾಯೈ
ಲಕಾರಾಖ್ಯಾಯೈ ನಮಃ
ಲತಾಪೂಜ್ಯಾಯೈ ನಮಃ
ಲಯಸ್ಥಿತ್ಯುದ್ಭವೇಶ್ವರ್ಯೈ ನಮಃ
ಲಾಸ್ಯದರ್ಶನಸಂತುಷ್ಟಾಯೈ
ಲಾಭಾಲಾಭವಿವರ್ಜಿತಾಯೈ
ಲಂಘ್ಯೇತರಾಜ್ಞಾಯೈ ನಮಃ
ಲಾವಣ್ಯಶಾಲಿನ್ಯೈ ನಮಃ
ಲಘುಸಿದ್ಧಿದಾಯೈ ನಮಃ

ಓಂ ಲಾಕ್ಷಾರಸಸವರ್ಣಾಭಾಯೈ
ಲಕ್ಷ್ಮಣಾಗ್ರಜಪೂಜಿತಾಯೈ
ಲಭ್ಯೇತರಸ್ಯೈ ನಮಃ
ಲಬ್ಧಭಕ್ತಿಸುಲಭಾಯೈ ನಮಃ
ಲಾಂಗಲಾಯುಧಾಯೈ ನಮಃ
ಲಗ್ನಚಾಮರಹಸ್ತಶ್ರೀಶಾರದಾ-
[ಪರಿವೀಜಿತಾಯೈ ನಮಃ
ಲಜ್ಜಾಪದಸಮಾರಾಧ್ಯಾಯೈ
ಲಮ್ಪಟಾಯೈ ನಮಃ
ಲಕುಳೇಶ್ವರ್ಯೈ ನಮಃ
ಲಬ್ಧಮಾನಾಯೈ ನಮಃ
ಲಬ್ಧರಸಾಯೈ ನಮಃ
ಲಬ್ಧಸಮ್ಪತ್ಸಮುನ್ನತ್ಯೈ ೨೦೦
ಹ್ರೀಂಕಾರಿಣ್ಯೈ ನಮಃ
ಹ್ರೀಂಕಾರಾದ್ಯಾಯೈ ನಮಃ
ಹ್ರೀಂಮಧ್ಯಾಯೈ ನಮಃ
ಹ್ರೀಂಶಿಖಾಮಣ್ಯೈ ನಮಃ
ಹ್ರೀಂಕಾರಕುಣ್ಡಾಗ್ನಿಶಿಖಾಯೈ
ಹ್ರೀಂಕಾರಶಶಿಚನ್ದ್ರಿಕಾಯೈ
ಹ್ರೀಂಕಾರಭಾಸ್ಕರರುಚ್ಯೈ ನಮಃ
ಹ್ರೀಂಕಾರಾಮ್ಭೋದಚಞ್ಚಲಾಯೈ
ಹ್ರೀಂಕಾರಕನ್ದಾಙ್ಕುರಿಕಾಯೈ
ಹ್ರೀಂಕಾರೈಕಪರಾಯಣಾಯೈ
ಹ್ರೀಂಕಾರದೀರ್ಘಿಕಾಹಂಸ್ಯೈ
ಹ್ರೀಂಕಾರೋದ್ಯಾನಕೇಕಿನ್ಯೈ
ಹ್ರೀಂಕಾರಾರಣ್ಯಹರಿಣ್ಯೈ ನಮಃ
ಹ್ರೀಂಕಾರಾವಾಲವಲ್ಲರ್ಯೈ ನಮಃ
ಹ್ರೀಂಕಾರಪಞ್ಜರಶುಕ್ಯೈ ನಮಃ

ಓಂ ಹ್ರೀಂಕಾರಾಙ್ಗಣದೀಪಿಕಾಯೈ
ಹ್ರೀಂಕಾರಕನ್ದರಾಸಿಂಹ್ಯೈ ನಮಃ
ಹ್ರೀಂಕಾರಾಮ್ಭೋಜಭೃಂಗಿ-
[ಕಾಯೈ ನಮಃ
ಹ್ರೀಂಕಾರಸುಮನೋಮಾಧ್ವ್ಯೈ
ಹ್ರೀಂಕಾರತರುಮಞ್ಜರ್ಯೈ ನಮಃ
ಸಕಾರಾಖ್ಯಾಯೈ ನಮಃ
ಸಮರಸಾಯೈ ನಮಃ
ಸಕಲಾಗಮಸಂಸ್ತುತಾಯೈ ನಮಃ
ಸರ್ವವೇದಾನ್ತತಾತ್ಪರ್ಯಭೂಮ್ಯೈ
ಸದಸದಾಶ್ರಯಾಯೈ ನಮಃ
ಸಕಲಾಯೈ ನಮಃ
ಸಚ್ಚಿದಾನನ್ದಾಯೈ ನಮಃ
ಸಾಧ್ಯಾಯೈ ನಮಃ
ಸದ್ಗತಿದಾಯಿನ್ಯೈ ನಮಃ
ಸನಕಾದಿಮುನಿಧ್ಯೇಯಾಯೈ
ಸದಾಶಿವಕುಟುಮ್ಬಿನ್ಯೈ ನಮಃ
ಸಕಲಾಧಿಷ್ಠಾನರೂಪಾಯೈ ನಮಃ
ಸತ್ಯರೂಪಾಯೈ ನಮಃ
ಸಮಾಕೃತ್ಯೈ ನಮಃ
ಸರ್ವಪ್ರಪಞ್ಚನಿರ್ಮಾತ್ರ್ಯೈ
ಸಮಾನಾಧಿಕವರ್ಜಿತಾಯೈ ನಮಃ
ಸರ್ವೋತ್ತುಂಗಾಯೈ ನಮಃ
ಸಙ್ಗಹೀನಾಯೈ ನಮಃ
ಸದ್ಗುಣಾಯೈ ನಮಃ
ಸಕಲೇಷ್ಟದಾಯೈ ನಮಃ
ಕಕಾರಿಣ್ಯೈ ನಮಃ
ಕಾವ್ಯಲೋಲಾಯೈ ನಮಃ

ಓಂ ಕಾಮೇಶ್ವರಮನೋಹರಾಯೈ
ಕಾಮೇಶ್ವರಪ್ರಾಣನಾಡ್ಯೈ ನಮಃ
ಕಾಮೇಶೋತ್ಸಙ್ಗವಾಸಿನ್ಯೈ ನಮಃ
ಕಾಮೇಶ್ವರಾಲಿಂಗಿತಾಂಗ್ಯೈ
ಕಾಮೇಶ್ವರಸುಖಪ್ರದಾಯೈ
ಕಾಮೇಶ್ವರಪ್ರಣಯಿನ್ಯೈ ನಮಃ
ಕಾಮೇಶ್ವರವಿಲಾಸಿನ್ಯೈ ನಮಃ
ಕಾಮೇಶ್ವರತಪಸ್ಸಿದ್ಧ್ಯೈ ನಮಃ
ಕಾಮೇಶ್ವರಮನಃಪ್ರಿಯಾಯೈ
ಕಾಮೇಶ್ವರಪ್ರಾಣನಾಥಾಯೈ
ಕಾಮೇಶ್ವರವಿಮೋಹಿನ್ಯೈ ನಮಃ
ಕಾಮೇಶ್ವರಬ್ರಹ್ಮವಿದ್ಯಾಯೈ
ಕಾಮೇಶ್ವರಗೃಹೇಶ್ವರ್ಯೈ ನಮಃ
ಕಾಮೇಶ್ವರಾಹ್ಲಾದಕರ್ಯೈ ನಮಃ
ಕಾಮೇಶ್ವರಮಹೇಶ್ವರ್ಯೈ ನಮಃ
ಕಾಮೇಶ್ವರ್ಯೈ ನಮಃ
ಕಾಮಕೋಟಿನಿಲಯಾಯೈ ನಮಃ
ಕಾಂಕ್ಷಿತಾರ್ಥದಾಯೈ ನಮಃ
ಲಕಾರಿಣ್ಯೈ ನಮಃ
ಲಬ್ಧರೂಪಾಯೈ ನಮಃ
ಲಬ್ಧಧಿಯೇ ನಮಃ
ಲಬ್ಧವಾಂಛಿತಾಯೈ ನಮಃ
ಲಬ್ಧಪಾಪಮನೋದೂರಾಯೈ
ಲಬ್ಧಾಹಂಕಾರದುರ್ಗಮಾಯೈ
ಲಬ್ಧಶಕ್ತ್ಯೈ ನಮಃ
ಲಬ್ಧದೇಹಾಯೈ ನಮಃ
ಲಬ್ಧೈಶ್ವರ್ಯಸಮುನ್ನತ್ಯೈ ನಮಃ
ಲಬ್ಧವೃದ್ಧ್ಯೈ ನಮಃ

ಓಂ ಲಬ್ಧಲೀಲಾಯೈ ನಮಃ
ಲಬ್ಧಯೌವನಶಾಲಿನ್ಯೈ ನಮಃ
ಲಬ್ಧಾತಿಶಯಸರ್ವಾಂಗಸೌನ್ದ-
[ರ್ಯಾಯೈ ನಮಃ
ಲಬ್ಧವಿಭ್ರಮಾಯೈ ನಮಃ
ಲಬ್ಧರಾಗಾಯೈ ನಮಃ
ಲಬ್ಧಪತ್ಯೈ ನಮಃ
ಲಬ್ಧನಾನಾಗಮಸ್ಥಿತ್ಯೈ ನಮಃ
ಲಬ್ಧಭೋಗಾಯೈ ನಮಃ
ಲಬ್ಧಸುಖಾಯೈ ನಮಃ
ಲಬ್ಧಹರ್ಷಾಭಿಪೂರಿತಾಯೈ
ಹ್ರೀಂಕಾರಮೂರ್ತ್ಯೈ ನಮಃ
ಹ್ರೀಂಕಾರಸೌಧಶೃಙ್ಗಕಪೋತಿ-
[ಕಾಯೈ ನಮಃ
ಹ್ರೀಂಕಾರದುಗ್ಧಾಬ್ಧಿಸುಧಾಯೈ
ಹ್ರೀಂಕಾರಕಮಲೇನ್ದಿರಾಯೈ
ಹ್ರೀಂಕಾರಮಣಿದೀಪಾರ್ಚಿಷೇ
ಹ್ರೀಂಕಾರತರುಶಾರಿಕಾಯೈ

ಓಂ ಹ್ರೀಂಕಾರಪೇಟಕಮಣ್ಯೈ
ಹ್ರೀಂಕಾರಾದರ್ಶಬಿಮ್ಬಿತಾಯೈ
ಹ್ರೀಂಕಾರಕೋಶಾಸಿಲತಾಯೈ
ಹ್ರೀಂಕಾರಾಸ್ಥಾನನರ್ತಕ್ಯೈ
ಹ್ರೀಂಕಾರಶುಕ್ತಿಕಾಮುಕ್ತಾ-
[ಮಣ್ಯೈ ನಮಃ
ಹ್ರೀಂಕಾರಬೋಧಿತಾಯೈ ನಮಃ
ಹ್ರೀಂಕಾರಮಯಸೌವರ್ಣಸ್ತ-
[ಮ್ಭವಿದ್ರುಮಪುತ್ರಿಕಾಯೈ ನಮಃ
ಹ್ರೀಂಕಾರವೇದೋಪನಿಷದೇ
ಹ್ರೀಂಕಾರಾಧ್ವರದಕ್ಷಿಣಾಯೈ
ಹ್ರೀಂಕಾರನನ್ದನಾರಾಮನವ-
[ಕಲ್ಪಕವಲ್ಲರ್ಯೈ ನಮಃ
ಹ್ರೀಂಕಾರಹಿಮವದ್ಗಂಗಾಯೈ
ಹ್ರೀಂಕಾರಾರ್ಣವಕೌಸ್ತು-
ಭಾಯೈ ನಮಃ
ಹ್ರೀಂಕಾರಮನ್ತ್ರಸರ್ವಸ್ವಾಯೈ
ಹ್ರೀಂಕಾರಪರಸೌಖ್ಯದಾಯೈ

ಇತಿ ಶ್ರೀಲಲಿತಾತ್ರಿಶತೀನಾಮಾವಳಿಸ್ಸಂಪೂರ್ಣಾ.

---

# ಶ್ರೀಲಲಿತಾನಾಮ ತ್ರಿಶತೀಸ್ತೋತ್ರಮ್

ಅಸ್ಯ ಶ್ರೀಲಲಿತಾತ್ರಿಶತೀಸ್ತೋತ್ರಮಹಾಮನ್ತ್ರಸ್ಯ | ಭಗವಾನ್ ಹಯಗ್ರೀವ ಋಷಿಃ | ಅನುಷ್ಟುಪ್ ಛನ್ದಃ | ಶ್ರೀಲಲಿತಾಮಹೇಶ್ವರೀ ದೇವತಾ | ಚತುರ್ವಿಧಫಲಪುರುಷಾರ್ಥಸಿದ್ಧ್ಯರ್ಥೇ ಜಪೇ ವಿನಿಯೋಗಃ | (ಅಙ್ಗನ್ಯಾಸಾದಿಕಂ ಯಥೋಪದೇಶಮವಗನ್ತವ್ಯಮ್) ಧ್ಯಾನಮ್ :—

ಅತಿಮಧುರಚಾಪಹಸ್ತಾಮಪರಿಮಿತಾಮೋದಬಾಣಸೌಭಾಗ್ಯಾಮ್
ಅರುಣಾಮತಿಶಯಕರುಣಾಮಭಿನವಕುಳಸುನ್ದರೀಂ ವನ್ದೇ ||

ಕಕಾರರೂಪಾ ಕಲ್ಯಾಣೀ ಕಲ್ಯಾಣಗುಣಶಾಲಿನೀ |
ಕಲ್ಯಾಣಶೈಲನಿಲಯಾ ಕಮನೀಯಾ ಕಲಾವತೀ || ೧ ||
ಕಮಲಾಕ್ಷೀ ಕಲ್ಮಷಘ್ನೀ ಕರುಣಾಮೃತಸಾಗರಾ |
ಕದಮ್ಬಕಾನನಾವಾಸಾ ಕದಮ್ಬಕುಸುಮಪ್ರಿಯಾ || ೨ ||
ಕನ್ದರ್ಪವಿದ್ಯಾ ಕನ್ದರ್ಪಜನಕಾಪಾಙ್ಗವೀಕ್ಷಣಾ |
ಕರ್ಪೂರವೀಟೀಸೌರಭ್ಯಕಲ್ಲೋಲಿತಕಕುಪ್ತಟಾ || ೩ ||
ಕಲಿದೋಷಹರಾ ಕಞ್ಜಲೋಚನಾ ಕಮ್ರವಿಗ್ರಹಾ |
ಕರ್ಮಾದಿಸಾಕ್ಷಿಣೀ ಕಾರಯಿತ್ರೀ ಕರ್ಮಫಲಪ್ರದಾ || ೪ ||
ಏಕಾರರೂಪಾ ಚೈಕಾಕ್ಷರ್ಯೇಕಾನೇಕಾಕ್ಷರಾಕೃತಿಃ |
ಏತತ್ತದಿತ್ಯನಿರ್ದೇಶ್ಯಾ ಚೈಕಾನನ್ದಚಿದಾಕೃತಿಃ || ೫ ||
ಏವಮಿತ್ಯಾಗಮಾಬೋಧ್ಯಾ ಚೈಕಭಕ್ತಿಮದರ್ಚಿತಾ |
ಏಕಾಗ್ರಚಿತ್ತನಿರ್ಧ್ಯಾತಾ ಚೈಷಣಾರಹಿತಾದೃತಾ || ೬ ||
ಏಲಾಸುಗನ್ಧಿಚಿಕುರಾ ಚೈನಃಕೂಟವಿನಾಶಿನೀ |
ಏಕಭೋಗಾ ಚೈಕರಸಾ ಚೈಕೈಶ್ವರ್ಯಪ್ರದಾಯಿನೀ || ೭ ||
ಏಕಾತಪತ್ರಸಾಮ್ರಾಜ್ಯಪ್ರದಾ ಚೈಕಾನ್ತಪೂಜಿತಾ
ಏಧಮಾನಪ್ರಭಾ ಚೈಜದನೇಕಜಗದೀಶ್ವರೀ || ೮ ||
ಏಕವೀರಾದಿಸಂಸೇವ್ಯಾ ಚೈಕಪ್ರಾಭವಶಾಲಿನೀ |
ಈಕಾರರೂಪಾ ಚೇಶಿತ್ರೀ ಚೇಪ್ಸಿತಾರ್ಥಪ್ರದಾಯಿನೀ || ೯ ||
ಈದೃಗಿತ್ಯವಿನಿರ್ದೇಶ್ಯಾ ಚೇಶ್ವರತ್ವವಿಧಾಯಿನೀ |
ಈಶಾನಾದಿಬ್ರಹ್ಮಮಯೀ ಚೇಶಿತ್ವಾದ್ಯಷ್ಟಸಿದ್ಧಿದಾ || ೧೦ ||
ಈಕ್ಷಿತ್ರೀಕ್ಷಣಸೃಷ್ಟಾಣ್ಡಕೋಟಿರೀಶ್ವರವಲ್ಲಭಾ
ಈಡಿತಾ ಚೇಶ್ವರಾರ್ಧಾಙ್ಗಶರೀರೇಶಾಧಿದೇವತಾ || ೧೧ ||
ಈಶ್ವರಪ್ರೇರಣಕರೀ ಚೇಶತಾಣ್ಡವಸಾಕ್ಷಿಣೀ |
ಈಶ್ವರೋತ್ಸಙ್ಗನಿಲಯಾ ಚೇತಿಬಾಧಾವಿನಾಶಿನೀ || ೧೨ ||

ಈಹಾವಿರಹಿತಾ ಈಶಶಕ್ತಿರೀಷತ್ಸ್ಮಿತಾನನಾ |
ಲಕಾರರೂಪಾ ಲಲಿತಾ ಲಕ್ಷ್ಮೀವಾಣೀನಿಷೇವಿತಾ || ೧೩ ||
ಲಾಕಿನೀ ಲಲನಾರೂಪಾ ಲಸದ್ದಾಡಿಮಪಾಟಲಾ |
ಲಲನ್ತಿಕಾಲಸತ್ಫಾಲಾ ಲಲಾಟನಯನಾರ್ಚಿತಾ || ೧೪ ||
ಲಕ್ಷಣೋಜ್ಜ್ವಲದಿವ್ಯಾಙ್ಗೀ ಲಕ್ಷಕೋಟ್ಯಣ್ಡನಾಯಿಕಾ |
ಲಕ್ಷ್ಯಾರ್ಥಾ ಲಕ್ಷಣಾಗಮ್ಯಾ ಲಬ್ಧಕಾಮಾ ಲತಾತನುಃ || ೧೫ ||
ಲಲಾಮರಾಜದಲಿಕಾ ಲಮ್ಬಿಮುಕ್ತಾಲತಾಞ್ಚಿತಾ |
ಲಮ್ಬೋದರಪ್ರಸೂರ್ಲಭ್ಯಾ ಲಜ್ಜಾಢ್ಯಾ ಲಯವರ್ಜಿತಾ || ೧೬ ||
ಹ್ರೀಂಕಾರರೂಪಾ ಹ್ರೀಂಕಾರನಿಲಯಾ ಹ್ರೀಂಪದಪ್ರಿಯಾ |
ಹ್ರೀಂಕಾರಬೀಜಾ ಹ್ರೀಂಕಾರಮನ್ತ್ರಾ ಹ್ರೀಂಕಾರಲಕ್ಷಣಾ || ೧೭ ||
ಹ್ರೀಂಕಾರಜಪಸುಪ್ರೀತಾ ಹ್ರೀಂಮತೀ ಹ್ರೀಂವಿಭೂಷಣಾ |
ಹ್ರೀಂಶೀಲಾ ಹ್ರೀಂಪದಾರಾಧ್ಯಾ ಹ್ರೀಂಗರ್ಭಾ ಹ್ರೀಂಪದಾಭಿಧಾ || ೧೮ ||
ಹ್ರೀಂಕಾರವಾಚ್ಯಾ ಹ್ರೀಂಕಾರಪೂಜ್ಯಾ ಹ್ರೀಂಕಾರಪೀಠಿಕಾ |
ಹ್ರೀಂಕಾರವೇದ್ಯಾ ಹ್ರೀಂಕಾರಚಿನ್ತ್ಯಾ ಹ್ರೀಂ ಹ್ರೀಂಶರೀರಿಣೀ || ೧೯ ||
ಹಕಾರರೂಪಾ ಹಲಧೃತ್ಪೂಜಿತಾ ಹರಿಣೇಕ್ಷಣಾ |
ಹರಪ್ರಿಯಾ ಹರಾರಾಧ್ಯಾ ಹರಿಬ್ರಹ್ಮೇನ್ದ್ರವನ್ದಿತಾ || ೨೦ ||
ಹಯಾರೂಢಾಸೇವಿತಾಙ್ಘ್ರಿರ್ಹಯಮೇಧಸಮರ್ಚಿತಾ |
ಹರ್ಯಕ್ಷವಾಹನಾ ಹಂಸವಾಹನಾ ಹತದಾನವಾ || ೨೧ ||
ಹತ್ಯಾದಿಪಾಪಶಮನೀ ಹರಿದಶ್ವಾದಿಸೇವಿತಾ |
ಹಸ್ತಿಕುಮ್ಭೋತ್ತುಙ್ಗಕುಚಾ ಹಸ್ತಿಕೃತ್ತಿಪ್ರಿಯಾಙ್ಗನಾ || ೨೨ ||
ಹರಿದ್ರಾಕುಙ್ಕುಮಾದಿಗ್ಧಾ ಹರ್ಯಶ್ವಾದ್ಯಮರಾರ್ಚಿತಾ |
ಹರಿಕೇಶಸಖೀ ಹಾದಿವಿದ್ಯಾ ಹಾಲಾಮದಾಲಸಾ || ೨೩ ||
ಸಕಾರರೂಪಾ ಸರ್ವಜ್ಞಾ ಸರ್ವೇಶೀ ಸರ್ವಮಙ್ಗಳಾ |
ಸರ್ವಕರ್ತ್ರೀ ಸರ್ವಭರ್ತ್ರೀ ಸರ್ವಹನ್ತ್ರೀ ಸನಾತನಾ || ೨೪ ||
ಸರ್ವಾನವದ್ಯಾ ಸರ್ವಾಙ್ಗಸುನ್ದರೀ ಸರ್ವಸಾಕ್ಷಿಣೀ |
ಸರ್ವಾತ್ಮಿಕಾ ಸರ್ವಸೌಖ್ಯದಾತ್ರೀ ಸರ್ವವಿಮೋಹಿನೀ || ೨೫ ||
ಸರ್ವಾಧಾರಾ ಸರ್ವಗತಾ ಸರ್ವಾವಗುಣವರ್ಜಿತಾ |
ಸರ್ವಾರುಣಾ ಸರ್ವಮಾತಾ ಸರ್ವಭೂಷಣಭೂಷಿತಾ || ೨೬ ||
ಕಕಾರಾರ್ಥಾ ಕಾಲಹನ್ತ್ರೀ ಕಾಮೇಶೀ ಕಾಮಿತಾರ್ಥದಾ |
ಕಾಮಸಂಜೀವಿನೀ ಕಲ್ಯಾ ಕಠಿನಸ್ತನಮಣ್ಡಲಾ || ೨೭ ||
ಕರಭೋರುಃ ಕಲಾನಾಥಮುಖೀ ಕಚಜಿತಾಮ್ಬುದಾ |
ಕಟಾಕ್ಷಸ್ಯನ್ದಿಕರುಣಾ ಕಪಾಲಿಪ್ರಾಣನಾಯಿಕಾ || ೨೮ ||

ಕಾರುಣ್ಯವಿಗ್ರಹಾ ಕಾನ್ತಾ ಕಾನ್ತಿಧೂತಜಪಾವಳಿಃ |
ಕಲಾಲಾಪಾ ಕಮ್ಬುಕಣ್ಠೀ ಕರನಿರ್ಜಿತಪಲ್ಲವಾ ॥ ೨೯ ॥
ಕಲ್ಪವಲ್ಲೀಸಮಭುಜಾ ಕಸ್ತೂರೀತಿಲಕಾಞ್ಚಿತಾ |
ಹಕಾರಾರ್ಥಾ ಹಂಸಗತಿಃ ಹಾಟಕಾಭರಣೋಜ್ಜ್ವಲಾ ॥ ೩೦ ॥
ಹಾರಹಾರಿಕುಚಾಭೋಗಾ ಹಾಕಿನೀ ಹಲ್ಯವರ್ಜಿತಾ |
ಹರಿತ್ಪತಿಸಮಾರಾಧ್ಯಾ ಹಠಾತ್ಕಾರಹತಾಸುರಾ ॥ ೩೧ ॥
ಹರ್ಷಪ್ರದಾ ಹವಿರ್ಭೋಕ್ತ್ರೀ ಹಾರ್ದಸಂತಮಸಾಪಹಾ |
ಹಲ್ಲೀಸಲಾಸ್ಯಸಂತುಷ್ಟಾ ಹಂಸಮನ್ತ್ರಾರ್ಥರೂಪಿಣೀ ॥ ೩೨ ॥
ಹಾನೋಪಾದಾನನಿರ್ಮುಕ್ತಾ ಹರ್ಷಿಣೀ ಹರಿಸೋದರೀ |
ಹಾಹಾಹೂಹೂಮುಖಸ್ತುತ್ಯಾ ಹಾನಿವೃದ್ಧಿವಿವರ್ಜಿತಾ ॥ ೩೩ ॥
ಹಯ್ಯಂಗವೀನಹೃದಯಾ ಹರಿಗೋಪಾರುಣಾಂಶುಕಾ |
ಲಕಾರಾಖ್ಯಾ ಲತಾಪೂಜ್ಯಾ ಲಯಸ್ಥಿತ್ಯುದ್ಭವೇಶ್ವರೀ ॥ ೩೪ ॥
ಲಾಸ್ಯದರ್ಶನಸಂತುಷ್ಟಾ ಲಾಭಾಲಾಭವಿವರ್ಜಿತಾ |
ಲಂಘ್ಯೇತರಾಜ್ಞಾ ಲಾವಣ್ಯಶಾಲಿನೀ ಲಘುಸಿದ್ಧಿದಾ ॥ ೩೫ ॥
ಲಾಕ್ಷಾರಸಸವರ್ಣಾಭಾ ಲಕ್ಷ್ಮಣಾಗ್ರಜಪೂಜಿತಾ |
ಲಭ್ಯೇತರಾ ಲಬ್ಧಭಕ್ತಿಸುಲಭಾ ಲಾಙ್ಗಲಾಯುಧಾ ॥ ೩೬ ॥
ಲಗ್ನಚಾಮರಹಸ್ತಶ್ರೀಶಾರದಾಪರಿವೀಜಿತಾ |
ಲಜ್ಜಾಪದಸಮಾರಾಧ್ಯಾ ಲಮ್ಪಟಾ ಲಕುಳೇಶ್ವರೀ ॥ ೩೭ ॥
ಲಬ್ಧಮಾನಾ ಲಬ್ಧರಸಾ ಲಬ್ಧಸಂಪತ್ಸಮುನ್ನತಿಃ |
ಹ್ರೀಂಕಾರಿಣೀ ಹ್ರೀಂಕಾರಾದ್ಯಾ ಹ್ರೀಂಮಧ್ಯಾ ಹ್ರೀಂಶಿಖಾಮಣಿಃ ॥ ೩೮ ॥
ಹ್ರೀಂಕಾರಕುಣ್ಡಾಗ್ನಿಶಿಖಾ ಹ್ರೀಂಕಾರಶಶಿಚನ್ದ್ರಿಕಾ |
ಹ್ರೀಂಕಾರಭಾಸ್ಕರರುಚಿಃ ಹ್ರೀಂಕಾರಾಮ್ಭೋದಚಞ್ಚಲಾ ॥ ೩೯ ॥
ಹ್ರೀಂಕಾರಕನ್ದಾಙ್ಕುರಿಕಾ ಹ್ರೀಂಕಾರೈಕಪರಾಯಣಾ |
ಹ್ರೀಂಕಾರದೀರ್ಘಿಕಾಹಂಸೀ ಹ್ರೀಂಕಾರೋದ್ಯಾನಕೇಕಿನೀ ॥ ೪೦ ॥
ಹ್ರೀಂಕಾರಾರಣ್ಯಹರಿಣೀ ಹ್ರೀಂಕಾರಾವಾಲವಲ್ಲರೀ |
ಹ್ರೀಂಕಾರಪಞ್ಜರಶುಕೀ ಹ್ರೀಂಕಾರಾಙ್ಗಣದೀಪಿಕಾ ॥ ೪೧ ॥
ಹ್ರೀಂಕಾರಕನ್ದರಾಸಿಂಹೀ ಹ್ರೀಂಕಾರಾಮ್ಭೋಜಭೃಙ್ಗಿಕಾ |
ಹ್ರೀಂಕಾರಸುಮನೋಮಾಧ್ವೀ ಹ್ರೀಂಕಾರತರುಮಞ್ಜರೀ ॥ ೪೨ ॥
ಸಕಾರಾಖ್ಯಾ ಸಮರಸಾ ಸಕಲಾಗಮಸಂಸ್ತುತಾ |
ಸರ್ವವೇದಾನ್ತತಾತ್ಪರ್ಯಭೂಮಿಸ್ಸದಸದಾಶ್ರಯಾ ॥ ೪೩ ॥
ಸಕಲಾ ಸಚ್ಚಿದಾನನ್ದಾ ಸಾಧ್ವೀ ಸದ್ಗತಿದಾಯಿನೀ |
ಸನಕಾದಿಮುನಿಧ್ಯೇಯಾ ಸದಾಶಿವಕುಟುಮ್ಬಿನೀ ॥ ೪೪ ॥

ಸಕಲಾಧಿಷ್ಠಾನರೂಪಾ ಸತ್ಯರೂಪಾ ಸಮಾಕೃತಿಃ ।
ಸರ್ವಪ್ರಪಞ್ಚನಿರ್ಮಾತ್ರೀ ಸಮಾನಾಧಿಕವರ್ಜಿತಾ ॥ ೪೫ ॥
ಸರ್ವೋತ್ತುಂಗಾ ಸಙ್ಗಹೀನಾ ಸದ್ಗುಣಾ ಸಕಲೇಷ್ಟದಾ ।
ಕಕಾರಿಣೀ ಕಾವ್ಯಲೋಲಾ ಕಾಮೇಶ್ವರಮನೋಹರಾ ॥ ೪೬ ॥
ಕಾಮೇಶ್ವರಪ್ರಾಣನಾಡೀ ಕಾಮೇಶೋತ್ಸಙ್ಗವಾಸಿನೀ ।
ಕಾಮೇಶ್ವರಾಲಿಙ್ಗಿತಾಙ್ಗೀ ಕಾಮೇಶ್ವರಸುಖಪ್ರದಾ ॥ ೪೭ ॥
ಕಾಮೇಶ್ವರಪ್ರಣಯಿನೀ ಕಾಮೇಶ್ವರವಿಲಾಸಿನೀ ।
ಕಾಮೇಶ್ವರತಪಸ್ಸಿದ್ಧಿಃ ಕಾಮೇಶ್ವರಮನಃಪ್ರಿಯಾ ॥ ೪೮ ॥
ಕಾಮೇಶ್ವರಪ್ರಾಣನಾಥಾ ಕಾಮೇಶ್ವರವಿಮೋಹಿನೀ ।
ಕಾಮೇಶ್ವರಬ್ರಹ್ಮವಿದ್ಯಾ ಕಾಮೇಶ್ವರಗೃಹೇಶ್ವರೀ ॥ ೪೯ ॥
ಕಾಮೇಶ್ವರಾಹ್ಲಾದಕರೀ ಕಾಮೇಶ್ವರಮಹೇಶ್ವರೀ ।
ಕಾಮೇಶ್ವರೀ ಕಾಮಕೋಟಿನಿಲಯಾ ಕಾಂಕ್ಷಿತಾರ್ಥದಾ ॥ ೫೦ ॥
ಲಕಾರಿಣೀ ಲಬ್ಧರೂಪಾ ಲಬ್ಧಧೀಃ ಲಬ್ಧವಾಂಛಿತಾ ।
ಲಬ್ಧಪಾಪಮನೋದೂರಾ ಲಬ್ಧಾಹಂಕಾರದುರ್ಗಮಾ ॥ ೫೧ ॥
ಲಬ್ಧಶಕ್ತಿರ್ಲಬ್ಧದೇಹಾ ಲಬ್ಧೈಶ್ವರ್ಯಸಮುನ್ನತಿಃ ।
ಲಬ್ಧವೃದ್ಧಿರ್ಲಬ್ಧಲೀಲಾ ಲಬ್ಧಯೌವನಶಾಲಿನೀ ॥ ೫೨ ॥
ಲಬ್ಧಾತಿಶಯಸರ್ವಾಙ್ಗಸೌನ್ದರ್ಯಾ ಲಬ್ಧವಿಭ್ರಮಾ ।
ಲಬ್ಧರಾಗಾ ಲಬ್ಧಪತಿರ್ಲಬ್ಧನಾನಾಗಮಸ್ಥಿತಿಃ ॥ ೫೩ ॥
ಲಬ್ಧಭೋಗಾ ಲಬ್ಧಸುಖಾ ಲಬ್ಧಹರ್ಷಾಭಿಪೂರಿತಾ ।
ಹ್ರೀಂಕಾರಮೂರ್ತಿರ್ಹ್ರೀಂಕಾರಸೌಧಶೃಙ್ಗಕಪೋತಿಕಾ ॥ ೫೪ ॥
ಹ್ರೀಂಕಾರದುಗ್ಧಾಬ್ಧಿಸುಧಾ ಹ್ರೀಂಕಾರಕಮಲೇನ್ದಿರಾ ।
ಹ್ರೀಂಕಾರಮಣಿದೀಪಾರ್ಚಿಃ ಹ್ರೀಂಕಾರತರುಶಾರಿಕಾ ॥ ೫೫ ॥
ಹ್ರೀಂಕಾರಪೇಟಕಮಣಿಃ ಹ್ರೀಂಕಾರಾದರ್ಶಬಿಮ್ಬಿತಾ ।
ಹ್ರೀಂಕಾರಕೋಶಾಸಿಲತಾ ಹ್ರೀಂಕಾರಾಸ್ಥಾನನರ್ತಕೀ ॥ ೫೬ ॥
ಹ್ರೀಂಕಾರಶುಕ್ತಿಕಾಮುಕ್ತಾಮಣಿರ್ಹ್ರೀಂಕಾರಬೋಧಿತಾ ।
ಹ್ರೀಂಕಾರಮಯಸೌವರ್ಣಸ್ತಮ್ಭವಿದ್ರುಮಪುತ್ರಿಕಾ ॥ ೫೭ ॥
ಹ್ರೀಂಕಾರವೇದೋಪನಿಷದ್ಧ್ರೀಂಕಾರಾಧ್ವರದಕ್ಷಿಣಾ ।
ಹ್ರೀಂಕಾರನನ್ದನಾರಾಮನವಕಲ್ಪಕವಲ್ಲರೀ ॥ ೫೮ ॥
ಹ್ರೀಂಕಾರಹಿಮವದ್ಗಂಗಾ ಹ್ರೀಂಕಾರಾರ್ಣವಕೌಸ್ತುಭಾ ।
ಹ್ರೀಂಕಾರಮನ್ತ್ರಸರ್ವಸ್ವಾ ಹ್ರೀಂಕಾರಪರಸೌಖ್ಯದಾ ॥ ೫೯ ॥

---

## ಶ್ರೀಲಲಿತಾ ಸಹಸ್ರನಾಮದ ಪೂರ್ವ ಮತ್ತು ಉತ್ತರ ಪೀಠಿಕೆಗಳ

## ತಾತ್ಪರ್ಯ

ಅಗಸ್ತ್ಯಮುನಿಯಿಂತೆಂದನು :—ಮಹಾ ಬುದ್ಧಿಶಾಲಿಯೂ, ಸಕಲ ಶಾಸ್ತ್ರ ವಿಶಾರದನೂ ಆದ ಎಲೆ ಹಯಗ್ರೀವಸ್ವಾಮಿಯೆ! ನೀನು ಅತ್ಯದ್ಭುತವಾದ ಶ್ರೀಲಲಿತಾದೇವಿಯ ಚರಿತ್ರೆಯನ್ನು ನಿರೂಪಿಸಿದೆ. ಮೊದಲು ಆ ದೇವಿಯ ಅವತಾರವನ್ನೂ; ಬಳಿಕ ಪಟ್ಟಾಭಿಷೇಕವನ್ನೂ, ಭಂಡಾಸುರವಧೆಯನ್ನೂ ವಿಸ್ತಾರವಾಗಿ ಹೇಳಿದೆ. ಮಹಾವೈಭವವುಳ್ಳ ಶ್ರೀನಗರವನ್ನು ವರ್ಣಿಸಿದೆ. ಶ್ರೀಪಂಚದಶಾಕ್ಷರಿಯ ಮಹಿಮೆಯನ್ನೂ ವಿವರಿಸಿದೆ. ನ್ಯಾಸಖಂಡದಲ್ಲಿ ಷೋಢಾನ್ಯಾಸ ಮುಂತಾದ ನ್ಯಾಸಂಗಳನ್ನೂ ಪೂಜಾಖಂಡದಲ್ಲಿ ಅಂತರ್ಯಾಗ ಬಹಿರ್ಯಾಗ ಮಹಾ ಯಾಗಕ್ರಮಗಳನ್ನೂ, ಪುರಶ್ಚರಣಖಂಡದಲ್ಲಿ ಜಪಲಕ್ಷಣವನ್ನೂ, ಹೋಮಖಂಡದಲ್ಲಿ ಹೋಮದ್ರವ್ಯವಿಧಿಕ್ರಮವನ್ನೂ, ರಹಸ್ಯಖಂಡದಲ್ಲಿ ಶ್ರೀಚಕ್ರದ ಮತ್ತು ಪಂಚದಶಿಯ ಮತ್ತು ತ್ರಿಪುರಸುಂದರಿಯ, ಮತ್ತು ಗುರುಶಿಷ್ಯರ ಪರಸ್ಪರತಾದಾತ್ಮ್ಯವನ್ನೂ, ಸ್ತೋತ್ರಖಂಡದಲ್ಲಿ ಹಲವು ತೆರದ ಸ್ತೋತ್ರಗಳನ್ನೂ, ಮಂತ್ರಿಣೀದಂಡಿನೀದೇವಿಯರ ಸಹಸ್ರನಾಮಗಳನ್ನೂ ಹೇಳಿದೆ. ಆದರೆ ಶ್ರೀಲಲಿತಾದೇವಿಯ ಸಹಸ್ರನಾಮವನ್ನು ಹೇಳಲಿಲ್ಲ. ಎಲೆ ದಯಾನಿಧಿಯಾದ ಹಯಗ್ರೀವನೆ! ಆ ವಿಷಯದಲ್ಲಿ ನನಗೆ ಸಂಶಯವುಂಟಾಗಿರುವುದು. ಅದನ್ನು ನೀನು ಮರೆತೆಯೋ! ಅಥವಾ ತಿಳಿದೂ ಉಪೇಕ್ಷಿಸಿದೆಯೋ! ಅಥವಾ ಸಹಸ್ರನಾಮವನ್ನು ಕೇಳಲು ನನಗೆ ಯೋಗ್ಯತೆಯಿಲ್ಲವೋ! ಏತಕ್ಕೆ ನೀನು ಹೇಳಲಿಲ್ಲ? ಅದಕ್ಕೆ ಕಾರಣವೇನು? ನನಗದನ್ನು ಹೇಳಬೇಕು.

ಈ ರೀತಿಯಾಗಿ ಅಗಸ್ತ್ಯಮುನಿಯಿಂದ ಪ್ರಾರ್ಥಿಸಲ್ಪಟ್ಟ ಹಯಗ್ರೀವಸ್ವಾಮಿಯು ಸಂತೋಷಗೊಂಡು ಆತನಂ ಕುರಿತು ಹೇಳಿದ್ದೇನೆಂದರೆ:—

ಲೋಪಾಮುದ್ರಾಪತಿಯಾದ ಅಗಸ್ತ್ಯಮುನಿಯೆ! ಸಾವಧಾನಚಿತ್ತನಾಗಿ ಕೇಳು. ಸಹಸ್ರನಾಮವನ್ನು ಏತಕ್ಕೆ ಹೇಳಲಿಲ್ಲವೋ ಅದರ ಕಾರಣವನ್ನು ನಿನಗೆ ಹೇಳುವೆನು. ಇದು ರಹಸ್ಯವೆಂದರಿತು ನಾನು ನಿನಗೆ ಹೇಳದಿದ್ದೆನಲ್ಲದೆ ಮತ್ತೆ ಬೇರೆಯಿಲ್ಲ. ಪುನಃ ನೀನು ಭಕ್ತಿಯಿಂದ ಪ್ರಾರ್ಥಿಸಿಕೊಂಡಿದ್ದರಿಂದ ನಿನಗೆ ಅದನ್ನು ಹೇಳುವೆನು.

ಗುರುವು ರಹಸ್ಯವಾದುದನ್ನು ಭಕ್ತಿಯುಳ್ಳ ಶಿಷ್ಯನಿಗೆ ಹೇಳಬೇಕು. ಭಕ್ತನಲ್ಲದವನಿಗೆ ಎಂದಿಗೂ ಉಪದೇಶಿಸಬಾರದು. ಶಠನೆನಿಸಿದವನಿಗೂ, ದುಷ್ಟನಿಗೂ ನಂಬುಗೆಯಿಲ್ಲದವನಿಗೂ ಎಂದಿಗೂ ಹೇಳಬಾರದು. ತತ್ಕಾಲದಲ್ಲಿಯೇ ಸಿದ್ಧಿಕರವಾದ ಸಹಸ್ರನಾಮವನ್ನು ಶ್ರೀದೇವಿಯಲ್ಲಿ ಭಕ್ತಿಯುಳ್ಳವನೂ, ಶ್ರೀವಿದ್ಯೆಯನ್ನು ಗುರುಮುಖದಿಂದ ತಿಳಿದವನೂ, ಉಪಾಸಕನೂ, ಶುದ್ಧನೂ ಆದವನಿಗೆ ಉಪದೇಶಿಸಬೇಕು. ಆ ಅರವತ್ತುನಾಲ್ಕು ಪುರಾಣಗಳಲ್ಲಿ ಲಲಿತಾದೇವಿಯ ಈ ಸಹಸ್ರನಾಮವು ಮುಖ್ಯವಾದುದು. ಮಂತ್ರಗಳಲ್ಲಿ ಶ್ರೀವಿದ್ಯೆಯಂತೆಯೂ, ಅದರಲ್ಲಿ ಪಂಚದಶಿಯಂತೆಯೂ, ನಗಂಗಳಲ್ಲಿ ಶ್ರೀನಗರದಂತೆಯೂ, ಶಕ್ತಿಯರಲ್ಲಿ ಲಲಿತೆಯಂತೆಯೂ, ಶ್ರೀವಿದ್ಯೋಪಾಸಕರಲ್ಲಿ ಪರಶಿವನಂತೆಯೂ ಸಹಸ್ರನಾಮಗಳಲ್ಲಿ ಇದು ಶ್ರೇಷ್ಠವೆಂದು ಹೇಳಲ್ಪಟ್ಟಿರುವುದು. ಈ ಸಹಸ್ರನಾಮ ಪಠನದಿಂದ ಲಲಿತಾಂಬಿಕೆ ಎಂತು ಸುಪ್ರೀತೆಯಾಗುವಳೋ ಅಂತು ಇತರ ಸಹಸ್ರನಾಮಪಠನದಿಂದ ಪ್ರೀತಿಯಂ ಪಡೆಯಳು. ಅದಕಾರಣ ಶ್ರೀದೇವಿಯ ಪ್ರೀತಿಗೋಸ್ಕರ ಸರ್ವಕಾಲದಲ್ಲಿಯೂ ಈ ಸಹಸ್ರನಾಮವನ್ನು ಪಠಿಸಬೇಕು. ಯಾವನು ಬಿಲ್ವದಳಗಳಿಂದಾಗಲಿ, ತಾವರೆಗಳಿಂದಾಗಲಿ, ತುಲಸಿಗಳಿಂದಾಗಲಿ, ಹೂಗಳಿಂದಾಗಲಿ ಶ್ರೀಚಕ್ರದಲ್ಲಿ ಲಲಿತಾದೇವಿಯನ್ನು ಸಹಸ್ರನಾಮಗಳಿಂದ ಪೂಜಿಸುವನೊ, ಆತನ ವಿಷಯದಲ್ಲಿ ಶ್ರೀ ರಾಜರಾಜೇಶ್ವರಿಯು ಒಡನೆಯೆ ಪ್ರಸನ್ನೆಯಾಗುವಳು. ಶ್ರೀಚಕ್ರವನ್ನು ಅರ್ಚಿಸಿ, ಪಂಚದಶಾಕ್ಷರಿಯನ್ನು ಜಪಿಸಿ, ಜಪದ ಕಡೆಯಲ್ಲಿ ನಿತ್ಯವೂ ಈ ಸಹಸ್ರನಾಮವನ್ನು ಪಠಿಸಬೇಕು. ಜಪಿಸಲು ಅರ್ಚಿಸಲು, ಅಶಕ್ತನಾದರೆ ಈ ಸಹಸ್ರನಾಮದ ಪಠನೆಯನ್ನಾದರೂ ಮಾಡಬೇಕು. ಸಾಂಗವಾದ ಅರ್ಚನೆಯಿಂದ ಮತ್ತು ಸಾಂಗವಾದ ಜಪದಿಂದ ಯಾವ ಫಲವುಂಟಾಗುವುದೋ ಆ ಫಲವನ್ನು ಪಡೆವನು. ಉಪಾಸನಾ ವಿಷಯದಲ್ಲಿ ಇತರ ಸ್ತೋತ್ರಗಳನ್ನು ಪಠಿಸಲು ಫಲವಿಶೇಷವುಂಟು. ಪಠಿಸದಿದ್ದರೆ ನ್ಯೂನತೆಯೇನೂ ಇಲ್ಲ. ಈ ಸಹಸ್ರನಾಮವನ್ನು ನಿತ್ಯಕರ್ಮದಂತೆ ಇಟ್ಟುಕೊಂಡು ಪಠಿಸಬೇಕು. ಭಕ್ತನಾದವನು ಶ್ರೀ ಚಕ್ರದಲ್ಲಿ ದೇವಿಯನ್ನು ಪೂಜಿಸಬೇಕು ; ಮಂತ್ರವನ್ನು ಜಪಿಸಬೇಕು ; ಸಹಸ್ರನಾಮವನ್ನು ಪಠಿಸಬೇಕು. ಇಷ್ಟನ್ನು ಆವಶ್ಯಕವಾಗಿ ಮಾಡಬೇಕು. ಇನ್ನಿದರ ಮೇಲೆ ಮತ್ತೇನನ್ನು ಮಾಡಿದರೂ ಮಾಡಬಹುದು. ಅದರಿಂದ ಫಲವಿಶೇಷವುಂಟು. ಎಲೆ ಕುಂಭಸಂಭವನೆ! ಕೇಳು ; ಆ ವಿಷಯದಲ್ಲಿ ಕಾರಣವನ್ನು ಹೇಳುವೆನು:—

ಪೂರ್ವದಲ್ಲಿ ಶ್ರೀ ಲಲಿತಾದೇವಿಯು ತನ್ನ ಭಕ್ತರಿಗೆ ಹಿತವನ್ನು ಮಾಡಲಿಚ್ಛೆಯಿಂದ ವಶಿನಿ ಮುಂತಾದ ವಾಗ್ದೇವಿಯವರನ್ನು ಕರೆದು ಹೇಳಿದ್ದೇನೆಂದರೆ :—

ವಶಿನಿ ಮುಂತಾದ ಎಲೆ ವಾಗ್ದೇವಿಯರಿರಾ! ನನ್ನ ಮಾತನ್ನು ಆಲಿಸಿ.

ನನ್ನ ಅನುಗ್ರಹದಿಂದ ಕಳಕಳಿಸುವ ವಾಕ್ಸಂಪತ್ತಿಯುಳ್ಳ ನಿಮ್ಮನ್ನು ನನ್ನ ಭಕ್ತರಿಗೆ ವಾಗ್ವಿಲಾಸವನ್ನು ಕೊಡುವುದರಲ್ಲಿ ಗೊತ್ತುಮಾಡಿರುವೆನು; ನೀವು ನನ್ನ ಶ್ರೀಚಕ್ರದ ರಹಸ್ಯವನ್ನು ಬಲ್ಲಿರಿ. ಮತ್ತು ನನ್ನ ನಾಮಸಂಕೀರ್ತನದಲ್ಲಿ ಆಸಕ್ತೆಯರಾಗಿರುವಿರಿ. ಆದುದರಿಂದ ನನ್ನ ಸ್ತೋತ್ರವನ್ನೆಸಗಲು ನಿಮ್ಮನ್ನು ಆಜ್ಞಾಪಿಸುವೆನು. ಭಕ್ತರಿಂದ ಸ್ತುತಿಯಿಸಲ್ಪಟ್ಟ ನನಗೆ ಯಾವುದರಿಂದ ಪರಮ ಪ್ರೀತಿಯುಂಟಾಗುವುದೋ ಸಹಸ್ರನಾಮಾಂಕಿತವಾದ ನನ್ನ ಆ ಸ್ತೋತ್ರವನ್ನು ನೀವು ಮಾಡಿ.

ಈ ರೀತಿ ಶ್ರೀಲಲಿತಾದೇವಿಯಿಂದ ಆಜ್ಞಾಪಿಸಲ್ಪಟ್ಟ ವಾಗ್ದೇವಿಯರು ರಹಸ್ಯವಾದ ನಾಮಗಳಿಂದ ಉತ್ತಮೋತ್ತಮವಾದ ದೇವಿಯ ಸ್ತೋತ್ರವನ್ನು ಮಾಡಿದರು. ಅದು ರಹಸ್ಯವು ಉತ್ತಮವು ಆದ ಸಹಸ್ರನಾಮವೆಂದು ಪ್ರಸಿದ್ಧವಾಯಿತು.

ಎಲೆ ಅಗಸ್ತ್ಯನೆ! ಬಳಿಕ ಇನ್ನೊಂದು ಸಮಯದಲ್ಲಿ ಜಗಜ್ಜನನಿಯು ಸಿಂಹಾಸನವನ್ನಲಂಕರಿಸಿ ಒಡ್ಡೋಲಗದಲ್ಲಿರುತ್ತ ಎಲ್ಲರಿಗೂ ತನ್ನನ್ನು ಸೇವಿಸಲು ಅವಕಾಶವನ್ನು ಕೊಟ್ಟಳು. ಅಲ್ಲಿಗೆ ಸೇವೆಗೋಸ್ಕರ ಕೋಟಿಸಂಖ್ಯೆಯುಳ್ಳ ವಾಣೀ ಬ್ರಹ್ಮರು, ಲಕ್ಷ್ಮೀನಾರಾಯಣರು, ಕೋಟಿಸಂಖ್ಯೆಯುಳ್ಳಗೌರೀರುದ್ರರು, ಮಂತ್ರಿಣಿ ದಣ್ಡಿನಿ ಮುಂತಾದ ಅಸಂಖ್ಯೆಯರಾದ ಬಗೆಬಗೆಯ ಶಕ್ತಿಯರೂ ಬಂದು ಸೇರಿದರು. ದೇವತೆಗಳ ಗುಂಪುಗಳೂ ಮಾನವರ ಗುಂಪುಗಳೂ ಸಿದ್ಧರ ಗುಂಪುಗಳೂ ಬಂದವು. ಅಲ್ಲಿ ಶ್ರೀ ಲಲಿತಾದೇವಿಯು ಎಲ್ಲರಿಗೂ ದರ್ಶನವನ್ನು ಕೊಟ್ಟಳು. ಅವರೆಲ್ಲರೂ ದೇವಿಯ ದರ್ಶನವನ್ನು ಮಾಡಿ ತಂತಮ್ಮ ಸ್ಥಾನಗಳಲ್ಲಿ ಕುಳಿತುಕೊಳ್ಳಲು, ಬಳಿಕ ಶ್ರೀಲಲಿತಾದೇವಿಯ ಕಡೆಗಣ್ಣೋಟದಿಂದ ಪ್ರೇರಿತೆಯರಾದ ವಶಿನಿ ಮುಂತಾದವರು ಆಗ ಎದ್ದು ಕೈಮುಗಿದುಕೊಂಡು, ತಾವು ರಚಿಸಿದ ಸಹಸ್ರನಾಮಗಳಿಂದ ಲಲಿತಾಂಬಿಕೆಯನ್ನು ಸ್ತುತಿಸಿದರು. ಪರಮೇಶ್ವರಿಯಾದ ಲಲಿತಾದೇವಿಯು ಆ ಸ್ತೋತ್ರವನ್ನು ಕೇಳಿ ಪ್ರಸನ್ನೆಯಾದಳು. ಆ ಸಭೆಯಲ್ಲಿ ಇದ್ದವರೆಲ್ಲರೂ ಆನಂದವನ್ನು ತಾಳಿದರು.

ಬಳಿಕ ಲಲಿತಾದೇವಿಯು ಸಭೆಯಲ್ಲಿದ್ದ ದೇವತಾಗಣಗಳನ್ನು ನೋಡಿ: "ಎಲೆ ದೇವತೆಗಳಿರಾ! ಈ ವಾಗ್ದೇವಿಯರು ನನ್ನ ಅಪ್ಪಣೆಯಿಂದಲೇ ನನಗೆ ಸಂತೋಷಕರವಾದ ನನ್ನ ದಿವ್ಯ ನಾಮಗಳಿಂದ ಅಂಕಿತವಾದ ಅತ್ಯುತ್ತಮವೆನಿಸಿದ ಸ್ತೋತ್ರವನ್ನು ಮಾಡಿದರು. ನನ್ನ ಪ್ರೀತಿಯು ಹೆಚ್ಚಾಗಿರಬೇಕಾದರೆ, ನೀವು ಸರ್ವಕಾಲದಲ್ಲಿಯೂ ಅದನ್ನು ಕೇಳಿ. ನನ್ನ ಸಹಸ್ರನಾಮವನ್ನು ಭಕ್ತರಲ್ಲಿ ಪ್ರಚಾರಗೊಳಿಸಿ. ಯಾವ ಭಕ್ತನು ನನ್ನ ಈ ಸಹಸ್ರನಾಮವನ್ನು ಒಂದಾವೃತ್ತಿ ಪಠಿಸುವನೋ ಅವನು ನನಗೆ ಅತ್ಯಂತ ಪ್ರಿಯನೆಂದು ತಿಳಿಯತಕ್ಕದ್ದು. ನಾನು

ಅವನಿಗೆ ಇಷ್ಟಾರ್ಥವೆಲ್ಲವನ್ನೂ ನೀಡುವೆನು. ಶ್ರೀಚಕ್ರದಲ್ಲಿ ನನ್ನನ್ನು ಅರ್ಚಿಸಿ, ಪಂಚದಶಾಕ್ಷರಿಯನ್ನು ಜಪಿಸಿ, ಬಳಿಕ ನನ್ನ ಸಂತೋಷಕ್ಕೋಸ್ಕರ ನನ್ನ ಸಹಸ್ರ ನಾಮವನ್ನು ಕೀರ್ತಿಸಬೇಕು. ನನ್ನನ್ನು ಅರ್ಚಿಸಲಿ ಅಥವಾ ಅರ್ಚಿಸದಿರಲಿ, ಮಂತ್ರವನ್ನು ಜಪಿಸಲಿ ಅಥವಾ ಜಪಿಸದಿರಲಿ, ನನ್ನ ಪ್ರೀತಿಗೋಸ್ಕರ ಯಾವಾಗಲೂ ಈ ಸಹಸ್ರನಾಮವನ್ನು ಪಠಿಸಬೇಕು. ಇದು ನನಗೆ ಪ್ರೀತಿಯಾಗುವುದರಿಂದ ಸಕಲೇಷ್ಟಾರ್ಥಗಳನ್ನೂ ಪಡೆವನು. ಆದುದರಿಂದ ಯಾವಾಗಲೂ ಆದರಗೊಂಡು ನನ್ನ ಸಹಸ್ರನಾಮವನ್ನು ಪಠಿಸಿ--ಎಂದು ನುಡಿದಳು.

ಈ ರೀತಿ ಶ್ರೀ ಲಲಿತಾಂಬೆಯು ಸಪರಿವಾರರಾದ ದೇವತೆಗಳಿಗೆ ಆಜ್ಞೆಯನ್ನಿತ್ತಳು. ಅಂದು ಮೊದಲ್ಗೊಂಡು ಬ್ರಹ್ಮವಿಷ್ಣುಮಹೇಶ್ವರರೂ, ಮಂತ್ರಿಣಿ ಮುಂತಾದ ಶಕ್ತಿಯರೂ ಆಕೆಯ ಅಪ್ಪಣೆಯಿಂದ ಈ ಸಹಸ್ರನಾಮವನ್ನು ಆ ಲಲಿತಾದೇವಿಯ ಪ್ರೀತಿಗೋಸ್ಕರ ಯಾವಾಗಲೂ ಭಕ್ತಿಯಿಂದ ಪಠಿಸುತ್ತಿರುವರು.

ಆದಕಾರಣ ಕುಂಭಸಂಭವನೆ! ಭಕ್ತನಾದವನು ಅವಶ್ಯವಾಗಿ ಇದನ್ನು ಪಠಿಸಬೇಕು. ಎಂಬುದೇ ಪೂರ್ವಪೀಠಿಕೆಯ ಮುಖ್ಯ ತಾತ್ಪರ್ಯವಾಗಿರುತ್ತದೆ ಧರ್ಮಾರ್ಥಕಾಮಮೋಕ್ಷಗಳ ಮತ್ತು ಇತರ ಪ್ರಾಪಂಚಿಕ ವಿಷಯಗಳ ಫಲಾಭಿಲಾಷೆಗಳ ಸಂಕಲ್ಪದಿಂದ ಶ್ರೀ ಲಲಿತಾ ಸಹಸ್ರನಾಮ ಸ್ತೋತ್ರವನ್ನು ಪಾರಾಯಣ ಮಾಡಿದರೆ ಆಯಾಯ ಫಲಗಳು ಪ್ರಾಪ್ತವಾಗುತ್ತವೆ. ಯಾವ ಕಾಮನೆಯೂ ಇಲ್ಲದೆ ಶ್ರೀಲಲಿತಾಂಬೆಯ ಪ್ರೀತ್ಯರ್ಥವಾಗಿ ಭಕ್ತಿಯಿಂದ ಸಹಸ್ರನಾಮವನ್ನು ಪಾರಾಯಣ ಮಾಡುತ್ತಾ ಬಂದರೆ ಆ ಜಗದಾಂಬೆಯೆ ಭಕ್ತನ ಯೋಗಕ್ಷೇಮವನ್ನು ವಹಿಸುತ್ತಾಳೆಂಬುದೇ ಉತ್ತರ ಪೀಠಿಕೆಯ ಮುಖ್ಯ ತಾತ್ಪರ್ಯವಾಗಿರುತ್ತದೆ.

---

## ಶ್ರೀ ಲಲಿತಾ ಸಹಸ್ರನಾಮದಲ್ಲಿರುವ ತತ್ವ ವಿಷಯಗಳ

# ವಿಂಗಡದ ಅನುಕ್ರಮಣಿಕೆ


| ವಿಚಾರಗಳು | ನಾಮಸಂಖ್ಯೆ |
| --- | --- |
| ೧. ಶ್ರೀಲಲಿತಾಂಬೆಯು ಅವತಾರದ ವಿಧ ಮತ್ತು ಉದ್ದೇಶ .... | ೪, ೫, ೮೬೫, ೮೬೬, ೮೬೭ |
| ೨. ಶ್ರೀಲಲಿತಾವತಾರದ ರೂಪು ಆಭರಣ ಮುಂತಾದವುಗಳ ವರ್ಣನೆ .... | ೬ ರಿಂದ ೬೪ |
| ೩. ಭಂಡಾಸುರನ ವಧೆಯು ವಿಚಾರ-- | ೬೫ ರಿಂದ ೮೪ |
| ೪. ಶ್ರೀಲಲಿತಾ ಪಂಚದಶಾಕ್ಷರೀ ಮಹಾಮಂತ್ರದ ವಿಚಾರ .... | ೮೫ ರಿಂದ ೮೯, ೩೦೧, ೩೦೨ |
| ೫. ಪ್ರಪಂಚ ವ್ಯಾಪಾರದಲ್ಲಿ ಧರ್ಮ ಮಾರ್ಗವೇ ಶ್ರೇಷ್ಠವೆಂಬ ವಿಚಾರ ಮತ್ತು ಪ್ರಪಂಚಕ್ಕೂ, ಶ್ರೀದೇವಿಗೂ ಇರುವ ಸಂಬಂಧ | ೯೦ ರಿಂದ ೯೬, ೧೩೮, ೨೩೯, ೨೫೫, ೩೪೧ ರಿಂದ ೩೪೫, ೩೫೬, ೪೩೮, ೪೪೧, ೫೪೨ ರಿಂದ ೫೪೪, ೭೧೦, ೭೦೪, ೭೦೮, ೭೧೯, ೮೭೨ ರಿಂದ ೮೭೫, ೮೮೪, ೮೮೭, ೮೯೭, ೯೧೨, ೯೨೩, ೯೨೫, ೯೫೮, ೯೫೯ |
| ೬. ಮೋಕ್ಷಮಾರ್ಗವೆನಿಸುವ ಸಮಯಾಚಾರದ ವಿಚಾರ | ೯೭ ರಿಂದ ೧೧೧, ೨೯೧, ೩೬೩, ೪೭೫ ರಿಂದ ೫೪೪, ೫೪೮, ೫೪೯, ೫೭೦, |

| ವಿಚಾರಗಳು | ನಾಮಸಂಖ್ಯೆ |
|---|---|
| | ೫೯೧ ರಿಂದ ೬೨೫, ೬೦೮, ೬೪೧, ೬೪೩, ೬೪೪, ೬೫೧ ರಿಂದ ೬೫೭, ೬೬೬, ೬೬೭, ೬೬೮, ೬೭೨, ೬೭೬, ೬೮೦, ೭೨೫, ೭೪೨, ೭೭೧, ೭೭೩, ೮೫೧, ೮೭೦, ೮೭೧, ೮೮೧, ೮೮೨, ೮೮೩, ೯೦೮, ೯೦೯, ೯೧೮, ೯೧೯, ೯೨೬, ೯೪೬, ೯೫೦, ೯೭೬ ರಿಂದ ೯೮೧ |
| ೭. ಮೋಕ್ಷವನ್ನು ಪಡೆಯಲು ಭಕ್ತಿಯು ದೊಡ್ಡ ಸಹಾಯವೆಂಬ ವಿಚಾರ .... | ೧೧೨ ರಿಂದ ೧೨೧, ೩೫೩, ೩೭೨, ೪೦೪, ೫೬೭, ೭೪೭ |
| ೮. ಆತ್ಮವಿದ್ಯಾ ವಿಚಾರ .... | ೨೩೮, ೩೩೫, ೪೭೨, ೫೩೯, ೫೪೦, ೫೪೯, ೫೮೩, ೬೪೫, ೭೦೯, ೭೧೦, ೭೧೧, ೮೪೪, ೮೪೫, ೮೪೬, ೮೫೨, ೮೫೯, ೮೮೭, ೮೮೮, ೯೧೮, ೯೧೯ |
| ೯. ಮಹಾವಿದ್ಯಾ ವಿಚಾರ .... | ೨೮೯, ೨೯೦, ೩೨೭, ೩೨೮, ೩೩೮, ೩೫೫, ೩೮೫, ೩೮೬, ೫೮೪, ೭೦೫, ೭೦೭, ೭೬೨, ೮೭೨ |
| ೧೦. ಚಂದ್ರವಿದ್ಯಾ ಮತ್ತು ಶ್ರೀವಿದ್ಯಾ ವಿಚಾರ .... | ೨೩೯ ರಿಂದ ೨೪೫, ೩೩೦, ೩೩೩, ೩೮೨, ೩೯೧, ೫೩೬, ೫೭೫, ೫೭೬, ೫೮೫, ೫೯೨, ೬೧೦ ರಿಂದ ೬೧೫, ೭೧೭, ೭೯೭, ೮೫೩ ರಿಂದ ೮೫೮, ೮೭೯, ೯೧೦, ೯೧೮, ೯೨೯, ೯೭೪ |
| ೧೧. ಷೋಡಶಾಕ್ಷರೀ ವಿದ್ಯಾವಿಚಾರ | ೨೩೬, ೨೩೭, ೪೫೫, ೫೭೮ ರಿಂದ ೫೯೦, ೭೯೪, ೭೯೯ |

| ವಿಚಾರಗಳು | ನಾಮಸಂಖ್ಯೆ |
|---|---|
| ೧೨. ಪುಲ್ಲಿಂಗ, ಸ್ತ್ರೀಲಿಂಗ, ನಪುಂಸಕ ಲಿಂಗಗಳು ಪರಬ್ರಹ್ಮಸ್ವರೂಪಿಣಿಯಾದ ಶ್ರೀದೇವಿಯಲ್ಲಿ ಇಲ್ಲವೆಂಬ ವಿಚಾರ | .... ೨೫೦, ೪೨೪ ರಿಂದ ೪೨೭, ೬೨೮, ೮೨೧, ೮೨೨ |
| ೧೩. ಜಾಗ್ರತ್, ಸ್ವಪ್ನ, ಸುಷುಪ್ತಿ, ತುರಿಯಾವಸ್ಥೆಗಳ ಮತ್ತು ಕೈವಲ್ಯದ ವಿಚಾರ | .... ೨೫೬ ರಿಂದ ೨೬೩, ೩೯೦, ೬೨೫, ೯೨೬ |
| ೧೪. ಪ್ರಪಂಚದ ಸೃಷ್ಟಿ, ಸ್ಥಿತಿ, ಲಯಗಳ ವಿಚಾರ | .... ೨೬೪ ರಿಂದ ೨೭೨, ೨೪೯, ೨೮೧, ೩೨೫, ೪೩೮, ೪೪೦, ೫೩೯, ೫೫೦, ೫೬೨, ೬೨೨, ೬೩೭, ೬೩೮, ೬೪೮, ೬೫೮ ರಿಂದ ೬೬೫, ೭೧೮, ೭೧೯, ೭೨೩, ೭೫೭, ೭೭೮, ೭೮೮, ೭೯೨, ೭೯೬, ೭೯೮, ೮೨೬, ೮೩೧, ೮೩೨, ೮೩೭, ೮೪೩, ೮೮೧, ೯೩೫, ೯೪೭ ರಿಂದ ೯೪೯ |
| ೧೫. ಶ್ರೀ ದೇವಿಯ ವಿಶ್ವಸ್ವರೂಪದ ವಿಚಾರ | .... ೨೮೨ ರಿಂದ ೨೮೪, ೩೪೧, ೩೪೨, ೩೪೩, ೪೦೦, ೪೦೧, ೪೧೩, ೬೭೩, ೬೭೯, ೭೫೦ ರಿಂದ ೭೫೪, ೭೭೯, ೭೮೦, ೭೮೧, ೮೦೮, ೮೨೦, ೮೬೨, ೮೭೨ ರಿಂದ ೮೭೫, ೮೯೫, ೯೦೭, ೯೪೨ |
| ೧೬. ಮಂತ್ರ ವಿಚಾರ | .... ೨೦೪, ೨೨೭, ೫೩೯, ೫೪೦, ೬೭೪, ೭೯೮, ೮೧೨, ೮೪೪, ೮೪೬ |

| ವಿಚಾರಗಳು | ನಾಮಸಂಖ್ಯೆ |
|---|---|
| ೧೭. ಯಂತ್ರ ವಿಚಾರ | .... ೨೦೫, ೨೨೮, ೮೧೨ |
| ೧೮. ತಂತ್ರ ವಿಚಾರ | .... ೨೦೬, ೨೨೬, ೭೨೩, ೭೨೪ |
| ೧೯. ಮೂಲ ಪ್ರಕೃತಿ, ಶುದ್ಧ ಸತ್ವ ಪ್ರಕೃತಿ, ಮಲಿನ ಪ್ರಕೃತಿಗಳ ವಿಚಾರ | .... ೨೧೫, ೨೧೭, ೩೯೭ ರಿಂದ ೪೦೨, ೪೧೬ ರಿಂದ ೪೧೯, ೫೭೨, ೬೧೪, ೬೧೫, ೬೫೮, ೭೧೬, ೭೬೩, ೯೭೭, ೮೬೨, ೯೦೨, ೯೮೪ |
| ೨೦. ಸಹಸ್ರಾರ ಕಮಲದ ವಿಚಾರ | .... ೫೫ ರಿಂದ ೬೧, ೧೦೫ ರಿಂದ ೧೦೮, ೨೪೫, ೩೦೩, ೩೮೬, ೪೨೮, ೫೨೮, ರಿಂದ ೫೩೭, ೫೭೮, ೫೯೧, ೫೯೨, ೯೦೫, ೯೯೬ |
| ೨೧. ಆಜ್ಞಾ ಚಕ್ರದ ವಿಚಾರ | .... ೧೦೩, ೧೦೪, ೫೨೧ರಿಂದ ೫೨೭,೫೯೩, ೫೯೪, ೬೦೯, ೬೧೦, ೯೦೫ |
| ೨೨. ವಿಶುದ್ಧ ಚಕ್ರದ ವಿಚಾರ | .... ೪೭೫ ರಿಂದ ೪೮೪ |
| ೨೩. ಅನಾಹತ ಚಕ್ರದ ವಿಚಾರ | .... ೩೩೬, ೪೮೫, ರಿಂದ ೪೯೪, ೫೯೫, ೫೯೬, ೬೪೭ |
| ೨೪. ಮಣಿಪೂರ ಚಕ್ರದ ವಿಚಾರ | .... ೧೦೧, ೧೦೨, ೪೯೫ ರಿಂದ ೫೦೩ |
| ೨೫. ಸ್ವಾಧಿಷ್ಠಾನ ಚಕ್ರದ ವಿಚಾರ | .... ೫೦೪ ರಿಂದ ೫೧೩ |
| ೨೬. ಮೂಲಾಧಾರಚಕ್ರದ ವಿಚಾರ | .... ೯೯, ೧೦೦, ೩೫೨, ೫೧೪ ರಿಂದ ೫೨೦, ೫೮೮, ೫೯೭, ೫೯೮, ೯೮೬ |
| ೨೭. ಶ್ರೀ ಕುಂಡಲಿನೀ ಶಕ್ತಿಯು ವಿಚಾರ | ೯೯ ರಿಂದ ೧೧೧, ೩೫೨, ೪೨೨, ೪೪೦, ೪೫೮, ೪೬೦, ೪೬೬, ೪೭೦ |

| ವಿಚಾರಗಳು | ನಾಮಸಂಖ್ಯೆ |
|---|---|
| | ರಿಂದ ೪೭೪, ೫೧೩, ೫೧೪, ೫೨೦, ೫೯೧ ರಿಂದ ೬೨೫, ೭೭೫, ೯೦೫, ೯೭೪, ೯೭೬ ರಿಂದ ೯೯೩ |
| ೨೮. ಓಂಕಾರ ನಾದಬ್ರಹ್ಮದ ವಿಚಾರ, ನಾದದಲ್ಲಿನ ಪರಾ, ಪಶ್ಯಂತೀ, ಮಧ್ಯಮಾ, ವೈಖರೀ ವಿಚಾರಗಳು | .... ೨೩೬, ೨೩೭, ೨೯೯, ೩೨೮, ೩೫೦, ೩೬೬ ರಿಂದ ೩೭೧, ೪೫೫, ೪೫೭, ೫೯೭, ೬೩೦, ೬೩೩ ರಿಂದ ೬೫೭, ೬೭೮, ೭೦೬, ೭೦೭, ೭೦೯, ೭೧೧, ೭೧೫, ೭೩೩, ೭೩೪, ೭೩೫, ೭೩೮, ೭೪೧ ರಿಂದ ೭೪೯, ೭೯೭, ೮೩೩, ೮೪೬, ೮೫೦, ೮೫೩, ೮೫೪, ೮೫೫ ೮೫೭, ೯೦೧, ೯೦೯ |
| ೨೯. ಅಂತರ್ಯಾಗದ ವಿಚಾರ | .... ೨೩೦, ೩೮೧, ೫೩೫, ೫೯೭ |
| ೩೦. ಷಣ್ಮುಖೀ, ಜಾಲಂಧರ, ಉಡ್ಯಾಣ, ಯೋನಿ, ಜ್ಞಾನ ಮುಂತಾದ ಮುದ್ರೆಗಳ ವಿಚಾರ | .... ೩೭೮ ರಿಂದ ೩೮೩, ೭೦೬ ರಿಂದ ೭೦೯, ೭೧೧, ೯೭೭, ೯೭೮, ೯೭೯, ೯೮೨, ೯೮೩ |
| ೩೧. ಜೀವನ್ಮುಕ್ತರ ವಿಚಾರ | .... ೪೭೧, ೪೭೩, ೫೭೪, ೫೭೫, ೫೭೬, ೬೧೩, ೬೬೬, ೭೨೬ ರಿಂದ ೭೩೨, ೮೧೬ |
| ೩೨. ಪ್ರಳಯದ ವಿಚಾರ | .... ೨೩೧, ೨೩೨, ೨೭೦, ೪೬೬, ೫೫೭, ೫೭೧, ೭೩೯, ೭೪೦, ೭೫೦ ರಿಂದ ೭೫೪, ೮೧೫, ೮೮೯, ೮೯೦ |

| ವಿಚಾರಗಳು | ನಾಮಸಂಖ್ಯೆ |
|---|---|
| ೩೩. ಶ್ರೀ ಗಾಯತ್ರೀ ಮತ್ತು ಶ್ರೀ ಸಂಧ್ಯಾ ಮಹಿಮೆ | .... ೪೨೦ ರಿಂದ ೪೨೭ |
| ೩೪. ಶ್ರೀ ದುರ್ಗಾದೇವಿಯ ಮಹಿಮೆ | ೧೮೯ ರಿಂದ ೧೯೮ |
| ೩೫. ಶ್ರೀ ಲಕ್ಷ್ಮೀಮಹಿಮೆ | .... ೬೮೪ ರಿಂದ ೬೯೮, ೮೮೫, ೮೮೬ |
| ೩೬. ಶ್ರೀ ಸಾವಿತ್ರೀ ಮಹಿಮೆ | .... ೬೯೯ ರಿಂದ ೭೦೩ |
| ೩೭. ಶ್ರೀ ಸರಸ್ವತೀ ಮಹಿಮೆ | .... ೭೦೪ ರಿಂದ ೭೦೭, ೭೯೮, ೭೯೯, ೮೩೩ |
| ೩೮. ಶ್ರೀ ಭೂದೇವಿಯ ಮಹಿಮೆ | .... ೭೧೮ ರಿಂದ ೭೨೪ |
| ೩೯. ಶ್ರೀ ದಕ್ಷಿಣಾಮೂರ್ತಿಯ ಮಹಿಮೆ | .... ೭೨೫ ರಿಂದ ೭೩೨ |
| ೪೦. ಶ್ರೀ ನಟೇಶ್ವರೀ ಮಹಿಮೆ | .... ೭೩೩ ರಿಂದ ೭೪೯ |
| ೪೧- ಶ್ರೀ ಮಹಾಕಾಳೀ ಮಹಿಮೆ | .... ೭೫೦ ರಿಂದ ೭೫೪ |
| ೪೨. ಶ್ರೀ ಬಾಲಾಂಬಿಕೆಯ ಮಹಿಮೆ | .... ೯೬೫ ರಿಂದ ೯೭೫ |

॥ ಶ್ರೀಶಾರದಾ ಗುರುಭ್ಯೋನಮಃ ॥

# ಶ್ರೀಲಲಿತಾ ಸಹಸ್ರನಾಮದ ಭಾಷ್ಯ

---

## ೧. ಓಂ ಶ್ರೀಮಾತ್ರೇನಮಃ—

ಶ್ರೀಮಾತಾ ಎಂಬ ನಾಮದಲ್ಲಿರುವ ಶ್ರೀಮಹತ್ತ್ವೇನೆಂದರೆ— ಅಸದೃಶ ಸ್ವರೂಪವಾದ ಕಾಂತಿಯೂ ಗುರುತ್ವವೂ ರಾಜತ್ವವೂ ಅಷ್ಟೈಶ್ವರ್ಯವೂ ಜ್ಞಾನ ಸ್ವರೂಪವೂ ಕೀರ್ತಿಯೂ ಯಾರಲ್ಲಿರುವುದೋ ಅವರಿಗೆ ಶ್ರೀ ಎಂಬುದು ಸಲ್ಲುವುದು. ಹೀಗಿರುವವಳೇ ಪರಬ್ರಹ್ಮಸ್ವರೂಪಿಣಿಯೂ ಮಾತೆಯೂ ಆದ ಶ್ರೀಲಲಿತಾಪರಮೇಶ್ವರಿಯು. ಶ್ರೀ ಎಂದರೆ ಲಕ್ಷ್ಮೀದೇವಿಯು. ಶ್ರೀಮಾತಾ ಎಂದರೆ ಶ್ರೀಲಕ್ಷ್ಮೀದೇವಿಯ ಸ್ವರೂಪವಾದ ಜನನಿಯು.

ಶ್ರೀಮಾತಾ ಎನ್ನುವುದರಲ್ಲಿ ಶ್ರೀ ಮತ್ತು ಮಾತಾ ಎಂಬವುಗಳ ಅತಿಶಯವಾದ ಮಹತ್ವವೇನೆಂದರೆ:—ಶ್ರೀಂ ಎಂಬುದು ಶ್ರೀಮಹಾಲಕ್ಷ್ಮಿಯ ಬೀಜಮಂತ್ರವು. ಇದು ಸಚ್ಚಿದಾನಂದಸ್ವರೂಪವಾದ ಪರಬ್ರಹ್ಮತತ್ವವನ್ನೇ ಪ್ರತಿಪಾದನೆ ಮಾಡುವುದು. ಶ್ರೀಂ ಎಂಬ ಒಂದಕ್ಷರದಲ್ಲಿ ಮೂರು ಅಕ್ಷರ ಒಂದು ಅನುಸ್ವಾರವೂ (ಶ+ರ+ಈ+ಂ) ಸೇರಿ "ಶ್ರೀಂ" ಬೀಜಾಕ್ಷರವೆನಿಸಿದೆ. ಈ ಅಕ್ಷರಗಳಲ್ಲಿ "ಶ" ಅಕ್ಷರವು ಪರಬ್ರಹ್ಮದಲ್ಲಿನ ಸತ್ ಎನ್ನುವುದನ್ನು, "ರ" ಅಕ್ಷರವು ಚಿತ್ ಎನ್ನುವುದನ್ನೂ, "ಈ" ಅಕ್ಷರವು ಆನಂದವನ್ನೂ, "ಂ" ಅನುಸ್ವಾರವು ಪ್ರಪಂಚದ ಪ್ರಕೃತಿ ಬೀಜಭೂತವನ್ನೂ ಪ್ರತಿಪಾದಿಸುತ್ತವೆ. ಪರಬ್ರಹ್ಮವೆಂದರೆ ಸತ್, ಚಿತ್, ಆನಂದ ಮತ್ತು ಪ್ರಪಂಚದ ಬೀಜಭೂತಶಕ್ತಿಗಳೆಲ್ಲಾ ಅಭೇದವಾಗಿ ಏಕೀಭವಿಸಿರುವ ಸ್ವಭಾವದ ಸ್ಥಿತಿಯು. ಶ್ರೀಂ ಬೀಜಾಕ್ಷರದ ತತ್ವದಂತೆ ಹ್ರೀಂ, ಐಂ, ಕ್ಲೀಂ, ಓಂ ಬೀಜಾಕ್ಷರಗಳಲ್ಲೂ ಮೂರು ಅಕ್ಷರ ಮತ್ತು ಅನುಸ್ವಾರವೂ ಸೇರಿ ಸಚ್ಚಿದಾನಂದಸ್ವರೂಪವಾದ ಪರಬ್ರಹ್ಮತತ್ವವನ್ನೇ ಪ್ರತಿಪಾದಿಸುವುವು. ಇವುಗಳ ವಿಚಾರಗಳನ್ನು ಶ್ರೀಲಲಿತಾಮಂತ್ರದ ರಹಸ್ಯಾರ್ಥಪ್ರಕರಣದಲ್ಲಿ ವಿವರಿಸಿರುತ್ತೆ. ಅವುಗಳನ್ನು ಇಲ್ಲಿಗೆ ಅನ್ವಯಮಾಡಿಕೊಂಡಲ್ಲಿ ತತ್ವಾರ್ಥವು ಮನದಟ್ಟಾಗುವುದು.

ಪ್ರಪಂಚದ ಸೃಷ್ಟಿಯಾಗುವ ಕಾಲದಲ್ಲಿ ಪರಬ್ರಹ್ಮಸ್ವರೂಪವಾದ ಶ್ರೀಂಬೀಜಾಕ್ಷರದಲ್ಲಿನ ಅನುಸ್ವಾರವು (ಸೊನ್ನೆಯು) ಬೀಜದಿಂದ ಮೊಳಕೆಯು ಹೊರಡು

ವಂತೆ ಹೊರಹೊಮ್ಮುವುದೇ ಸೃಷ್ಟಿಗೆ ಪ್ರಾರಂಭವೆನಿಸುವುದು. ಸೃಷ್ಟಿಗೆ ಪ್ರಾರಂಭವಾದಮೇಲೆ ಪ್ರಪಂಚ ಬೀಜಶಕ್ತಿಯಾದ ಅನುಸ್ವಾರವು (ಸೊನ್ನೆಯು) ಸೃಷ್ಟಿಕ್ರಮವನ್ನು ಅನುಸರಿಸಿ ಗರ್ಭರೂಪವಾಗುವುದು. ಅನುಸ್ವಾರವು ಹೀಗೆ ಗರ್ಭರೂಪವಾಗುವಾಗ 'ಶ್ರೀ' ಅಕ್ಷರದಲ್ಲಿನ 'ರ' ಅಕ್ಷರದ ತತ್ವನಾದ ಚಿಚ್ಛಕ್ತಿಯು ಪರಬ್ರಹ್ಮತ್ವದಿಂದ ಈಶ್ವರೀಶಕ್ತಿಯಾಗಿ ಉದಯಿಸಿ ಗರ್ಭರೂಪವಾಗಿರುವ ಅನುಸ್ವಾರವನ್ನು ಧರಿಸಿ ಗರ್ಭಿಣಿ ಎನಿಸಿಕೊಳ್ಳುವಳು. ಆದುದರಿಂದ ಈಶ್ವರೀ ಶಕ್ತಿಯೆ ಪ್ರಪಂಚರೂಪವಾದ ಗರ್ಭವನ್ನು ಧರಿಸುವುದರಿಂದ "ಶ್ರೀಮಾತಾ" ಎನಿಸಿಕೊಳ್ಳುವಳು. ಶ್ರೀದೇವಿಯು ಚಿತ್‍ಸ್ವರೂಪದಿಂದ ಆವಿರ್ಭವಿಸಿದಳೆಂದು ೪ನೆಯ ನಾಮವಾದ ಚಿದಗ್ನಿಕುಂಡಸಂಭೂತ ಎಂಬ ನಾಮವೇ ತಿಳಿಸುವುದು ಸಚ್ಚಿದಾನಂದಸ್ವರೂಪವಾದ ಶ್ರೀ ಎಂಬುದು ಈಶ್ವರೀ ಶಕ್ತಿಯಾಗಿ ಉದಯಿಸಿದ್ದರೂ ಯಾವ ವ್ಯತ್ಯಾಸವನ್ನೂ ಹೊಂದದೆ ಗರ್ಭರೂಪವಾದ ಅನುಸ್ವಾರದ ಜೊತೆಯಲ್ಲಿರುವುದು. ಅಂದರೆ ಸೃಷ್ಟಿಕಾಲದಲ್ಲೂ ಸಚ್ಚಿದಾನಂದಸ್ವರೂಪವಾದ ಶ್ರೀರೂಪವಾದ ಪರಬ್ರಹ್ಮವು ಯಾವ ವ್ಯತ್ಯಾಸವನ್ನೂ ಹೊಂದುವುದಿಲ್ಲವೆಂಬ ತಾತ್ಪರ್ಯವಾಗಿರುತ್ತೆ. ಅಲ್ಲದೆ ಅನುಸ್ವಾರವು ಕೂಡ ಸೃಷ್ಟಿಕಾಲದಲ್ಲಿ ಪ್ರಪಂಚರೂಪವಾಗುವ ಆವಿರ್ಭಾವವನ್ನು ಲಯಕಾಲದಲ್ಲಿ ಅವ್ಯಕ್ತವಾಗುವ ತಿರೋಭಾವವನ್ನು ಪಡೆಯುವುದೇ ವಿನಹ ಅನುಸ್ವಾರವು ಕೂಡ ವಸ್ತುನಾಶವಾಗುವಂತಹ ಯಾವ ವಿಕಾರವನ್ನೂ ಹೊಂದುವುದಿಲ್ಲ. ಆದುದರಿಂದ ಸೃಷ್ಟಿಕಾಲದಲ್ಲಿ ಶ್ರೀಂ ಎನ್ನುವುದು ಶ್ರೀಮಾತಾ ಎಂದು ನಿಲ್ಲುವ ತತ್ವಾರ್ಥವಾಗಿಯೆ ಸಹಸ್ರನಾಮದ ಪ್ರಥಮನಾಮವಾಗಿ ಶ್ರೀಮಾತಾ ಎಂದು ಇರುವುದಾಗಿದೆ. ಮಾತಾ ಎನ್ನುವ ಪದಕ್ಕೂ "ಮಾತಿವರ್ತತೆ ಅತ್ರಗರ್ಭೋಮಾತಾ, ಖು ಸೀ ಮಾವನೆ ವರ್ತನೇಚ" ಗರ್ಭವು ಈಕೆಯಲ್ಲಿರುವುದು. ಆದುದರಿಂದ ಪರಬ್ರಹ್ಮಸ್ವರೂಪಿಣಿಯೂ ಶ್ರೀಂ ಬೀಜಾಕ್ಷರ ಪ್ರತಿಪಾದಿಣಿಯೂ ಆದ ಶ್ರೀ ಮಹಾಲಕ್ಷ್ಮಿಯೇ ಶ್ರೀಮಾತಾರೂಪವಾಗಿ ಇರುತ್ತಾಳೆ.

ಸಹಸ್ರನಾಮದ ಪ್ರಥಮನಾಮವು ಶ್ರೀಮಾತಾ ಎಂದಿದೆ. ಸಹಸ್ರನಾಮದ ಅಂತ್ಯದನಾಮವು ಲಲಿತಾಂಬಿಕಾ ಎಂದಿದೆ. ಪ್ರಥಮ ಮತ್ತು ಅಂತ್ಯದ ನಾಮಗಳೆರಡನ್ನೂ ಸೇರಿಸಿದರೆ ಶ್ರೀಮಾತಾ ಲಲಿತಾಂಬಿಕಾ ಎಂದಾಗುವುದು. ಅಂದರೆ ಪರಬ್ರಹ್ಮಸ್ವರೂಪಿಣಿಯೂ ಶ್ರೀಂ ಬೀಜಾಕ್ಷರ ಪ್ರತಿಪಾದಿಣಿಯೂ ಆದ ಮಹಾಲಕ್ಷ್ಮಿಯೇ ಶ್ರೀ ಲಲಿತಾಂಬೆಯಾಗಿರುವಳೆಂತಲೂ ಆದಿ ಮತ್ತು ಅಂತ್ಯನಾಮಗಳ ಮಧ್ಯದಲ್ಲಿರುವ ೯೯೮ ನಾಮಗಳೂ ಶ್ರೀ ದೇವಿಯ ಲೀಲಾವಿಭೂತಿಯಾಗಿರುವುದೆಂತಲೂ ಪ್ರತಿಪಾದಿಸುವುದು.

## ೨. ಶ್ರೀಮಹಾರಾಜ್ಞ್ಯೈನಮಃ—

ಶ್ರೀಂ ಬೀಜಾಕ್ಷರದಲ್ಲಿನ ಅನುಸ್ವಾರವು ಗರ್ಭರೂಪವಾಗುವುದರಿಂದ ಶ್ರೀ ಅಕ್ಷರದಲ್ಲಿನ ರಕಾರವು ಮಾತಾ ಎಂದೆನಿಸಿಕೊಳ್ಳುವುದೆಂತ ಪ್ರಥಮ ನಾಮದಲ್ಲಿ ತಿಳಿಸಿತಷ್ಟೆ? ಈ ನಾಮದಲ್ಲಿ ಸೃಷ್ಟಿಯು ಪೂರ್ಣವಾಗಿ ವ್ಯಾಪಾರಕ್ಕೆ ಬರುವುದನ್ನು ಪ್ರತಿಪಾದಿಸುವುದು.

"ಪ್ರಜಾನಾಂ ರಂಜಯತೀತಿರಾಜ್ಞಿ, ರಾಜತಇತಿರಾಜ್ಞಿ" ಎಂಬ ವ್ಯುತ್ಪತ್ತಿಗಳನ್ನು ಅನುಸರಿಸಿ ಪ್ರಜೆಗಳನ್ನು ಸಂತೋಷಪಡಿಸುವವಳು ಮತ್ತು ಪ್ರಕಾಶಿಸುವವಳು ಎಂಬ ಅರ್ಥಗಳಾಗುವುದರಿಂದ ಪ್ರಾಣಿಗಳನ್ನು ಸೃಷ್ಟಿಸಿದ ಅನಂತರ ಕಾಪಾಡತಕ್ಕವಳೆಂಬುದನ್ನು ಪ್ರತಿಪಾದಿಸುವುದೇ ಮಹಾರಾಜ್ಞಿ ಎಂಬುದರ ಅರ್ಥವಾಗಿರುತ್ತದೆ. ಆದುದರಿಂದ ಪರಬ್ರಹ್ಮಸ್ವರೂಪಿಣಿಯೂ ಶ್ರೀಂ ಬೀಜಾಕ್ಷರ ಪ್ರತಿಪಾದಣೆಯೂ ಆದ ಶ್ರೀ ಮಹಾದೇವಿಯೇ ಈಶ್ವರೀ ಸ್ವರೂಪದಿಂದ ಜಗದ್ವ್ಯಾಪಾರ ಪ್ರಕಾಶಕಳಾಗಿರುತ್ತಾಳೆ. ಅಂದರೆ ಅನುಸ್ವಾರವು ಜಗದ್ರೂಪವಾಗಿಯೂ ಶ್ರೀ ಅಕ್ಷರದಲ್ಲಿರುವ 'ರ' ಅಕ್ಷರವು ರಕ್ಷಕಳಾದ ಈಶ್ವರೀ ರೂಪವಾಗಿಯೂ ಇರುತ್ತೆಂಬ ತಾತ್ಪರ್ಯ.

## ೩. ಶ್ರೀಮತ್ಸಿಂಹಾಸನೇಶ್ವರ್ಯೈನಮಃ....

ಮೃಗಗಳಿಗೆಲ್ಲಾ ರಾಜನಾದ ಸಿಂಹದಮೇಲೆ ಕುಳಿತುಕೊಂಡು ನಿಯಾಮಕಳಾಗಿರುವವಳು ಎಂಬುದು ಸಾಧಾರಣವಾದ ಅರ್ಥವಾಗಿದೆ. ಸಿಂಹ ಎನ್ನುವ ಶಬ್ಧಕ್ಕೆ "ಸಿಂಚತಿ ತೇಜಃ ಪಶುಷು ಇತಿ ಸಿಂಹಃ" ಎಂಬ ವ್ಯುತ್ಪತ್ತಿಯು ಶಿವ ಸಹಸ್ರನಾಮದ ಭಾಷ್ಯದಲ್ಲಿರುವುದು. ಅಂದರೆ ಪಶುಷು- ಅಜ್ಞಾನಾವೃತರಾಗಿರುವ ಜೀವರುಗಳಿಗೆ, ಸಿಂಚತಿತೇಜಃ— ಅಜ್ಞಾನವನ್ನು ಹೋಗಲಾಡಿಸುವಂತಹ ಪ್ರಭೆಯನ್ನು ಅನುಗ್ರಹಿಸತಕ್ಕವಳು. ಇಂತಹ ಪ್ರಭೆಯನ್ನೇ ಆಸನವನ್ನಾಗಿ ಮಾಡಿಕ್ಕೊಂಡು ಅದರಲ್ಲಿ ನೆಲಸಿ ಜಗನ್ನಿಯಾಮಕಳಾಗಿ ಇರುವವಳೆಂಬ ತತ್ವಾರ್ಥವಾಗಿರುವುದು. ಮೇಲಿನ ಅರ್ಥವನ್ನು ಇನ್ನೊಂದು ವಿಧವಾಗಿಯೂ ಹೇಳಬಹುದು. ಜಡ ಮತ್ತು ಅಂಧಕಾರಸ್ವರೂಪವಾದ ಪ್ರಪಂಚಕ್ಕೆ ತೇಜಸ್ಸನ್ನು ಎರಚತಕ್ಕವನು ಸೂರ್ಯನು. "ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷಃ" ಎಂಬ ಶ್ರುತ್ಯಾಧಾರದಂತೆ ಸೂರ್ಯನ ಅಂತರ್ಗತವಾಗಿ ಪರಬ್ರಹ್ಮವೂ ಈಶ್ವರನೂ ಇರುತ್ತಾರೆ. ಈಶ್ವರ ಸ್ವರೂಪಿಣಿಯಾದ ಶ್ರೀದೇವಿಯು ಜಗನ್ನಿಯಾಮಕಳಾಗಿ ಸೂರ್ಯನಲ್ಲಿ ನೆಲೆಸಿರುವವಳೆಂಬ ತತ್ವಾರ್ಥವನ್ನೂ ಮಾಡಬಹುದು. ಅಲ್ಲದೆ "ತತ್ಸೃಷ್ಟ್ವಾ ತದೇವಾನು ಪ್ರಾವಿಶತ್" ಎಂಬ ಶ್ರುತ್ಯಾಧಾರದಂತೆ ಜಡವಾದ

ಜಗತ್ತನ್ನು ಸೃಷ್ಟಿಸಿ ಚೇತನವನ್ನುಂಟುಮಾಡಲು ಅದರಲ್ಲಿ ಪ್ರವೇಶಿಸಿ ಅದನ್ನೇ ಆಸನವನ್ನಾಗಿ ಮಾಡಿಕೊಂಡು ಅಂತರ್ಯಾಮಿ ರೂಪದಿಂದ ಜಗನ್ನಿಯಾಮಕಳಾಗಿ ರುವವಳೆಂಬ ತತ್ವಾರ್ಥವನ್ನೂ ಮಾಡಬಹುದು.

ಸಿಂಹ ಎನ್ನುವ ಶಬ್ದಕ್ಕೆ "ಸಿಂಹ (ಹಿಸಿ) ಹಿಂಸಾಯಾಂ" ಹಿಂಸೆಮಾಡುವುದು ಎಂಬ ಅರ್ಥವೂ ಆಗುವುದರಿಂದ ಶುದ್ಧ ಸತ್ವಗುಣದಲ್ಲಿ ನೆಲಸಿರುವ ಶ್ರೀದೇವಿಯು ರಜಸ್ತಮೋಗುಣಗಳನ್ನು ಅವುಗಳ ಸ್ವೇಚ್ಛೆಗೆ ಬಿಡದೆ ಹಿಂಸಿಸಿ ಪ್ರತಿಬಂಧಕ ದಲ್ಲಿಟ್ಟು ರಜಸ್ತಮೋರೂಪವಾದ ಜಡ ಪ್ರಪಂಚವನ್ನೇ ಆಸನವನ್ನಾಗಿಮಾಡಿ ಕೊಂಡು ಜಗನ್ನಿಯಾಮಕಳಾಗಿರುವವಳೆಂಬ ಅರ್ಥವನ್ನೂ ಮಾಡಬಹುದು. ಪ್ರಪಂಚದಲ್ಲಿ ರಾಜರು ಸಿಂಹಾಸನವನ್ನೇರಿ ರಾಜ್ಯಾಡಳಿತವನ್ನು ಮಾಡುವರಷ್ಟೆ? ಇಂತಹ ಸಿಂಹಾಸನದ ತತ್ವವು ಶತೃಗಳನ್ನೆಲ್ಲಾ ಗೆದ್ದು ಅಜೇಯವಾಗಿರುವಿಕೆ ಯನ್ನೂ ತನ್ನ ತೇಜಃಪುಂಜವಾದ ದರ್ಪದಿಂದ ದುಷ್ಟನಿಗ್ರಹ ಶಿಷ್ಟಪರಿಪಾಲನಾ ಶಕ್ತಿಯನ್ನು ಹೊಂದಿರುವಿಕೆಯನ್ನೂ ಸೂಚಿಸುವಿಕೆಯೇ ಸಿಂಹಾಸನದ ತತ್ವವಾಗಿ ರುವುದು.

ಶ್ರೀಂ ಬೀಜಾಕ್ಷರವೆ ಸೃಷ್ಟಿಯನ್ನು ಅನುಸರಿಸಿ ಶ್ರೀಮಾತಾ ಎಂಬುದಾಗಿ ನಿಲ್ಲುವುದೆಂತ ಪ್ರಥಮನಾಮದಲ್ಲಿ ತಿಳಿಸಿತು. ೨, ೩ನೆಯ ನಾಮಗಳಲ್ಲಿ ಮಾತಾ ಎಂಬುದಕ್ಕೆ ಬದಲಾಗಿ ಜಗದ್ವ್ಯಾಪಾರವನ್ನು ಅನುಸರಿಸಿ ರಾಜ್ಞಿ ಮತ್ತು ಸಿಂಹಾಸ ನೇಶ್ವರಿ ಎಂದು ಕರೆಸಿಕೊಳ್ಳುವಳು. ೨, ೩ನೆಯ ನಾಮಗಳಲ್ಲಿ ನಿಯಾಮಕಳು ನಿಯಾಮಕಳಿಗೆ ಒಳಪಟ್ಟಿರುವ ಮತ್ತೊಂದು, ಹೀಗೆ ಎರಡಿರುವುವು. ಈ ಎರಡರಲ್ಲಿ ನಿಯಾಮಕಳೇ ಎಜಮಾನಿಯು. ನಿಯಾಮಕಳಿಗೆ ಒಳಪಟ್ಟಿರುವ ಮತ್ತೊಂದೇ ಯುಜಮಾನಿಯು ಕೈ ಕೆಳಗಿರುವವರಾಗಿರುತ್ತಾರೆ. ಅಂದರೆ ಒಂದು ವಿದ್ಯಾ ಮತ್ತೊಂದು ಅವಿದ್ಯಾ. ಒಂದು ಪರಾ ಮತ್ತೊಂದು ಅಪರಾ ಎನಿಸಿ ಕೊಳ್ಳುವುವು. ಇವುಗಳಲ್ಲಿ ನಿಯಾಮಕಳಾಗಿರುವವಳೇ ಮಹಾರಾಜ್ಞಿ ಮತ್ತು ಸಿಂಹಾಸನೇಶ್ವರಿಯಾಗಿರುತ್ತಾಳೆ.

'ಶ್ರೀ' ಅಕ್ಷರವೇ ಪ್ರಥಮಾಕ್ಷರವಾಗಿ ಸಹಸ್ರನಾಮದ ಪ್ರಥಮ ಮೂರು ನಾಮಗಳಿವೆ. ಸಹಸ್ರನಾಮದ ಅಂತ್ಯದ ೯೯೬, ೯೯೭, ೯೯೮ ನೆಯ ಮೂರು ನಾಮಗಳಲ್ಲೂ ಪ್ರಥಮಾಕ್ಷರವಾಗಿ 'ಶ್ರೀ' ಇದೆ. ಅಂತ್ಯದ ಮೂರು ನಾಮಗಳ ವಿಚಾರಗಳನ್ನು ಈ ಸಂದರ್ಭದಲ್ಲಿ ತಿಳಿಸಿದರೆ 'ಶ್ರೀಂ' ಬೀಜಾಕ್ಷರದ ಮಹಿಮೆಯನ್ನು ಇನ್ನೂ ಅತಿಶಯವಾಗಿ ತಿಳಿಯಬಹುದಾದುದರಿಂದ ಈ ಸ್ಥಳದಲ್ಲಿ ಬರೆದಿರುವುದು. ೯೯೬ನೆಯ ನಾಮವು ಶ್ರೀ ಚಕ್ರರಾಜನಿಲಯಾಯೈನಮಃ ಎಂದಿದೆ. ಮನುಷ್ಯನಲ್ಲಿ ಮೂಲಾಧಾರಾದಿ ಆರು ಚಕ್ರಗಳಲ್ಲಿ ಶ್ರೀದೇವಿಯು ಈಶ್ವರೀ ಸ್ವರೂಪಿಣಿಯಾಗಿ

ನೆಲೆಸಿರುವಳು. ಸಹಸ್ರಾರಕಮಲವೇ ಚಕ್ರಗಳಿಗೆಲ್ಲಾ ರಾಜನಂತಿರುವುದು. ಈ ಸಹಸ್ರಾರಕಮಲದಲ್ಲಿ ಶ್ರೀಂ ಬೀಜಾಕ್ಷರಪ್ರತಿಪಾದಿನಿಯೂ ನಿರ್ಗುಣಳೂ ಆದ ಪರಬ್ರಹ್ಮಸ್ವರೂಪಿಣಿಯು ನೆಲೆಸಿರುವಳು.

೯೯೭ನೆಯ ನಾಮವು ಶ್ರೀಮತ್ರಿಪುರಸುಂದರ್ಯೈನಮಃ ಎಂದಿರುವುದು. 'ಶ್ರೀ' ಎಂಬುದು ನಿರ್ಗುಣಬ್ರಹ್ಮಸ್ವರೂಪಿಣಿಯನ್ನೂ, ತ್ರಿಪುರಸುಂದರಿ ಎಂಬುದು ಸಗುಣವಾದ ಶುದ್ಧ ಸತ್ವ ಮಾಯಾರೂಪಿಣಿಯಾದ ಈಶ್ವರಿಯಸ್ವರೂಪವನ್ನೂ ಪ್ರತಿಪಾದಿಸುವುವು. ೯೯೮ ನೆಯ ನಾಮವು ಶ್ರೀ ಶಿವಾಯೈನಮಃ ಎಂದಿದೆ. ಇದರಲ್ಲಿ 'ಶ್ರೀ' ಎಂಬುದು ನಿರ್ಗುಣಬ್ರಹ್ಮವನ್ನೂ ಶಿವಾ ಎಂಬುದು ಸಗುಣನಾದ ಈಶ್ವರ ಸ್ವರೂಪವನ್ನೂ ಪ್ರತಿಪಾದಿಸುವುವು. ೯೯೯ ನೆಯ ನಾಮವು ಶಿವಶಕ್ತ್ಯೈಕ್ಯರೂಪಿಣ್ಯೈನಮಃ ಎಂದಿದೆ. ಅಂದರೆ ೯೯೭ನೆಯ ನಾಮವು ಶಕ್ತಿಸ್ವರೂಪವನ್ನೂ ೯೯೮ನೆಯ ನಾಮವು ಪ್ರತಿಫಲಿತಚೈತನ್ಯಸ್ವರೂಪನಾದ ಶಿವನನ್ನು ಪ್ರತಿಪಾದಿಸುವುವು. ೯೯೯ನೆಯ ನಾಮವು ಶಕ್ತಿಯು ಪ್ರತಿಫಲಿತ ಚೈತನ್ಯವೂ ಅಭೇದವಾಗಿ ಐಕ್ಯವಾಗುವ ಅಂದರೆ ಪರಬ್ರಹ್ಮಸ್ವರೂಪಮಾತ್ರ ಉಳಿದುಕೊಳ್ಳುವ ತತ್ವವನ್ನು ಪ್ರತಿಪಾದಿಸುವುದು. ಅಂದರೆ ಸಗುಣವಾಗಿ ಪ್ರಂಪಚರೂಪವಾಗಿ ಬೆಳೆದಿದ್ದ ಶ್ರೀಂ ಬೀಜಾಕ್ಷರದಲ್ಲಿನ ಅನುಸ್ವಾರವು ಪ್ರಪಂಚರೂಪದಿಂದ ತಿರೋಭೂತವಾಗಿ ಶುದ್ಧಅನುಸ್ವಾರವೆನಿಸಿ ಶ್ರೀ ಅಕ್ಷರದಲ್ಲಿ ಸೇರಿ 'ಶ್ರೀಂ' ಎನಿಸಿಕ್ಕೊಂಡು ಪರಬ್ರಹ್ಮಮಾತ್ರವಿರುವ ಸ್ಥಿತಿಯನ್ನು ೯೯೯ನೆಯ ನಾಮವು ಪ್ರತಿಪಾದಿಸುವುದು. ೧೦೦೦ನೆಯ ನಾಮವು ಲಲಿತಾಂಬಿಕಾ ಎಂದಿರುವುದರಿಂದ ಶ್ರೀಲಲಿತಾದೇವಿಯು ಇಂತಹ ಮಹತ್ತಿನವಳೆಂಬುದನ್ನು ಪ್ರತಿಪಾದಿಸುವುದು. 'ಶ್ರೀ' ಮತ್ತು ಶ್ರೀಂ ಅಕ್ಷರಗಳಲ್ಲಿ ಇಂತಹ ಮಹತ್ವವಿರುವುದರಿಂದಲೇ ಶ್ರೀ ಮಹಾವಿಷ್ಣುವು ಸಹಸ್ರನಾಮದ ಆದಿ ಮತ್ತು ಅಂತ್ಯಗಳ ಮೂರು ನಾಮಗಳಲ್ಲಿ ಶ್ರೀ ಅಕ್ಷರದೊಡಗೂಡಿದ ನಾಮಗಳನ್ನು ಅಗಸ್ತ್ಯರಿಗೆ ಉಪದೇಶಮಾಡಿರುತ್ತಾನೆ.

**೪. ಚಿದಗ್ನಿಕುಣ್ಡ ಸಂಭೂತಾಯೈನಮಃ-—**

ಸಚ್ಚಿದಾನಂದವೆ ಪರಬ್ರಹ್ಮಿಣಿಯ ಸ್ವರೂಪವು. ಇದನ್ನು ಪ್ರಥಮ ನಾಮದ ವಿವರಣೆಯಲ್ಲೇ ತಿಳಿಸಿರುವುದು. ಸಚ್ಚಿದಾನಂದದಲ್ಲಿನ ಚಿತ್ ಎನ್ನುವುದೇ ಸ್ವಯಂಪ್ರಕಾಶಸ್ವರೂಪವು. ಆದುದರಿಂದ ಸ್ವಯಂ ಪ್ರಕಾಶವಾದ ಪರಬ್ರಹ್ಮವೇ ಚಿದಗ್ನಿಕುಣ್ಡ. ಇದಕ್ಕೆ ಚಿಜ್ಜ್ಯೋತಿ, ವಿದ್ಯುಜ್ಜ್ಯೋತಿ, ಬ್ರಹ್ಮಾಗ್ನಿ ಮುಂತಾದ ನಾಮಗಳಿವೆ. ಸ್ವಯಂಪ್ರಕಾಶ ಸ್ವರೂಪಿಣಿಯಾದ ಶ್ರೀದೇವಿಯು ಶ್ರೀಲಲಿತಾವತಾರ ಮಾಡಲು ಸ್ವಯಂಪ್ರಕಾಶದಿಂದ ಸಂಭೂತ ಎಂದರೆ ಆವಿರ್ಭವಿಸುವಳು. ಹೀಗೆ ಆವಿರ್ಭವಿಸಿ ಸಗುಣದಲ್ಲಿ ಶುದ್ಧ ಸತ್ವ ಮಾಯಾರೂಪಿಣಿಯಾಗಿ ನೆಲೆಸುವಳು.

ಬ್ರಹ್ಮಾಧಿಕಾರಿಯಲ್ಲಿ 'ನಾನು' ಎಂಬ ಜ್ಞಾನವು ನಿರ್ವಿಕಲ್ಪಸಮಾಧಿಯಲ್ಲಿ ಸ್ವಯಂ ಪ್ರಕಾಶವಾದ ಚಿದಗ್ನಿಕುಣ್ಡದಲ್ಲಿ ಲೀನವಾಗಿದ್ದು ಸಮಾಧಿಯಿಂದ ಬಹಿರ್ಮುಖವಾಗುವಕಾಲದಲ್ಲಿ "ನಾನು" ಎಂಬ ಜ್ಞಾನವು ಚಿದಗ್ನಿಯಿಂದ ಉದಯಿಸುವ ತತ್ವವೂ ಕೂಡ ಚಿದಗ್ನಿಕುಣ್ಡಸಂಭೂತ ಎನ್ನುವುದಾಗಿದೆ.

### ೫. ದೇವಕಾರ್ಯ ಸಮುದ್ಯತಾಯೈನಮಃ—

ರಾಕ್ಷಸರನ್ನು ನಿಗ್ರಹಿಸಿ ದೇವತೆಗಳನ್ನು ಉದ್ಧರಿಸುವ ಕಾರ್ಯಕ್ಕೋಸ್ಕರ ಪರಬ್ರಹ್ಮ ಸ್ವರೂಪಿಣಿಯಾದ ಶ್ರೀದೇವಿಯು ಶ್ರೀಲಲಿತಾ ಎಂಬ ನಾಮಾಂಕಿತದಿಂದ ಅವತರಿಸುವವಳು. ಅಂದರೆ ಅಧರ್ಮವನ್ನು ಹೋಗಲಾಡಿಸಿ ಧರ್ಮಸಂಸ್ಥಾಪನೆಮಾಡಲು ಅವತರಿಸುವವಳು.

### ೬. ಉದ್ಯದ್ಭಾನು ಸಹಸ್ರಾಭಾಯೈನಮಃ—

ಉದಯಿಸುತ್ತಿರುವ ಸಹಾಸ್ರಾರು ಸೂರ್ಯರ ಸದೃಶವಾದ ಪ್ರಕಾಶವುಳ್ಳವಳು.

### ೭. ಚತುರ್ಬಾಹು ಸಮನ್ವಿತಾಯೈನಮಃ—

ನಾಲಕ್ಕು ಬಾಹುಗಳುಳ್ಳವಳು. ಪಾಶ, ಅಂಕುಶ, ಕಬ್ಬಿನಜಲ್ಲೆ, ಹುವ್ವಿನ ಬಾಣಗಳನ್ನು ಕ್ರಮವಾಗಿ ನಾಲಕ್ಕು ಹಸ್ತಗಳಲ್ಲಿ ಧರಿಸಿರುತ್ತಾಳೆ.

### ೮. ರಾಗಸ್ವರೂಪ ಪಾಶಾಢ್ಯಾಯೈನಮಃ—

ಆಹ್ಲಾದಕರವಾದ ಪಾಶವನ್ನು ಧರಿಸಿರುವವಳು. ರಾಗವೆಂದರೆ- "ರಂಜಯತೀತಿ ರಾಗ" ಆಹ್ಲಾದವನ್ನುಂಟು ಮಾಡುವುದು ಎಂಬದಾಗಿ ನಿಘಂಟಿನಲ್ಲೇ ವ್ಯುತ್ಪತ್ತಿಯು ಇರುವುದು. ಸಂಗೀತಶಾಸ್ತ್ರದಲ್ಲೂ ರಾಗವೆಂದರೆ ಆಹ್ಲಾದವನ್ನುಂಟುಮಾಡುವುದೆಂಬ ಅರ್ಥವನ್ನೇ ಬರೆದಿದೆ. ಆಹ್ಲಾದವು ಆನಂದಾಂಶಕ್ಕೆ ಸೇರಿರುತ್ತೆ. ಆದುದರಿಂದ ಆಹ್ಲಾದ, ಸುಖವೆನಿಸುವ ಆನಂದಾಂಶದಿಂದಲೆ ಪ್ರಾಣಿಗಳನ್ನು ಕಟ್ಟಿಹಾಕಿ ಪ್ರಪಂಚದ ವ್ಯಾಪಾರವನ್ನು ನಡೆಸುವ ತತ್ವದ ಸೂಚನೆಯೇ ಶ್ರೀದೇವಿಯ ಹಸ್ತದಲ್ಲಿ ರಾಗಸ್ವರೂಪ ಪಾಶವು ಇರುವುದಾಗಿದೆ. ಈ ಪಾಶದಿಂದ ಶತ್ರುಗಳನ್ನು ಬಂಧಿಸುವಳೆಂದರೆ ಅವಿದ್ಯೆಯನ್ನು ಆನಂದದಿಂದ ಬಂಧಿಸಿ ನಿಗ್ರಹಿಸುವಳು. ಅಲ್ಲದೆ ಜಗತ್ತಿನ ಸರ್ವ ಪದಾರ್ಥಗಳೂ ತಮ್ಮ ತಮ್ಮ ಸ್ಥಾನಗಳನ್ನು ಬಿಡದಂತೆ ಈ ಪಾಶದಿಂದ ಬದ್ಧವಾಗಿವೆ. ಈ ಮೇಲಿನ ತತ್ವಾರ್ಥ ಸಮರ್ಥನೆಗೆ "ಆನಂದಾಧ್ಯೇವ ಖಲ್ವಿಮಾನಿಭೂತಾನಿ ಜಾಯಂತೇ ಆನಂದೇನ ಜಾತಾನೀ ಜೀವಂತೀ" ಎಂಬ ಶ್ರುತಿ ವಾಕ್ಯವು ಆಧಾರವಾಗಿದೆ.

## ೯. ಕ್ರೋಧಾಕಾರಾನ್ಕುಶೋಜ್ಜ್ವಲಾಯೈನಮಃ—

ಕೋಪವೇ ಮೂರ್ತಿವತ್ತಾಗಿರುವ ಬಹು ತೀಕ್ಷ್ಣವಾದ ಅಂಕುಶವನ್ನು ಧರಿಸಿರುವವಳು. ಕ್ರೋಧವೆಂದರೆ—"ಕ್ರುಧ್ಯತೀತಿ ಕ್ರೋಧನಃ ಕ್ರುಧಕ್ರೋಧೆ" ಎಂಬ ನಿಘಂಟಿನ ವ್ಯುತ್ಪತ್ತಿಯನ್ನು ಅನುಸರಿಸಿ ಕೋಪಿಸುವಿಕೆ ಎಂದರ್ಥವು. ಆದುದರಿಂದ ಶ್ರೀದೇವಿಯು ಕೋಪವೇ ಮೂರ್ತಿವತ್ತಾಗಿ ಹೊಳೆಯುವ ಅಂಕುಶವನ್ನು ಧರಿಸಿರುವಿಕೆಯು ಈಶ್ವರೀಸ್ವರೂಪಿಣಿಯಾಗಿರತಕ್ಕ ಆಕೆಯ ಪ್ರಭುಶಕ್ತಿಯ ಮಹತ್ತನ್ನು ಪ್ರತಿಪಾದಿಸುವುದು. ಈ ಅಂಕುಶಾಯುಧದಿಂದ ರಾಕ್ಷಸರನ್ನು ನಿಗ್ರಹಿಸುವಳೆಂದರೆ ಪ್ರಭುಶಕ್ತಿಯು ಅಂತಹ ಮಹತ್ವವಾದುದು ಈ ಅಂಕುಶದ ಭಯದಿಂದ ಅಂದರೆ ಶ್ರೀದೇವಿಯ ಪ್ರಭುಶಕ್ತಿಯ ಭಯಕ್ಕೆ ವಾಯುವು ಚಲಿಸುತ್ತದೆ; ಸೂರ್ಯನು ಪ್ರಕಾಶಿಸುತ್ತಾನೆ ಮತ್ತು ಸಕಲ ಭೂತಗಳೂ ಪ್ರಾಣಿಗಳೂ ತಮ್ಮ ತಮ್ಮ ಕಾರ್ಯಗಳನ್ನು ಮಾಡುತ್ತವೆ. ಈ ಮೇಲಿನ ತತ್ವ ಸಮರ್ಥನೆಗೆ "ಭೀಷಾಸ್ಮಾದ್ವಾತಃ ಪವತೇ ಭೀಷೋದೇತಿ ಸೂರ್ಯಃ" ಇತ್ಯಾದಿ ಶ್ರುತಿ ಪ್ರಮಾಣಗಳಿವೆ.

ಹಿಂದಿನ ನಾಮದಲ್ಲಿರತಕ್ಕ ರಾಗ ಎಂಬುದಕ್ಕೆ ಅನುರಕ್ತಿ, ಚಿತ್ತವೃತ್ತಿ ವಿಶೇಷ, ಇಚ್ಛೆ ಎಂಬ ಅರ್ಥವನ್ನೂ, ಈ ನಾಮದಲ್ಲಿನ ಕ್ರೋಧ ಎಂಬುದಕ್ಕೆ ದ್ವೇಷವೆಂದು ಭಾಸ್ಕರರಾಯರ ಭಾಷ್ಯದಲ್ಲಿ ಬರೆದಿರುತ್ತೆ. ಅನುರಕ್ತಿಯೆಂದರೆ ಮೋಹದಿಂದ ವಿಷಯಾಸಕ್ತಿಯಾಗಿ ಇರುವಿಕೆಯೆಂದು ಅರ್ಥ. ದೇವತೆಗಳನ್ನು ಉದ್ಧಾರಮಾಡಲು ಅವತಾರಮಾಡಿರುವ ದೇವತ್ವವಾದ ಈಶ್ವರೀ ಸ್ಥಿತಿಯಲ್ಲಿ ನೆಲಸಿರುವ ಶ್ರೀದೇವಿಗೆ ಅವಿದ್ಯಾಸ್ವರೂಪವಾಗಿರುವ ಅನುರಕ್ತಿ ದ್ವೇಷ ಮುಂತಾದವುಗಳು ಖಂಡಿತ ಅನ್ವಯಿಸುವುದಿಲ್ಲ. ೪ ನೆಯ ನಾಮದಿಂದ ೮೦ ನೆಯ ನಾಮದವರೆಗೆ ಅವತಾರಮಾಡಿ ಈಶ್ವರೀ ಸ್ಥಿತಿಯಾದ ಶುದ್ಧಸತ್ವದಲ್ಲಿ ನೆಲಸಿರುವ ಶ್ರೀದೇವಿಯ ಸಗುಣರೂಪಿನ ವರ್ಣನೆಯೇ ಇರುವುದರಿಂದ ದ್ವೇಷ, ಅನುರಕ್ತಿ ಮುಂತಾದ ರಾಕ್ಷಸೀಸ್ವಭಾವದ ಅರ್ಥವನ್ನು ಆರೋಪಿಸಲೇಬಾರದು.

## ೧೦. ಮನೋರೂಪೇಕ್ಷು ಕೋದಣ್ಡಾಯೈನಮಃ—

"ಮನ ಜ್ಞಾನೆ ಅವಬೋಧನೆ" ಎಂಬ ಅರ್ಥದಂತೆ ಜ್ಞಾನ ಸ್ವರೂಪವಾದುದು. ಇಕ್ಷು ಅಂದರೆ ಕಬ್ಬಿನ ಜಲ್ಲೆ. ಕೋದಂಡವೆಂದು "ಸಾವಿತ್ರೀ ರೂಪ ಮೌರ್ವೀ ಓಂಕಾರ ರೂಪಂಧನುಃ ಅಸ್ಯಾಸ್ತೀತಿ ಕೋದಂಡೀ" ಎಂಬ ಶಿವ ಸಹಸ್ರನಾಮದ ಭಾಷ್ಯದಂತೆ ಓಂಕಾರರೂಪವಾದ ಧನುಸ್ಸಿಗೆ ಕೋದಂಡವೆಂದು ಹೆಸರು. ಅಂದರೆ, ಬ್ರಹ್ಮರಂಧ್ರ ನಾಡಿಯೇ ಕಬ್ಬಿನ ಜಲ್ಲೆಯ ತತ್ವ. ಕಬ್ಬಿನ ಜಲ್ಲೆಯಲ್ಲಿ ಗಿಣ್ಣುಗಳಿರುವಂತೆ ಬ್ರಹ್ಮರಂಧ್ರದಲ್ಲಿ ಷಟ್ಚಕ್ರರೂಪವಾದ ಗ್ರಂಥಿ

ಗಳಿರುವುವು. ಕಬ್ಬಿನಲ್ಲಿರುವ ಮಧುರಸ್ವರೂಪವೇ ಬ್ರಹ್ಮರಂಧ್ರದಲ್ಲಿರುವ ಅಮೃತ ಸ್ವರೂಪವು. ಬ್ರಹ್ಮರಂಧ್ರನಾಡಿಯು ಓಂಕಾರ ಸ್ವರೂಪವಾದುದರಿಂದಲೂ, ಪ್ರಕಾಶಸ್ವರೂಪವಾದುದರಿಂದಲೂ ಇದೇ ಕೋದಂಡದ ತತ್ವ. ಅಂದರೆ ಆನಂದ ಮಯವೂ ಓಂಕಾರಸ್ವರೂಪವೂ ಚಕ್ರಗಳ ತತ್ವಗಳೂ ಉಳ್ಳ ಬ್ರಹ್ಮರಂಧ್ರನಾಡಿಯ ಸ್ವರೂಪವಾದ ಅಂದರೆ ಓಂಕಾರರೂಪವಾದ ಧನುಸ್ಸನ್ನು ಧರಿಸಿರುವವಳು.

**೧೧. ಪಞ್ಚತನ್ಮಾತ್ರ ಸಾಯಕಾಯೈನಮಃ—**

ಪಞ್ಚತನ್ಮಾತ್ರೆಗಳ ಸ್ವರೂಪವಾದ ಬಾಣಗಳನ್ನು ಧರಿಸಿರುವವಳು. ಅಂದರೆ ಪಞ್ಚಭೂತಗಳ ಸೂಕ್ಷ್ಮವಾದ ತನ್ಮಾತ್ರೆಗಳ ಸ್ವರೂಪವೆ ಬಾಣಗಳು. ಅಂದರೆ ೧೦ ನೆಯ ನಾಮದಲ್ಲಿರುವ ಓಂಕಾರ ಸ್ವರೂಪವಾದ ಧನುಸ್ಸನ್ನು ಹೆದೆಯೇರಿಸಿ ತಿರೋಭೂತ ಕ್ರಮದಿಂದ ಪಞ್ಚಭೂತಗಳನ್ನೂ ಇವುಗಳಿಗೆ ಕಾರಣ ಗಳಾದ ಪಞ್ಚತನ್ಮಾತ್ರೆಗಳನ್ನೂ ಉಪಸಂಹಾರಮಾಡಿ ೧೪ ಲೋಕಗಳನ್ನೂ ಲಯಗೊಳಿಸಿ ಪರಬ್ರಹ್ಮ ಒಂದೇ ಉಳಿಯುವ ಕಾರ್ಯದ ತತ್ವವೇ ೧೦ ಮತ್ತು ೧೧ ನೇ ನಾಮಗಳ ಧನುಸ್ಸಿನ ಮತ್ತು ಬಾಣಗಳ ಕಾರ್ಯಗಳ ತತ್ವವಾಗಿರುವುದು. ಅಲ್ಲದೆ ಪಿಂಡಾಂಡಸ್ವರೂಪವಾದ ಮನುಷ್ಯರಲ್ಲೂ ಓಂಕಾರೋಪಾಸನೆಯ ಸ್ವರೂಪವಾದ ಧನುಸ್ಸನ್ನು ಹೆದೆಯೇರಿಸಿ ಶಬ್ದ, ಸ್ಪರ್ಶ, ರೂಪ, ರಸ, ಗಂಧ ಸ್ವರೂಪವಾದ ಪಂಚತನ್ಮಾತ್ರಾಜ್ಞಾನರೂಪವನ್ನು ಅಂದರೆ ಐದು ಜ್ಞಾನೇಂದ್ರಿಯ ಗಳನ್ನು ಒಟ್ಟುಗೂಡಿಸಿ ಪರಬ್ರಹ್ಮನಲ್ಲಿ ಆತ್ಮಾರ್ಪಣೆಯೆಂದರೆ ಅಹಂಬ್ರಹ್ಮಾಸ್ಮಿಯ ಜ್ಞಾನದಿಂದ ಲಯಗೊಳಿಸಿ ಪರಬ್ರಹ್ಮ ಸಾಕ್ಷಾತ್ಕಾರಸ್ವರೂಪವಾದ ಮೋಕ್ಷವನ್ನು ಹೊಂದುವಿಕೆಯೆ ೧೦ ನೇ ನಾಮದ ಧನುಸ್ಸಿನ ಮತ್ತು ೧೧ ನೆಯ ನಾಮದ ಬಾಣದ ತತ್ವವಾಗಿರುವುದು.

ಮುಖ್ಯವಾಗಿ ಶ್ರೀದೇವಿಯ ಹಸ್ತಗಳಲ್ಲಿರುವ ಪಾಶಾಂಕುಶಗಳು ಜಗತ್ತನ್ನೂ ಪ್ರಾಣಿಗಳನ್ನೂ ಕರ್ಮಪಾಶದಿಂದ ಬಂಧಿಸಿ ಜಗದ್ವ್ಯಾಪಾರವನ್ನು ನಡೆಸುವ ತತ್ವದ್ದಾಗಿರುತ್ತವೆ. ಶ್ರೀದೇವಿಯ ಹಸ್ತಗಳಲ್ಲಿರುವ ಧನುಸ್ಸು ಮತ್ತು ಬಾಣಗಳು ಬ್ರಹ್ಮಾಂಡದ ಲಯಕ್ರಮದ ತತ್ವವನ್ನೂ ಮನುಷ್ಯನು ಮೋಕ್ಷವನ್ನು ಹೊಂದುವ ಕ್ರಮದ ತತ್ವವನ್ನೂ ಸೂಚಿಸುವುದು. ಅಲ್ಲದೆ ಭಕ್ತಾದಿಗಳಿಗೆ ಇಂತಹ ಮೋಕ್ಷ ಸಾಧನಾಕ್ರಮವನ್ನು ಅನುಗ್ರಹಿಸುವವಳೆಂಬ ತತ್ವದ ಸೂಚನೆಯನ್ನೂ ಸಹ ಪ್ರತಿಪಾದಿಸುವುದು.

**೧೨. ನಿಜಾರುಣ ಪ್ರಭಾಪೂರ ಮಜ್ಜದ್ಬ್ರಹ್ಮಾಣ್ಡ ಮಣ್ಡಲಾಯೈನಮಃ—**

ತನ್ನ ರತ್ನಸದೃಶವಾದ ಕಾಂತಿಯ ಪ್ರವಾಹದಿಂದ ಬ್ರಹ್ಮಾಂಡವನ್ನೆಲ್ಲಾ ಮುಳುಗಿಸುತ್ತಿರುವವಳು. ಅಂದರೆ ಚಂದ್ರ, ಸೂರ್ಯರನ್ನು ಸೃಷ್ಟಿಸಿ ಅವರಿಗೂ ಕಾಂತಿಯನ್ನು ಕೊಡತಕ್ಕವಳೆಂಬ ತತ್ವವು.

೧೩. ಚಮ್ಪಕಾ ಶೋಕ ಪುನ್ನಾಗ ಸೌಗನ್ಧಿಕಲಸತ್ಕಚಾಯೈನಮಃ—

ಶ್ರೀದೇವಿಯ ಜಡೆಯು ಚಂಪಕ, ಅಶೋಕ, ಪುನ್ನಾಗ, ಸೌಗಂಧಿಕ ಪುಷ್ಪಗಳಿಂದ ಅಲಂಕರಿಸಲ್ಪಟ್ಟಿದೆ. ಜೇನುಹುಳುಗಳಿಂದ ಆಸ್ವಾದಿಸಲ್ಪಡದಿರುವುದರಿಂದ ಚಂಪಕವೆಂಬ ಹೆಸರು. ಶೋಕವೇ ಇಲ್ಲದೆ ಆನಂದ ರೂಪವನ್ನು ಉಂಟು ಮಾಡುವವದರಿಂದ ಅಶೋಕವೆಂಬ ಹೆಸರು. ಪುರುಷಶ್ರೇಷ್ಠನಂತೆ ಪೂಜ್ಯವಾದದ್ದಾದುದರಿಂದ ಪುನ್ನಾಗವು. ಇದೇ ಸುರಹೊನ್ನೇ ಪುಷ್ಪ. ಒಳ್ಳೇ ಪರಿಮಳವಾದ್ದರಿಂದ ಸೌಗಂಧಿಕಾ ಎಂದು ಹೆಸರು. ಶ್ರೀಲಲಿತಾದೇವಿಯ ವಿರಾಟ್ ಸ್ವರೂಪದಲ್ಲಿ ಅವಳ ಶಿರಸ್ಸು ವಿಶ್ವದಲ್ಲಿ ವ್ಯಾಪಿಸಿರುವ ಕಳಾಸ್ವರೂಪವಾಗಿದೆ. ವ್ಯಷ್ಟಿಯಲ್ಲಿ ಆನಂದಮಯಕೋಶವಾಗಿದೆ. ಪುಷ್ಪಗಳ ತತ್ವಗಳು ಆನಂದಮಯ ಕೋಶ ಮತು ಕಳಾದಲ್ಲಿರುವ ಮಹತ್ವಕ್ಕೆ ಅನ್ವಯವಾಗುವುವು.

೧೪. ಕುರುವಿನ್ದ ಮಣಿಶ್ರೇಣೀ ಕನಕತ್ಕೋಟೀರ ಮಣ್ಡಿತಾಯೈನಮಃ—

ಪದ್ಮರಾಗ ಮಣಿಗಳ ಪಂಜ್ಞ್ತಿಗಳಿಂದ ಥಳಥಳಿಸುತ್ತಿರುವ ಕಿರೀಟದಿಂದ ಶೃಂಗರಿಸಲ್ಪಟ್ಟವಳು.

೧೫. ಅಷ್ಟಮೀಚನ್ದ್ರ ಬಿಭ್ರಾಜ ದಳಿಕಸ್ಥಲಶೋಭಿತಾಯೈನಮಃ—

ಅಷ್ಟಮಿ ದಿನದ ಚಂದ್ರನೋಪಾದಿಯಲ್ಲಿ ಅಂದರೆ ಅರ್ಧಚಂದ್ರಾಕಾರವಾಗಿ ಪ್ರಕಾಶಮಾನವಾದ ಹಣೆಯುಳ್ಳವಳು.

೧೬. ಮುಖಚನ್ದ್ರ ಕಳಂಕಾಭ ಮೃಗನಾಭಿ ವಿಶೇಷಕಾಯೈನಮಃ—

ಚಂದ್ರಪ್ರಕಾಶವಾಗಿರುವ ಮುಖದ ಹಣೆಯ ಮಧ್ಯದಲ್ಲಿ ಚಂದ್ರನ ಮಧ್ಯದಲ್ಲಿರುವ ಚಿಹ್ನೆಯಂತೆ ಕಸ್ತೂರಿ ಚುಕ್ಕೆಯುಳ್ಳವಳು.

೧೭. ವದನಸ್ಮರ ಮಾಙ್ಗಲ್ಯ ಗೃಹತೋರಣ ಚಿಲ್ಲಿಕಾಯೈನಮಃ—

ಮನ್ಮಥನ ಮಂಗಳಕರವಾದ ಅರಮನೆಯಾಗಿರುವ ಶ್ರೀದೇವಿಯ ಮುಖದಲ್ಲಿ ಮನ್ಮಥನ ಅರಮನೆಯ ಹೆಬ್ಬಾಗಿಲಿನ ತೋರಣದಂತಿರುವ ಬಹು ರಮ್ಯವಾದ ಹುಬ್ಬುಗಳುಳ್ಳವಳು.

೧೮. ವಕ್ತ್ರಲಕ್ಷ್ಮೀ ಪರೀವಾಹ ಚಲನ್ಮೀನಾಭ ಲೋಚನಾಯೈನಮಃ—

ತಿಳಿನೀರಿನಲ್ಲಿ ಹರಿದಾಡಿ ಹೊರಳಿ ಥಳಗುಟ್ಟುವ ಮೀನಿನಂತೆ ಸುಂದರವಾದ ಮುಖಕಾಂತಿ ಪ್ರವಾಹದಲ್ಲಿ ಥಳಥಳಿಸುತ್ತಿರುವ ನೇತ್ರಗಳುಳ್ಳವಳು.

**೧೯. ನವಚಮ್ಪಕ ಪುಷ್ಪಾಭ ನಾಸಾದಣ್ಡವಿರಾಜಿತಾಯೈನಮಃ—**

ಈಗ ತಾನೇ ಅರಳುತ್ತಿರುವ ಚಂಪಕಾಪುಷ್ಪ ಸದೃಶವಾದ ನಾಸಿಕವುಳ್ಳವಳು.

**೨೦. ತಾರಾಕಾನ್ತಿ ತಿರಸ್ಕಾರಿ ನಾಸಾಭರಣ ಭಾಸುರಾಯೈನಮಃ—**

ನಕ್ಷತ್ರಗಳ ಕಾಂತಿಯನ್ನು ತಿರಸ್ಕರಿಸುವಂತಹ ಮೂಗುಬಟ್ಟಿನಿಂದ ಪ್ರಕಾಶಿಸ ತಕ್ಕವಳು.

**೨೧. ಕದಮ್ಬ ಮಞ್ಜರೀಕ್ಲಪ್ತ ಕರ್ಣಪೂರ ಮನೋಹರಾಯೈನಮಃ—**

ಕದಂಬಪುಷ್ಪಗಳ ಗೊಂಚಲುಗಳಿಂದ ರಚಿತವಾದ ಕರ್ಣಪೂರವೆಂಬ ಆಭರಣ ದಿಂದ ಮನೋಹರವಾಗಿರುವವಳು. ಕದಂಬವೆಂದರೆ ದೇವಲೋಕದಲ್ಲಿರುವ ದೇವಯೋಗ್ಯವಾದ ಒಂದು ವಿಧವಾದ ವೃಕ್ಷ. ಕದಂಬವೆಂದರೆ ಭೂಮಿಯಲ್ಲಿರುವ ಈಚಲುಗಿಡವಲ್ಲ. ಕದಂಬ ವೃಕ್ಷವನ್ನು ಸಹಸ್ರಾರಕಮಲದ ಕರ್ಣಿಕಾಪ್ರದೇಶಕ್ಕೆ ಮುಂದೆ ಅನ್ವಯಿಸಿ ಃರೆದಿದೆ.

**೨೨. ತಾಟಙ್ಕ ಯುಗಳೀಭೂತ ತಪನೋಡುಪ ಮಣ್ಡಲಾಯೈನಮಃ —**

ಸೂರ್ಯಚಂದ್ರ ಮಂಡಲಗಳನ್ನು ಒಂದು ಜೊತೆ ವಾಲೆಯಾಗಿ ಕಿವಿಯಲ್ಲಿ ಧರಿಸಿರುವವಳು.

**೨೩. ಪದ್ಮರಾಗಶಿಲಾದರ್ಶ ಪರಿಭಾವಿ ಕಪೋಲಭುವೇನಮಃ—**

ಹೊಳಪಿನಲ್ಲಿ ಕೆಂಪುಛಾಯೆಯುಳ್ಳ ಪದ್ಮರಾಗದ ರತ್ನಕನ್ನಡಿಯನ್ನು ತಿರ ಸ್ಕರಿಸುವಂತಹ ಕೆನ್ನೆಗಳುಳ್ಳವಳು.

**೨೪. ನವವಿದ್ರುಮ ಬಿಮ್ಬಶ್ರೀ ನ್ಯಕ್ಕಾರಿ ರದನಚ್ಛದಾಯೈನಮಃ—**

ನೂತನವಾದ ಹವಳದ ಮತ್ತು ತೊಂಡೇಹಣ್ಣಿನ ಕಾಂತಿಯನ್ನು ಧಿಕ್ಕರಿಸ ತಕ್ಕ ತುಟಿಗಳುಳ್ಳವಳು.

**೨೫. ಶುದ್ಧವಿದ್ಯಾಙ್ಕುರಾಕಾರ ದ್ವಿಜಪಂಙ್ಕ್ತಿದ್ವಯೋಜ್ವಲಾಯೈನಮಃ-**

ಶುದ್ಧವಾದ ವಿದ್ಯೆಯ ಮೊಳಕೆಗಳ ಆಕಾರದಲ್ಲಿರುವ ಹಲ್ಲುಗಳ ಸಾಲು ಗಳಿಂದ ಶೋಭಿಸತಕ್ಕವಳು. ಎಂತಹ ಅವಿದ್ಯೆಯು ಬಂದರೂ ಈ ಹಲ್ಲುಗಳಿಂದ ಚೂರ್ಣವಾಗಿ ಹೋಗುವುದು.

**೨೬. ಕರ್ಪೂರವೀಟಿಕಾಮೋದ ಸಮಾಕರ್ಷದ್ದಿಗನ್ತರಾಯೈನಮಃ—**

ಎಲ್ಲಾ ದಿಕ್ಕುಗಳಲ್ಲೂ ಆಕರ್ಷಿತವಾಗಿರುವಂತೆ ಇರುವ ತಾಂಬೂಲಚರ್ವಣದ ಸುವಾಸನೆಯುಳ್ಳವಳು.

**೨೭. ನಿಜಸಲ್ಲಾಪ ಮಾಧುರ್ಯ ವಿನಿರ್ಭರ್ತ್ಸಿತ ಕಚ್ಛಪ್ಯೈನಮಃ—**

ಶ್ರೀ ಸರಸ್ವತೀ ಹಸ್ತದಲ್ಲಿರುವ ವೀಣೆಯ ನಾದವನ್ನು ನಾಚಿಕೆಪಡಿಸುವಂತಹ ಬಹು ಮಧುರವಾದ ಕಂಠಧ್ವನಿಯುಳ್ಳವಳು.

**೨೮. ಮನ್ದಸ್ಮಿತ ಪ್ರಭಾಪೂರ ಮಜ್ಜತ್ಕಾಮೇಶ ಮಾನಸಾಯೈನಮಃ—**

ತನ್ನ ಪತಿಯಾದ ಈಶ್ವರನ ಮನಸ್ಸನ್ನು ತನ್ನ ಕಿರುನಗೆಯ ಕಾಂತಿಪ್ರವಾಹ ದಲ್ಲಿ ಮುಳುಗಿಸಿರತಕ್ಕವಳು. .

**೨೯. ಅನಾಕಲಿತ ಸಾದೃಶ್ಯ ಚುಬಕ ಶ್ರೀವಿರಾಜಿತಾಯೈನಮಃ—**

ಯಾವುದಕ್ಕೂ ಸದೃಶವಾಗದ ಚುಬಕವೆಂದರೆ ಗಲ್ಲದ ಕಾಂತಿಯಿಂದ ಪ್ರಕಾಶಿಸುವವಳು.

**೩೦. ಕಾಮೇಶಬದ್ಧ ಮಾಙ್ಗಲ್ಯಸೂತ್ರ ಶೋಭಿತಕನ್ಧರಾಯೈನಮಃ—**

ಈಶ್ವರನಿಂದ ಕಟ್ಟಲ್ಪಟ್ಟ ಸುಮಂಗಲತ್ವದ ಮಂಗಳಸೂತ್ರದಿಂದ ಶೋಭಿ ಸುವ ಕಂಠವುಳ್ಳವಳು.

**೩೧. ಕನಕಾಙ್ಗದಕೇಯೂರ ಕಮನೀಯಭುಜಾನ್ವಿತಾಯೈನಮಃ—**

ರತ್ನಗಳಿಂದ ಕೆತ್ತಲ್ಪಟ್ಟ ಸುವರ್ಣದ ಬಾಹುಪುರಿಗಳಿಂದಲೂ ಭುಜಕೀರ್ತಿ ಗಳಿಂದಲೂ ಶೋಭಾಯಮಾನವಾದ ಭುಜಗಳುಳ್ಳವಳು.

**೩೨. ರತ್ನಗ್ರೈವೇಯಚಿನ್ತಾಕ ಲೋಲಮುಕ್ತಾಫಲಾನ್ವಿತಾಯೈನಮಃ—**

ರತ್ನಮಯವಾದ ಕಂಠಾಭರಣ ಮತ್ತು ಚಿಂತಾಕವೆಂಬ ಆಭರಣಗಳಲ್ಲಿ ಜೋಲಾಡುತ್ತಿರುವ ಮುತ್ತುಗಳಿಂದ ಅಲಂಕೃತಯಾದವಳು.

**೩೩. ಕಾಮೇಶ್ವರಪ್ರೇಮರತ್ನಮಣಿ ಪ್ರತಿಪಣಸ್ತನ್ಯೈನಮಃ—**

ತನ್ನ ಪತಿಯಾದ ಈಶ್ವರನ ಪ್ರೇಮವೆಂಬ ರತ್ನಕ್ಕೆ ಪ್ರತಿಫಲರೂಪವಾಗಿರುವ ಸ್ತನಗಳುಳ್ಳವಳು.

**೩೪. ನಾಭ್ಯಾಲವಾಲರೋಮಾಳಿ ಲತಾಫಲಕುಚದ್ವಯ್ಯೈನಮಃ—**

ಹೊಕ್ಕಳೆಂಬ ಪಾತಿಯಿಂದ ಹಬ್ಬಿದ ರೋಮರಾಜಿ ಎಂಬ ಲತೆಯ ಹಣ್ಣುಗಳಂತಿರುವ ಸ್ತನದ್ವಯವುಳ್ಳವಳು.

**೩೫. ಲಕ್ಷ್ಯರೋಮಲತಾಧಾರತಾ ಸಮುನ್ನೇಯ ಮಧ್ಯಮಾಯೈ ನಮಃ—**

ಕಾಣಬರುತ್ತಿರುವ ರೋಮರಾಜಿಯೆಂಬ ಬಳ್ಳಿಗೆ ಆಧಾರವಾಗಿರುವಿಕೆಯಿಂದ ಊಹಿಸಬಹುದಾದ ಸೊಂಟವುಳ್ಳವಳು.

**೩೬. ಸ್ತನಭಾರದಳನ್ಮಧ್ಯ ಪಟ್ಟಬನ್ಧವಳಿತ್ರಯಾಯೈನಮಃ—**

ವಳಿಯೆಂದರೆ ಹೊಟ್ಟೆಯ ಚರ್ಮದಲ್ಲಿ ಸುಕ್ಕುಬಂದು ಬಳ್ಳಿಯಂತಾಗುವುದು. ಈ ವಳಿಯು ಹೊಟ್ಟೆಯಲ್ಲಿ ಮೂರು ಉಂಟಾಗುವುದು ಸ್ತನಭಾರದಿಂದ ಬಳುಕುತ್ತಿರುವ ಸೊಂಟದ ಧೃಡತೆಗೆ ಕಟ್ಟಲ್ಪಟ್ಟ ರೇಷ್ಮೆಯ ಪಟ್ಟಿಯೋ ಎಂಬಂತೆ ಊಹಿಸಬಹುದಾದ ತ್ರಿವಳಿಯುಳ್ಳವಳು.

**೩೭. ಅರುಣಾರುಣಕೌಸುಮ್ಭ ವಸ್ತ್ರಭಾಸ್ವತ್ಕಟೀತಟ್ಯೈನಮಃ—**

ಅತ್ಯಂತ ಕೆಂಪಾದ ಕಿರಮಂಜಿ ಬಣ್ಣದ ವಸ್ತ್ರದಿಂದ ಪ್ರಕಾಶಿಸುವ ಕಟಿ ಪ್ರದೇಶವುಳ್ಳವಳು.

**೩೮. ರತ್ನಕಿಙ್ಕಿಣಿಕಾರಮ್ಯ ರಶನಾದಾಮಭೂಷಿತಾಯೈನಮಃ—**

ರತ್ನಮಯವಾದ ಕಿರುಗೆಜ್ಜೆಗಳಿಂದ ಮನೋಹರವಾದ ಓಡ್ಯಾಣ (ಡಾಬು) ದಿಂದ ಅಲಂಕೃತೆಯಾದವಳು.

**೩೯. ಕಾಮೇಶಜ್ಞಾತಸೌಭಾಗ್ಯ ಮಾರ್ದವೋರುದ್ವಯಾನ್ವಿತಾಯೈನಮಃ—**

ತನ್ನ ಪತಿಯಾದ ಈಶ್ವರನಿಂದ ಮಾತ್ರವೇ ತಿಳಿಯಲ್ಪಟ್ಟ ಸೌಂದರ್ಯ ಮತ್ತು ಮೃದುತ್ವಗಳುಳ್ಳ ತೊಡೆಗಳುಳ್ಳವಳು.

**೪೦. ಮಾಣಿಕ್ಯಮುಕುಟಾಕಾರ ಜಾನುದ್ವಯವಿರಾಜಿತಾಯೈನಮಃ—**

ಮಾಣಿಕ್ಯದ ಕಿರೀಟದಂತಿರುವ ಮೊಣಕಾಲುಗಳಿಂದ ಶೋಭಿಸತಕ್ಕವಳು.

**೪೧. ಇನ್ದ್ರಗೋಪಪರಿಕ್ಷಿಪ್ತ ಸ್ಮರತೂಣಾಭಜಙ್ಘಿಕಾಯೈನಮಃ—**

ಇನ್ದ್ರನೀಲಮಣಿ ರಚಿತವಾದ ಮನ್ಮಥನ ಬತ್ತಳಿಕೆಗಳಂತೆ ಶೋಭಿಸುವ ಮೀನುಖಂಡಗಳುಳ್ಳವಳು.

೪೨. ಗೂಢಗುಲ್ಫಾಯೈನಮಃ—

ಮಾಂಸಖಂಡಗಳಿಂದ ಮುಚ್ಚಲ್ಪಟ್ಟ ಪಾದದ ಗಿಣ್ಣುಗಳಿರುವವಳು.

೪೩. ಕೂರ್ಮಪೃಷ್ಠ ಜಯಿಷ್ಣು ಪ್ರಪದಾನ್ವಿತಾಯೈನಮಃ—

ಆಮೆಯ ಬೆನ್ನನ್ನು ಜೈಸಲಿಚ್ಛಿಸುವಂತಹ ಮುಂಗಾಲುಳ್ಳವಳು.

೪೪. ನಖದೀಧಿತಿಸಂಛನ್ನ ನಮಜ್ಜನ ತಮೋಗುಣಾಯೈನಮಃ—

ಉಪಾಸಕರ ಅಜ್ಞಾನವನ್ನು ಹೋಗಲಾಡಿಸುವಂತಹ ಕಾಂತಿಯುತವಾದ ಪಾದದ ಉಗುರುಗಳುಳ್ಳವಳು.

೪೫. ಪದದ್ವಯಪ್ರಭಾಜಾಲ ಪರಾಕೃತ ಸರೋರುಹಾಯೈನಮಃ—

ತಾವರೇ ಪುಷ್ಪವನ್ನು ತಿರಸ್ಕರಿಸುವಂತಹ ಪ್ರಭೆಯುಳ್ಳ ಎರಡು ಪಾದಗಳುಳ್ಳವಳು.

೪೬. ಶಿಂಜಾನಮಣಿಮಂಜೀರ ಮಣ್ಡಿತ ಶ್ರೀಪದಾಮ್ಬುಜಾಯೈನಮಃ—

ಧ್ವನಿಯಾಗುವ ನವರತ್ನಮಯವಾದ ಕಾಲುಸರವೆಂಬ ಆಭರಣದಿಂದ ಅಲಂಕೃತವಾದ ಪಾದಪದ್ಮಗಳುಳ್ಳವಳು.

೪೭. ಮರಾಳೀ ಮನ್ದಗಮನಾಯೈನಮಃ—

ಹೆಣ್ಣು ಹಂಸಪಕ್ಷಿಯ ಗಮನದಂತೆ ಮಂದ ಮತ್ತು ಗಂಭೀರವಾದ ನಡಿಗೆಯುಳ್ಳವಳು.

೪೮. ಮಹಾಲಾವಣ್ಯ ಶೇವಧಯೇನಮಃ—

ಮಹಾರೂಪಾತಿಶಯದ ನಿಧಿಯಂತಿರುವಳು.

೪೯. ಸರ್ವಾರುಣಾಯೈನಮಃ—

ಮೈ ಬಣ್ಣ ಆಭರಣಗಳ ಕಾಂತಿ ಇವುಗಳೆಲ್ಲವೂ ಹೊಂಬಣ್ಣವಾಗಿರುವವಳು.

೫೦. ಅನವದ್ಯಾಂಗ್ಯೈನಮಃ—

ಶಿರಸ್ಸಿನಿಂದ ಪಾದದ ಉಗರಿನವರಿಗೂ ಕೊಂಚವೂ ತಪ್ಪನ್ನು ಕಂಡು ಹಿಡಿಯಲು ಸಾಧ್ಯವಿಲ್ಲದಂತಹ ಸೌಂದರ್ಯವಾದ ಅಂಗಗಳುಳ್ಳವಳು.

**೫೧. ಸರ್ವಾಭರಣ ಭೂಷಿತಾಯೈನಮಃ—**

ಸರ್ವಾಭರಣಗಳಿಂದಲೂ ಅಲಂಕರಿಸಲ್ಪಟ್ಟವಳಾಗಿರುವವಳು.

**೫೨. ಶಿವಕಾಮೇಶ್ವರಾಙ್ಕಸ್ಥಾಯೈನಮಃ—**

ಲೋಕಕ್ಕೆ ಮಂಗಳಕರನಾದ ತನ್ನ ಪತಿಯಾದ ಈಶ್ವರನ ಎಡತೊಡೆಯಲ್ಲಿ ಕುಳಿತಿರುವವಳು.

**೫೩. ಶಿವಾಯೈನಮಃ—**

ಮಂಗಳ ಸ್ವರೂಪಿಣಿಯು. ಮಂಗಳವನ್ನುಂಟುಮಾಡುವವಳು. ಶಕ್ತಿ ಶಕ್ತರಿಗೆ ಅಭೇದ ಪ್ರತಿಪಾದನೆ ಮಾಡುವುದಾಗಿರುವದರಿಂದ ಶಕ್ತಿಯೇ ಶಕ್ತನೆಂದು ಈ ನಾಮವು ತಿಳಿಸುವುದು. ಆದುದರಿಂದ ಶ್ರೀದೇವಿಯೇ ಶಿವನು.

**೫೪. ಸ್ವಾಧೀನವಲ್ಲಭಾಯೈನಮಃ—**

ತನ್ನ ಅಧೀನನಾದ ಪತಿಯುಳ್ಳವಳು. ಅಂದರೆ ಪತಿಯ ಮನೋವೃತ್ತಿಗೆ ಅನುಕೂಲವಾದ ಸದ್ವರ್ತನದಿಂದ ಪತಿಯನ್ನು ಸ್ವಾಧೀನಪಡಿಸಿಕೊಂಡಿರುವವಳು.

**೫೫. ಸುಮೇರು ಮಧ್ಯಶೃಙ್ಗಸ್ಥಾಯೈನಮಃ—**

ಮೇರುಪರ್ವತದ ಮಧ್ಯಶಿಖರದಲ್ಲಿ ವಾಸಿಸುವವಳು. ಪ್ರಪಂಚದ ಮೇಲ್ಭಾಗಕ್ಕೆ ಮೇರುವೆಂದು ಹೆಸರು. ಇದೇ ಆಕಾಶಾಂತರ್ಗತವಾದ ಕಳಾಸ್ಥಾನ. ಇಂತಹ ಕಳಾದಲ್ಲಿ ವಾಸಿಸುವವಳು. ಸಹಸ್ರಾರ ಕಮಲದಲ್ಲಿರುವವಳು. (೨) ಮೂಲಾಧಾರ ಚಕ್ರದಲ್ಲಿ ನೆಲೆಸಿರುವವಳು.

**೫೬. ಶ್ರೀಮನ್ನಗರನಾಯಿಕಾಯೈನಮಃ—**

ಸರ್ವಸಂಪತ್ಸಮೃದ್ಧವಾದ ಅತ್ಯಂತ ಮನೋಹರವಾದ ಸೌಂದರ್ಯಾತಿಶಯವುಳ್ಳ ಆಕಾಶಾಂತರ್ಗತವಾದ ಕಳಾಸ್ವರೂಪದ ರಾಣಿಯು. ಅಮೃತ ಸಮುದ್ರದ ನಡುವೆ ರತ್ನದ್ವೀಪದಲ್ಲಿ ಭಗವತಿಯು ವಾಸಿಸುವ ಶ್ರೀನಗರವಿದೆ. ಇದು ನಮ್ಮ ಶಿರಸ್ಸಿನಲ್ಲಿರುವ ಸಹಸ್ರಾರಕಮಲದ ಸ್ಥಳವಾಗಿದೆ.

**೫೭. ಚಿನ್ತಾಮಣಿಗೃಹಾನ್ತಸ್ಸ್ಥಾಯೈನಮಃ—**

ಸಕಲೇಷ್ಟಾರ್ಥದಾಯಕವಾದುದು ಚಿಂತಾಮಣಿಯೆಂಬ ರತ್ನ. ಇಂತಹ ಚಿಂತಾಮಣಿ ರತ್ನದಿಂದ ನಿರ್ಮಿತವಾದ ಮನೆಯಲ್ಲಿ ವಾಸಿಸುವವಳು. ಅಂದರೆ

ಸಹಸ್ರಾರ ಕಮಲ ಮಧ್ಯದಲ್ಲಿರುವ ಕರ್ಣಿಕಾ ಪ್ರದೇಶವೇ ಚಿಂತಾಮಣಿ ಗೃಹ. ಇದರಲ್ಲಿ ವಾಸಿಸುವವಳು.

**೫೮. ಪಞ್ಚಬ್ರಹ್ಮಾಸನಸ್ಥಿತಾಯೈನಮಃ—**

ಬ್ರಹ್ಮ, ವಿಷ್ಣು, ರುದ್ರ, ಈಶ್ವರರೆಂಬ ನಾಲಕ್ಕು ಮಂಚದ ಕಾಲುಗಳಿಂದಲೂ ಸದಾಶಿವ (ಪರಬ್ರಹ್ಮನೆಂಬ) ಮಂಚದ ಹಲಿಗೆಯುಳ್ಳ ಆಸನದಲ್ಲಿ ನೆಲಸಿರುವವಳು. ಆದಿಶಕ್ತಿಯು ಸರ್ವವ್ಯಾಪಿಯಾದ ಪರಬ್ರಹ್ಮಸ್ವರೂಪಿಣಿಯಾದುದರಿಂದ ಸದಾಶಿವನೆಂದರೆ ಸರ್ವವ್ಯಾಪಿಯಾದ ಪರಬ್ರಹ್ಮಚೈತನ್ಯವನ್ನು ಅಭೇದದಿಂದ ಅನುಸರಿಸಿರುತ್ತೇಂಬುವದಕ್ಕೆ ಪರಬ್ರಹ್ಮಸ್ವರೂಪವಾದ ಹಲಗೆಯಲ್ಲೂ ಸಗುಣದಲ್ಲಿ ವಿಭಾಗವಾದ ಈಶ್ವರ, ಚತುರ್ಮುಖಬ್ರಹ್ಮ, ವಿಷ್ಣು, ರುದ್ರ, ಇವರುಗಳಿಗೆ ಆದಿಯಾಗಿ ತಾನು ಇರುತ್ತೇನೆಂಬ ಸೂಚನೆಗೆ ಈ ಚತುರ್ಮೂರ್ತಿಗಳ ಸ್ವರೂಪವಾದ ಕಾಲುಗಳುಳ್ಳ ಮಂಚದಲ್ಲೂ ಶ್ರೀದೇವಿಯು ನೆಲೆಸಿರುವಿಕೆಯೇ ಪಂಚಬ್ರಹ್ಮಾಸನಸ್ಥಿತಾ ಎಂಬುದಾಗಿದೆ. ಈತತ್ವವು ನಮ್ಮ ದೇಹದಲ್ಲೂ ಇರುವುದು. ಮೂಲಾಧಾರಚಕ್ರವು ಚತುರ್ಮುಖಬ್ರಹ್ಮನಿಗೂ, ಅನಾಹತಚಕ್ರವು ವಿಷ್ಣುವಿಗೂ, ಆಜ್ಞಾಚಕ್ರವು ರುದ್ರನಿಗೂ ಸ್ಥಾನಗಳಾಗಿವೆ. ಆಜ್ಞಾಚಕ್ರದ ಮೇಲಿರುವ ದಹರಾಕಾಶವೆನಿಸುವ ಕಳೆಯೇ ಈಶ್ವರನಿಗೆ ಸ್ಥಾನವಾಗಿದೆ. ಈ ಸಗುಣಗಳಿಗೆ ಆದಿಯಾಗಿರುವ ಶ್ರೀದೇವಿಯು ಸದಾಶಿವತತ್ವದಲ್ಲಿ ನೆಲಸಿರುವ ಸ್ಥಾನವೇ ಸಹಸ್ರಾರವಾಗಿದೆ. ಇದೇ ಪಂಚಬ್ರಹ್ಮಾಸನಸ್ಥಿತಾ ತತ್ವವಾಗಿದೆ. ೨೫೦ ನೇ ನಾಮದಲ್ಲಿ ಪಂಚಬ್ರಹ್ಮರೂ ಶ್ರೀದೇವಿಯೇ ಎಂದು ತಿಳಿಸುವುದು.

**೫೯. ಮಹಾಪದ್ಮಾಟವೀ ಸಂಸ್ಥಾಯೈನಮಃ—**

ಮಹತ್ತರವಾದ ಕಮಲಪುಷ್ಪಗಳ ವನಮಧ್ಯದಲ್ಲಿ ವಾಸಮಾಡುವವಳು. ನಮ್ಮ ಶಿರಸ್ಸಿನಲ್ಲಿರುವ ಸಹಸ್ರಾರಕಮಲವು ಸಹಸ್ರಾರವೆಂದರೆ ಅನಂತವಾದ ಕಮಲಪುಷ್ಪಗಳ ತತ್ವಗಳುಳ್ಳದ್ದಾದುದರಿಂದಲೇ ಇದಕ್ಕೆ ಸಹಸ್ರಾರಕಮಲವೆಂದು ಹೆಸರು ಬಂದಿದೆ. ಇಂತಹ ಸಹಸ್ರಾರಕಮಲದಲ್ಲಿ ವಾಸಮಾಡುವವಳು.

**೬೦. ಕದಮ್ಬವನ ವಾಸಿನ್ಯೈನಮಃ—**

ಕದಂಬವೃಕ್ಷಗಳ ವನದಲ್ಲಿ ವಾಸಿಸುವವಳು. ಕದಂಬವೆಂದರೆ ದೇವಲೋಕದಲ್ಲಿರುವ ದೇವಯೋಗ್ಯವಾದ ನಮ್ಮ ಈಚಲುಗಿಡದಂತೆ ಇರುವ ಒಂದು ವಿಧವಾದ ನೀಪವೃಕ್ಷ. ಈ ವೃಕ್ಷದ ತತ್ವವು ನಮ್ಮ ಶಿರಸ್ಸಿನಲ್ಲಿ ಸಹಸ್ರಾರ ಕಮಲದಲ್ಲಿರುವುದು. ಇದರಿಂದ ಅಮೃತವು ಜನಿಸುವುದು. ಈ ವಿಚಾರಕ್ಕೆ

೩೩೦ ನೇ ನಾಮದ ವಿವರವನ್ನು ನೋಡುವುದು. ಆದುದರಿಂದ ಶ್ರೀದೇವಿಯು ಭೂಲೋಕದಲ್ಲಿರುವ ಈಚಲುವನದಲ್ಲಿ ವಾಸವಾಗಿರುತ್ತಾಳೆಂದು ಭ್ರಾಂತರಾಗಿ ಈಚಲುಗಿಡಕ್ಕೆ ವಿಶೇಷ ಪ್ರಾಶಸ್ತ್ಯವನ್ನು ಕೊಡಬಾರದು. ಮುಂದಿನ ನಾಮದ ಅರ್ಥವನ್ನು ಈ ನಾಮಕ್ಕೆ ಸಮನ್ವಯ ಮಾಡಿಕೊಂಡರೆ ತತ್ವವು ಚೆನ್ನಾಗಿ ಗೊತ್ತಾಗುವುದು.

**೬೧. ಸುಧಾಸಾಗರ ಮಧ್ಯಸ್ಥಾಯೈನಮಃ—**

ಸುಧ ಎಂದರೆ ಅಮೃತ. ಅಮೃತಸಮುದ್ರ ಮಧ್ಯದಲ್ಲಿ ವಾಸಿಸುವವಳು. ಮೇಲಿನ ನಾಮದಲ್ಲಿ ತಿಳಿಸಿರುವಂತೆ ನಮ್ಮ ಸಹಸ್ರಾರಕಮಲದಲ್ಲಿ ಅಮೃತವು ಜನಿಸಿ ಸಾಗರದೋಪಾದಿಯಲ್ಲಿ ಸಹಸ್ರಾರ ಕಮಲದ ಸುತ್ತಲೂ ಇರುತ್ತದೆ.

ಇಂತಹ ಅಮೃತಸಮುದ್ರದ ತತ್ವವಾದ ಸಹಸ್ರಾರ ಕಮಲದ ಮಧ್ಯದಲ್ಲಿ ವಾಸಿಸುವವಳು.

**೬೨. ಕಾಮಾಕ್ಷ್ಯೈನಮಃ—**

ಭಕ್ತರ ಇಷ್ಟಾರ್ಥಗಳನ್ನು ನೆರವೇರಿಸುವಂತಹ ಕರುಣಾಕಟಾಕ್ಷವುಳ್ಳ ದೃಷ್ಟಿಯುಳ್ಳವಳು.

**೬೩. ಕಾಮದಾಯಿನ್ಯೈನಮಃ—**

ಇಷ್ಟಾರ್ಥಗಳನ್ನು ಅನುಗ್ರಹಿಸುವವಳು.

**೬೪. ದೇವರ್ಷಿಗಣಸಂಘಾತ ಸ್ತೂಯಮಾನಾತ್ಮ ವೈಭವಾಯೈನಮಃ—**

ತ್ರಿಮೂರ್ತಿಗಳೇ ಆದಿಯಾಗಿ ಅನೇಕಾನೇಕ ದೇವತೆಗಳ ಮತ್ತು ಋಷಿಗಳ ಸಮೂಹಗಳಿಂದ ಸ್ತೋತ್ರ ಮಾಡಲ್ಪಡುವ ಮಹಿಮಾತಿಶಯವುಳ್ಳವಳು.

**೬೫. ಭಣ್ಡಾಸುರವಧೋದ್ಯುಕ್ತ ಶಕ್ತಿಸೇನಾ ಸಮನ್ವಿತಾಯೈನಮಃ—**

ಭಂಡಾಸುರನ ವಧೆಯಲ್ಲಿ ಉದ್ಯುಕ್ತರಾದ ಶಕ್ತಿರೂಪದ ಸೇನೆಗಳಿಂದ ಪರಿವೃತಳಾಗಿರುವವಳು.

**೬೬. ಸಂಪತ್ಕರೀಸಮಾರೂಢ ಸಿನ್ಧುರವ್ರಜ ಸೇವಿತಾಯೈನಮಃ—**

ಸಂಪತ್ಕರೀ ಎಂಬ ಶಕ್ತಿಯ ಮುಂದಾಳುತನದಿಂದ ನಡೆಸಲ್ಪಡುವ ಮದ್ದಾನೆಗಳ ಗುಂಪಿನ ಸೈನ್ಯದಿಂದ ಕೂಡಿರುವವಳು.

**೬೭. ಅಶ್ವಾರೂಢಾ ಧಿಷ್ಠಿತಾಶ್ವಕೋಟ ಕೋಟಭಿರಾವೃತಾಯೈನಮಃ—**

ಅಶ್ವಾರೂಢೆಯೆಂಬ ಶಕ್ತಿಯ ನೇತೃತ್ವದಿಂದ ನಡೆಸಲ್ಪಡುವ ಕುದುರೆಗಳ ಅನೇಕ ಕೋಟಿ ದಳಗಳಿಂದ ಪರಿವೃತಳಾಗಿರುವವಳು.

**೬೮. ಚಕ್ರರಾಜರಥಾರೂಢ ಸರ್ವಾಯುಧ ಪರಿಷ್ಕೃತಾಯೈನಮಃ—**

ಚಕ್ರರಾಜವೆಂಬ ರಥಾರೋಹಣ ಮಾಡಿ ಸರ್ವಾಯುಧ ಸಂಪನ್ನೆಯಾದವಳು.

**೬೯. ಗೇಯುಚಕ್ರರಥಾರೂಢ ಮನ್ತ್ರಿಣೀಪರಿಸೇವಿತಾಯೈನಮಃ—**

ಗೇಯುಚಕ್ರವೆಂಬ ರಥಾರೋಹಣ ಮಾಡಿರುವ ತನ್ನ ಮಂತ್ರಿಯಾದ ಶ್ಯಾಮಲಾದೇವಿಯಿಂದ ಸೇವಿಸಲ್ಪಡುತ್ತಿರುವವಳು.

**೭೦. ಕಿರಿಚಕ್ರರಥಾರೂಢ ದಂಡನಾಥ ಪುರಸ್ಕೃತಾಯೈನಮಃ—**

ಕಿರಿಚಕ್ರವೆಂಬ ರಥಾರೋಹಣ ಮಾಡಿರುವ ದಂಡನಾಥೆಯೆಂಬ ವಾರಾಹೀ ಶಕ್ತಿಯಿಂದ ಬೆಂಬಲವುಳ್ಳವಳು.

**೭೧. ಜ್ವಾಲಾಮಾಲಿನಿಕಾ ಕ್ಷಿಪ್ತವಹ್ನಿಪ್ರಾಕಾರ ಮಧ್ಯಗಾಯೈನಮಃ—**

ಜ್ವಾಲಾಮಾಲಿನೀ ಶಕ್ತಿಯಿಂದ ನಿರ್ಮಿತವಾದ ಅಂದರೆ ರಣರಂಗದಲ್ಲಿ ಅಗ್ನಿಜ್ವಾಲೆಯ ಸ್ವರೂಪವಾದ ವ್ಯೂಹವನ್ನು ರಚಿಸಿಕೊಂಡು ಮಧ್ಯದಲ್ಲಿ ನೆಲೆಸಿರುವವಳು.

**೭೨. ಭಣ್ಡಸೈನ್ಯವಧೋದ್ಯುಕ್ತ ಶಕ್ತಿವಿಕ್ರಮ ಹರ್ಷಿತಾಯೈನಮಃ—**

ಭಣ್ಡಾಸುರನನ್ನು ನಿಗ್ರಹಿಸಲುದ್ಯುಕ್ತವಾಗಿರುವ ಶಕ್ತಿಸೇನೆಗಳ ಪರಾಕ್ರಮದಿಂದ ಸಂತೋಷಗೊಂಡಿರುವವಳು.

**೭೩. ನಿತ್ಯಾಪರಾಕ್ರಮಾಟೋಪ ನಿರೀಕ್ಷಣ ಸಮುತ್ಸಕಾಯೈನಮಃ—**

ಶುದ್ಧ ಪಾಡ್ಯದಾರಭ್ಯ ಪೌರ್ಣಿಮಾದವರಿಗೆ ಚಂದ್ರಕಳಾಭಿವೃದ್ಧಿಗೆ ನಿತ್ಯಗಳೆಂದು ಹೆಸರು. ಈ ನಿತ್ಯಶಕ್ತಿಗಳ ಅಭಿವೃದ್ಧಿಯಾಗುತ್ತಿರುವ ಪರಾಕ್ರಮ ಮತ್ತು ಅಟ್ಟಹಾಸವನ್ನು ನೋಡಿ ಆನಂದಪಡುವವಳು.

**೭೪. ಭಣ್ಡಪುತ್ರಧೋವದ್ಯುಕ್ತ ಬಾಲಾವಿಕ್ರಮನನ್ದಿತಾಯೈನಮಃ—**

ಭಣ್ಡಾಸುರನ ಚತುರ್ಬಾಹು ಮೊದಲುಗೊಂಡು ಉಪಮಾಯುವರೆಗಿನ ಮುವ್ವತ್ತು ಮಕ್ಕಳನ್ನು ನಿಗ್ರಹಿಸುವುದರಲ್ಲಿ ಉದ್ಯುಕ್ತಳಾದ ಶ್ರೀಲಲಿತಾದೇವಿಯ ಅವತಾರವೇ ಆದ ಕನ್ಯೆಯಾದ ಬಾಲಾ ಎಂಬ ದೇವಿಯ ಪರಾಕ್ರಮಕ್ಕೆ ಸಂತೋಷಪಡುವವಳು.

**೭೫. ಮನ್ತ್ರಿಣ್ಯಂಬಾವಿರಚಿತ ವಿಷಂಗವಧ ತೋಷಿತಾಯೈನಮಃ—**

ಭಂಡಾಸುರನ ಭ್ರಾತೃವಾದ ವಿಷಂಗ ದೈತ್ಯನನ್ನು ತನ್ನ ಮಂತ್ರಿಣಿಯು ಅಂದರೆ ಶ್ಯಾಮಲಾಂಬೆಯು ನಿಗ್ರಹಮಾಡಿದುದಕ್ಕೆ ಸಂತೋಷಪಟ್ಟವಳು.

**೭೬. ವಿಶುಕ್ರಪ್ರಾಣಹರಣ ವಾರಾಹೀವೀರ್ಯನನ್ದಿತಾಯೈನಮಃ—**

ಭಂಡಾಸುರನ ಭ್ರಾತೃವಾದ ವಿಶುಕ್ರನೆಂಬ ದೈತ್ಯನನ್ನು ದಂಡನಾಥೆಯೆಂಬ ವಾರಾಹೀ ಶಕ್ತಿಯು ಸಂಹರಿಸಿದುದಕ್ಕೆ ಸಂತೋಷಪಟ್ಟವಳು.

**೭೭. ಕಾಮೇಶ್ವರಮುಖಾಲೋಕ ಕಲ್ಪಿತಶ್ರೀಗಣೇಶ್ವರಾಯೈನಮಃ—**

ಪತಿಯಾದ ಕಾಮೇಶ್ವರನ ಮುಖವನ್ನು ವೀಕ್ಷಣೆ ಮಾಡಿದ ಮಾತ್ರದಿಂದಲೇ ಶ್ರೀ ಗಣೇಶನನ್ನು ಸೃಷ್ಟಿಸಿದವಳು. ದೇವತೆಗಳಿಗೂ ರಾಕ್ಷಸರಿಗೂ ಯುದ್ಧವಾಗುತ್ತಿದ್ದ ಕಾಲದಲ್ಲಿ ವಿಶುಕ್ರನೆಂಬ ರಾಕ್ಷಸನು ಮಾಯೆಯಿಂದ ನಿರ್ಮಿತವಾದ ಜಯವಿಘ್ನವೆಂಬ ಯಂತ್ರವನ್ನು ದೇವಸೇನೆಯ ಮಧ್ಯದಲ್ಲಿಟ್ಟನು. ಇದನ್ನು ನೋಡಿ ಶ್ರೀದೇವಿಯ ಸೇನೆಗಳು ಚಲ್ಲಾಪಿಲ್ಲಿಯಾಗಿ ಓಡುತ್ತಿದ್ದವು. ಆಗ ಶ್ರೀ ಲಲಿತಾದೇವಿಯು ಈಶ್ವರನನ್ನು ವೀಕ್ಷಿಸಿದ ಮಾತ್ರದಿಂದಲೇ ಶ್ರೀ ಗಣೇಶನನ್ನು ಸೃಷ್ಟಿಸಿ ಅವನಿಂದ ಜಯವಿಘ್ನವೆಂಬ ಯಂತ್ರವನ್ನು ಧ್ವಂಸಮಾಡಿಸಿ ದೇವತೆಗಳನ್ನು ಕಾಪಾಡಿದಳು.

**೭೮. ಮಹಾಗಣೇಶನಿರ್ಭಿನ್ನ ವಿಘ್ನಯನ್ತ್ರಪ್ರಹರ್ಷಿತಾಯೈನಮಃ—**

ವಿಘ್ನಕಾರಿಯಾಗಿದ್ದ ಮಾಯಾರೂಪವಾದ ಜಯವಿಘ್ನವೆಂಬ ಯಂತ್ರವನ್ನು ಶ್ರೀ ಗಣಪತಿಯು ನಾಶಮಾಡಿ ವಿಘ್ನವನ್ನು ಪರಿಹರಿಸಿದುದಕ್ಕೆ ಸಂತೋಷಪಟ್ಟವಳು.

**೭೯. ಭಣ್ಡಾಸುರೇಂದ್ರನಿರ್ಮುಕ್ತ ಶಸ್ತ್ರಪ್ರತ್ಯಸ್ತ್ರವರ್ಷಿಣ್ಯೈನಮಃ—**

ಭಣ್ಡಾಸುರನು ಲಲಿತಾದೇವಿಯ ಮೇಲೆ ಬಿಟ್ಟ ಅಸ್ತ್ರಕ್ಕೆಲ್ಲಾ ಪ್ರತಿಯಾದ ಅಸ್ತ್ರವನ್ನು ಸುರಿಸಿದವಳು.

## ೮೦. ಕರಾಙ್ಗುಳಿನಖೋತ್ಪನ್ನ ನಾರಾಯಣದಶಾಕೃತ್ಯೈನಮಃ—

ಭಣ್ಡಾಸುರನು ಶ್ರೀದೇವಿಯ ಮೇಲೆ ಯುದ್ಧಮಾಡಲು ಸಕಲ ರಾಕ್ಷಸ ರಾಜರುಗಳನ್ನೂ ಸೃಷ್ಟಿಸುವದಕ್ಕೋಸ್ಕರ ಸಕಲ ರಾಕ್ಷಸ ಸ್ವರೂಪವಾದ ಅಸ್ತ್ರವನ್ನು ಅಭಿಮಂತ್ರಿಸಿದನು. ಈ ಅಭಿಮಂತ್ರಣದಿಂದ ಸೋಮಕಾಸುರ, ರಾವಣ, ಹಿರಣ್ಯಾಕ್ಷರೇ ಮೊದಲಾದ ಸಕಲ ರಾಕ್ಷಸರಾಜರೂ ಹುಟ್ಟಿ ಶ್ರೀದೇವಿಯೊಡನೆ ಯುದ್ಧಮಾಡಲು ಪ್ರಾರಂಭಿಸಿದರು. ಆಗ ಶ್ರೀದೇವಿಯ ಹಸ್ತಗಳಲ್ಲಿರುವ ಹತ್ತು ಉಗುರುಗಳಿಂದಲೇ ಮತ್ಸ್ಯ, ಕೂರ್ಮ, ವರಾಹಾದಿ ವಿಷ್ಣು ಅಂಶದ ದಶಾವತಾರಗಳನ್ನು ಸೃಷ್ಟಿಸಿದಳು. ಈ ಅವತಾರಮೂರ್ತಿಗಳು ಆಯಾ ರಾಕ್ಷಸರುಗಳನ್ನೆಲ್ಲಾ ನಿಗ್ರಹಮಾಡಿದರು ಆದುದರಿಂದ ಶ್ರೀದೇವಿಯ ಹತ್ತು ಬೆರಳುಗಳ ಉಗರುಗಳ ಮಹತ್ತಿನಿಂದಲೇ ದಶಾವತಾರಗಳೂ ನಡೆದವು.

## ೮೧. ಮಹಾಪಾಶುಪತಾಸ್ತ್ರಾಗ್ನಿನಿರ್ದಗ್ಧಾ ಸುರಸೈನಿಕಾಯೈನಮಃ—

ಮಹಾಪಾಶುಪತಾಸ್ತ್ರದಿಂದ ಹುಟ್ಟಿದ ಅಗ್ನಿಯಿಂದ ರಾಕ್ಷಸರ ಸೈನ್ಯಗಳನ್ನೆಲ್ಲಾ ಭಸ್ಮಮಾಡಿದವಳು. ಪಾಶವೆಂದರೆ ಬದ್ಧಿಸುವುದು. ಅಂದರೆ ಪಾಶದಿಂದ ಶತ್ರುಗಳನ್ನೆಲ್ಲಾ ಬಂಧಿಸಿ ಅಗ್ನಿಯನ್ನುತ್ಪನ್ನಮಾಡಿ ಬಂಧಿಸಿದ ಶತ್ರುಗಳನ್ನು ನಿಗ್ರಹಿಸುವುದಾಗಿದೆ. ಇದು ನಮ್ಮಲ್ಲಿ ಮೂಲಾಧಾರ ಚಕ್ರದಲ್ಲಿರುವ ಅಗ್ನಿ ಪ್ರಜ್ವಲನೆಯ ಕಾರ್ಯವಾಗಿ ಅಜ್ಞಾನದ ಶಕ್ತಿಗಳನ್ನು ಬಂಧಿಸಿ ನಿಗ್ರಹಿಸುವ ತತ್ವವಾಗಿರುವುದು.

## ೮೨. ಕಾಮೇಶ್ವರಾಸ್ತ್ರನಿರ್ದಗ್ಧ ಸಭಣ್ಡಾಸುರ ಶೂನ್ಯಕಾಯೈನಮಃ—

ಕಾಮೇಶ್ವರಾಸ್ತ್ರದಿಂದ ಭಣ್ಡಾಸುರನನ್ನೂ ಅವನ ಸೇನೆಯನ್ನೆಲ್ಲವನ್ನೂ ಭಸ್ಮಮಾಡಿದವಳು. ಕಾಮೇಶ್ವರಾಸ್ತ್ರವೆಂದರೆ ಮನ್ಮಥನನ್ನು ದಹಿಸಿದ ಈಶ್ವರನ ಫಾಲನೇತ್ರಾಗ್ನಿಯಾಗಿರುವುದು. ಈ ಫಾಲನೇತ್ರಾಗ್ನಿಯೇ ನಮ್ಮಲ್ಲಿನ ಜ್ಞಾನಾಗ್ನಿಯಾಗಿರುವುದು.

## ೮೩. ಬ್ರಹ್ಮೋಪೇನ್ದ್ರಮಹೇಂದ್ರಾದಿ ದೇವಸಂಸ್ತುತವೈಭವಾಯೈ ನಮಃ—

ಭಣ್ಡಾಸುರ। ರಾಕ್ಷಸನನ್ನು ಸಂಹರಿಸಿ ಲೋಕೋದ್ಧಾರ ಮಾಡಿದುದಕ್ಕೆ ಚತುರ್ಮುಖಬ್ರಹ್ಮ, ವಿಷ್ಣು, ಮಹೇಂದ್ರ ಮತ್ತು ಸಮಸ್ತದೇವತೆಗಳಿಂದಲೂ ಸ್ತುತಿಸಲ್ಪಟ್ಟ ಮಹಿಮಾತಿಶಯವುಳ್ಳವಳು.

**೮೪. ಹರನೇತ್ರಾಗ್ನಿಸನ್ದಗ್ಧ ಕಾಮಸಂಜೀವನೌಷಧ್ಯೈನಮಃ—**

ಈಶ್ವರನ ಫಾಲನೇತ್ರಾಗ್ನಿಯಿಂದ ದಗ್ಧನಾದ ಮನ್ಮಥನನ್ನು ಬದುಕಿಸುವದರಲ್ಲಿ ಸಂಜೀವಿನಿ ಮೂಲಿಕೆಯಂತಿರುವವಳು.

ಭಂಡಾಸುರನನ್ನು ನಿಗ್ರಹಿಸಿ ದೇವತೆಗಳನ್ನೂ ಲೋಕವನ್ನೂ ಉದ್ಧಾರ ಮಾಡುವದಕ್ಕೋಸ್ಕರ ಶ್ರೀ ಲಲಿತಾವತಾರವಾದುದು. ಶ್ರೀ ಲಲಿತಾದೇವಿಯು ಸಾಕ್ಷಾತ್ ಪರಬ್ರಹ್ಮಸ್ವರೂಪಿಣಿಯು. ಲೋಕೋದ್ಧಾರಕ್ಕೋಸ್ಕರ ಸ್ವಯಂ ಪ್ರಕಾಶವಾದ ತನ್ನ ಸ್ಥಿತಿಯಿಂದ ಅವ್ಯಕ್ತ ಶಕ್ತಿಯೆನಿಸುವ ಕಳಾಸ್ವರೂಪ (ಶುದ್ಧ ಸತ್ವಗುಣದ ಸೋಪಾನ) ಕ್ಕೆ ಉದಯಿಸುವ ತತ್ವಸೂಚನೆಗೋಸ್ಕರಲೇ ಸಹಸ್ರನಾಮದ ೪ ನೇ ನಾಮವಾದ ಚಿದಗ್ನಿಕುಂಡ ಸಂಭೂತಾ ಎಂಬುದು ಇರುವುದಾಗಿದೆ. ಶ್ರೀದೇವಿಯ ಅವತಾರವು ದೇವತೆಗಳನ್ನೂ ಲೋಕವನ್ನೂ ಉದ್ಧಾರಮಾಡುವದೆಂಬುವದನ್ನು ಸೂಚಿಸುವದಕ್ಕೆ ಸರಿಯಾಗಿ ೫ ನೆಯ ನಾಮವೆ ದೇವಕಾರ್ಯ ಸಮುದ್ಯತಾ ಎಂಬುದಿರುವದಾಗಿದೆ. ೬ ನೆಯ ನಾಮದಿಂದ ೮೪ ನೆಯ ನಾಮದವರೆಗೆ ಆ ದೇವಿಯ ಅವತಾರದ ರೂಪಿನ ವರ್ಣನೆಯೂ, ಮಹಿಮಾ ವರ್ಣನೆಯೂ, ಭಂಡಾಸುರನ ವಧೆಯ ವರ್ಣನೆಯೂ ಇರುವವು. ಶ್ರೀ ದೇವಿಯು (ಶಕ್ತಿಯು) ಅಸುರನನ್ನು ನಿಗ್ರಹಿಸಿ ಈಶ್ವರನೊಡನೆ ಆಕಾಶಾಂತರ್ಗತವಾದ ಕಳಾಸ್ವರೂಪದಲ್ಲಿ ಬ್ರಹ್ಮಾಂಡವಿರುವವರೆಗೂ ಸಗುಣದಲ್ಲಿ ಇದ್ದೇ ಇರುತ್ತಾಳೆ. ಲೋಕೋದ್ಧಾರಕ್ಕೋಸ್ಕರ ಆಗಿರುವ ದೇವಿಯ ಮತ್ತು ದೇವನ ಅವತಾರಗಳೆಲ್ಲವೂ ಕಳಾಸ್ವರೂಪದಿಂದಲೇ ಆಗಿರುತ್ತವೆ. ನಮ್ಮಲ್ಲಿರುವ ಇಂದ್ರಿಯಗಳ ಮತ್ತು ಅಂಗಗಳಲ್ಲಿರುವ ಮನೋಹರವಾದ ಪ್ರಭೆಯು ಕಳಾರೂಪದಲ್ಲಿರುವ ದೇವತಾಂಶಕ್ಕೆ ಸೇರಿದುದು. ಸಾಧಾರಣ ಮನುಷ್ಯರುಗಳಲ್ಲೇ ಮನೋಹರತ್ವವು ಹೀಗಿರುವಾಗ ಪ್ರಾಣಿಗಳ ರೂಪಾತಿಶಯಕ್ಕೆ ಆದಿಕಾರಣವಾಗಿ ಕಳಾರೂಪದಲ್ಲಿರುವ ಆ ಶ್ರೀದೇವಿಯ ರೂಪಿನ ಪ್ರಭೆಯನ್ನು ವರ್ಣಿಸಲು ನರರಿಗೆ ಸಾಧ್ಯವೇ ಇಲ್ಲದಿರುವುದರಿಂದ ಮಹಾತ್ರಿಪುರಸುಂದರಿ ಎನಿಸಿಕೊಂಡಿರುವಳು. ಶ್ರೀದೇವಿಯ ರೂಪಾತಿಶಯದ ವರ್ಣನೆಯು ಮತ್ತು ಶ್ರೀದೇವಿಯ ಲೀಲಾ ವಿಭೂತಿಯ ಮಹತ್ವವೂ ಕಳಾಸ್ವರೂಪದಲ್ಲಿ ಇದ್ದೇ ಇರುವುದು. ಆಕಾಶಾಂತರ್ಗತವಾಗಿರುವ ಕಳಾಸ್ವರೂಪವು ನಮ್ಮ ಈ ಚರ್ಮಚಕ್ಷುಸ್ಸಿಗೆ ಗೋಚರವಾಗುವದಿಲ್ಲ. ಆ ದೇವಿಯನ್ನು ಪರಮಭಕ್ತಿಯಿಂದ ಯಾರು ಉಪಾಸನೆ ಮಾಡುತ್ತಾರೋ ಅಂತಹವರ ಪುಣ್ಯಪರಿಪಾಕವನ್ನು ಅನುಸರಿಸಿ ಉಪಾಸಕನ ಅಂತರ್ಮುಖವಾದ ಜ್ಞಾನಚಕ್ಷುಸ್ಸು ತೆರೆದು ಕಳಾಸ್ವರೂಪದಲ್ಲಿ ಶ್ರೀದೇವಿಯು ದರ್ಶನವನ್ನು ಕೊಡುವಳು. ಮೋಕ್ಷಕಾಮನಾಗಿ ಜ್ಞಾನಮಾರ್ಗದಿಂದ ಆ ಜಗದಂಬೆಯನ್ನು ಉಪಾಸಿಸಿದರೆ ಶ್ರೀದೇವಿಯು ಭಂಡಾಸುರನ ತತ್ವದಲ್ಲಿರುವ

ಉಪಾಸಕನಲ್ಲಿರುವ ಅವಿದ್ಯೆಯನ್ನು ನಿಗ್ರಹಿಸಿ ಮೋಕ್ಷಸಾಮ್ರಾಜ್ಯವಾದ ತನ್ನ ಸಾಯುಜ್ಯವನ್ನೇ ಕೊಡುವಳು. ಭಂಡಾಸುರನನ್ನೂ ಅವನ ಮಕ್ಕಳು ಮತ್ತು ಪರಿವಾರದವರನ್ನೂ ನಮ್ಮಲ್ಲಿರುವ ರಜಸ್ತಮೋಗುಣವಾದ ಅವಿದ್ಯೆಗೆ ಅನ್ವಯ ಮಾಡಿ ಅವನ ಕಾರ್ಯ ಮತ್ತು ವಧೆಯ ವಿಚಾರಗಳನ್ನು ಮೋಕ್ಷಮಾರ್ಗದ ತತ್ವಕ್ಕೆ ಅನ್ವಯಿಸಬಹುದು. ಆದರೆ ಅದೇ ಒಂದು ದೊಡ್ಡ ಗ್ರಂಥವಾಗುವುದು.

**೮೫. ಶ್ರೀಮದ್ವಾಗ್ಭವ ಕೂಟೈಕ ಸ್ವರೂಪ ಮುಖಪಂಜ್ಕಜಾಯೈ ನಮಃ—**

ಪದ್ಮದಂತಿರುವ ಮುಖವು ವಾಣಿಯನ್ನುಂಟುಮಾಡುವ ಮಾತೃಕಾ (ಅಕ್ಷರಗಳ) ಶಕ್ತಿಯ ರೂಪವಾದ ಹ್ರೀಂಕಾರ ಅಥವಾ ಓಂಕಾರದ ಕಳಾರೂಪವಾಗಿರುವದು. ಈ ತತ್ವಕ್ಕೆ ಮಂತ್ರರಹಸ್ಯಾರ್ಥ ಪ್ರಕರಣದ ಮಂಗಳ ಶ್ಲೋಕದ ಅರ್ಥವನ್ನು ಇಲ್ಲಿಗೆ ಅನ್ವಯಮಾಡಿಕೊಳ್ಳಬೇಕು.

**೮೬. ಕಣ್ಠಾಧಃಕಟಿಪರ್ಯನ್ತ ಮಧ್ಯಕೂಟಸ್ವರೂಪಿಣ್ಯೈನಮಃ—**

ಕಣ್ಠದಿಂದ ಕೆಳಕ್ಕೆ ಸೊಂಟದವರಿಗೆ ಮಧ್ಯಕೂಟದ ಸ್ವರೂಪಿಣಿಯು.

**೮೭. ಶಕ್ತಿಕೂಟೈಕತಾಪನ್ನ ಕಟ್ಯಧೋಭಾಗಧಾರಿಣ್ಯೈನಮಃ—**

ಸೊಂಟದಿಂದ ಕೆಳಕ್ಕೆ ಶಕ್ತಿಕೂಟಸ್ವರೂಪಿಣಿಯು.

೮೫, ೮೬, ೮೭, ಈ ನಾಮತ್ರಯವೂ ಶ್ರೀದೇವಿಯ ಮಂತ್ರವಾದ ಪಂಚದಶಾಕ್ಷರೀ ಮಂತ್ರದ ಮೂರು ವಿಭಾಗಗಳನ್ನು ಪ್ರತಿಪಾದಿಸುತ್ತದೆ. ಈ ಮೂರು ಭಾಗಗಳೂ ಕ ಎ ಈ ಲ ಹ ಸ ಕ ಹ ಲ ಸ ಕ ಲ ಎಂಬ ಮೂರು ಭಾಗಗಳಾಗಿ ಕ್ರಮವಾಗಿ ಸೃಷ್ಟಿ, ವ್ಯಾಪಾರ, ಲಯದ ತತ್ವಗಳಿಗೆ ಅನುಸಾರವಾಗಿವೆಯೆಂದು ಶ್ರೀಲಲಿತಾ ಪಂಚದಶಾಕ್ಷರೀ ಮಂತ್ರರಹಸ್ಯದಲ್ಲಿ ಬರೆದೇ ಇರುವುದು. ಸೃಷ್ಟಿಯೆಲ್ಲಾ ವಾಗ್ಭವಕೂಟವೆನಿಸುವ ಕಳಾಸ್ವರೂಪದಿಂದ ಪ್ರಾರಂಭವಾಗುವುದು. ವ್ಯಾಪಾರವು ಮಧ್ಯದಲ್ಲಿರುವುದರಿಂದ ಮಧ್ಯಕೂಟವಾಗಿರುವುದು. ವ್ಯಾಪಾರ ಮತ್ತು ಸೃಷ್ಟಿಗಳು ಲಯವಾಗಿ ಸರ್ವವೂ ಶಕ್ತಿರೂಪದಲ್ಲಿ ಬಂದು ನಿಂತು ಅನಂತರ ಪರಬ್ರಹ್ಮಸ್ವರೂಪವಾಗಬೇಕಾದುದರಿಂದ ಲಯವು ಶಕ್ತಿಕೂಟವಾಗಿರುವದು. ಪಿಂಡಾಂಡವಾದ ನಮ್ಮ ದೇಹದ ಸೃಷ್ಟಿಯೂ ವಾಗ್ಭವಕೂಟಕ್ಕೆ ಸೇರಿದುದು. ನಮ್ಮ ವ್ಯಾಪಾರವು ಕ್ರಿಯಾಶಕ್ತಿಗೆ ಪ್ರಧಾನ ಸ್ಥಳವಾದ ಕಂಠದಿಂದ ಸೊಂಟದವರಿಗಿರುವ ಅಂಗಗಳಿಂದ ನಡೆಯುವದು. ಆದುದರಿಂದ ಇದು ಮಧ್ಯಕೂಟಕ್ಕೆ ಸೇರಿದುದು. ಲಯ ಅಥವ ಮೋಕ್ಷವು

ನಮ್ಮ ಸೊಂಟದ ಕೆಳಗೆ ಮೂಲಾಧಾರ ಚಕ್ರದಲ್ಲಿರುವ ಕುಂಡಲಿನೀ ಶಕ್ತಿಗೆ ಸಂಬಂಧಪಟ್ಟಿರುವುದರಿಂದ ಮೂರನೆಯದು ಶಕ್ತಿಕೂಟವಾಗಿರುವುದು.

## ೮೮. ಮೂಲಮನ್ತ್ರಾತ್ಮಿಕಾಯೈನಮಃ—

ಶ್ರೀದೇವಿಯ ಮೂಲಮನ್ತ್ರವು ಹ್ರೀಂ ಎಂಬ ಒಂದು ಬೀಜಾಕ್ಷರವೇ ಹೊರತು ಮಂತ್ರದಲ್ಲಿನ ಇತರ ಅಕ್ಷರಗಳಲ್ಲ. ಆದರೆ ಈ ಮೂಲಮಂತ್ರವು ಮೇಲಿನ ನಾಮಗಳಲ್ಲಿ ತಿಳಿಸಿರುವ ಮೂರು ಕೂಟಗಳ ಸ್ವರೂಪವಾಗಿಯೂ ಇರುವುದು. ಹೀಗಿರುವ ತತ್ವಪ್ರತಿಪಾದನೆಗೋಸ್ಕರಲೆ ಪ್ರತಿಪಾದದ ಅಂತ್ಯದಲ್ಲಿ ಹ್ರೀಂ ಬೀಜಾಕ್ಷರವು ಇರುವುದಾಗಿದೆ. ಮೂಲಮನ್ತ್ರದ ಅರ್ಥವನ್ನು ಮಂತ್ರದ ರಹಸ್ಯಾರ್ಥದಲ್ಲಿಯೇ ತಿಳಿಸಿರುತ್ತದೆ.

## ೮೯. ಮೂಲಕೂಟತ್ರಯ ಕಳೇಬರಾಯೈನಮಃ—

ಬೀಜಾಕ್ಷರದೊಡಗೂಡಿದ ಮಂತ್ರದ ಮೂರು ವಿಭಾಗಗಳು ಶ್ರೀದೇವಿಯ ವಿರಾಟ್‌ಸ್ವರೂಪವಾದ ದೇಹವಾಗಿದೆ. ಅಂದರೆ ಮೂರು ವಿಭಾಗಗಳೂ ಸೇರಿದ್ದು ವೃಕ್ಷ. ಮೂಲಮಂತ್ರವಾದ ಹ್ರೀಂ ಎನ್ನುವುದು ಬೀಜ.

## ೯೦. ಕುಳಾಮೃತೈಕ ರಸಿಕಾಯೈನಮಃ—

ಪ್ರಪಂಚದ ನಡೆವಳಿಕೆಗಳಲ್ಲಿ ಧರ್ಮಮಾರ್ಗವೇ ಮೇಲಾಗಿರಲೆಂಬ ಇಷ್ಟವುಳ್ಳವಳು ಮತ್ತು ಅದರಲ್ಲಿ ರಸಿಕಳು.

ಕುಲ ಎಂದರೆ "ಕುಲ-ಸಂಸ್ತ್ಯಾನೆ" ಎಂಬ ವ್ಯುತ್ಪತ್ತಿಯಂತೆ ಕೂಡಿಕೊಂಡಿರುವುದು. ಆಯಾಯ ರಕ್ತಕಣದ ಗುಣ ಮತ್ತು ಕರ್ಮಗಳನ್ನು ಅನುಸರಿಸಿಕೊಂಡು ಇರುವ ಗುಂಪಿಗೆ ಕುಲವೆಂದು ಹೆಸರು. ಅನೇಕ ಪ್ರಾಣಿಗಳು ಮತ್ತು ವಸ್ತುಗಳು ಸೃಷ್ಟಿಯಾಗಿ ಗುಂಪಾಗಿ ಸೇರಿಕೊಂಡಿರುವ ಪ್ರಪಂಚವು ಬ್ರಹ್ಮನಿಂದ ಸೃಷ್ಟಿಯಾದುದರಿಂದ ಬ್ರಹ್ಮಕುಲ ಎನಿಸಿಕೊಳ್ಳುವುದು. ಆದುದರಿಂದ ಕುಲ ಎಂದರೆ ಪ್ರಪಂಚ. ಇಂತಹ ಪ್ರಪಂಚದಲ್ಲಿ ಅಮೃತಸ್ವರೂಪವಾದುದೇ ಧರ್ಮಮಾರ್ಗದ ನಡೆವಳಿಕೆ. ಆದುದರಿಂದ ಕುಲಾಮೃತೈಕರಸಿಕಾ ಎಂದರೆ ಕುಲ-ಪ್ರಪಂಚದ, ಅಮೃತ ಧರ್ಮಮಾರ್ಗ, ಏಕ-ಒಂದರಲ್ಲೇ, ರಸಿಕಾ-ಆಸಕ್ತಳು. ಅಂದರೆ ಧರ್ಮವನ್ನೊಂದೇ ಉದ್ಧಾರಮಾಡುವವಳು. ಕ್ಷತ್ರಿಯ ಕುಲವೆಂದರೆ ಕ್ಷಾತ್ರತೇಜಸ್ಸ್ವರೂಪವಾದ ಸಜಾತೀಯ ರಕ್ತಕಣದಿಂದ ಕ್ಷತ್ರಿಯ ವಂಶದಲ್ಲಿ ಜನಿಸಿದವರಿಗೆ ಕ್ಷತ್ರಿಯರೆಂದು ಹೆಸರು. ಜನಿಸಿದ ಅನಂತರವೇ ಕುಲ ಧರ್ಮವಾದ ಕರ್ಮವನ್ನು ಅನುಸರಿಸುವುದು. ಆದುದರಿಂದ ಕುಲ ಎನ್ನುವದು

ರಕ್ತಕಣದ ಸ್ವಭಾವವನ್ನೇ ಅನುಸರಿಸುವುದು. ಇದರಂತೆಯು ಮತ್ತು ವೃಕ್ಷವು ಬೀಜದ ರಕ್ತಕಣದ ಸ್ವಭಾವವನ್ನು ಅನುಸರಿಸಿ ಆಯಾ ವೃಕ್ಷವೆನಿಸುವಂತೆಯೂ ಪ್ರಪಂಚವು "ಏಕಮೇವಾದ್ವಿತೀಯಂ; ಸರ್ವಂ ಖಲ್ವಿದಂಬ್ರಹ್ಮ" ಎಂಬ ಶ್ರುತ್ಯಾಧಾರವನ್ನು ಅನುಸರಿಸಿ ಬ್ರಹ್ಮನಿಂದ ಸೃಷ್ಟಿಯಾದ ಪ್ರಪಂಚವು ಬ್ರಹ್ಮಕುಲವೆನಿಸುವುದು. ಆದುದರಿಂದ ಕುಲ ಎಂದರೆ ಬ್ರಹ್ಮನಿಂದ ಉತ್ಪನ್ನವಾದ ಪ್ರಪಂಚವು. ಇಂತಹ ಪ್ರಪಂಚದಲ್ಲಿ ಧರ್ಮಮಾರ್ಗವೇ ಅಮೃತ. ಅಧರ್ಮಮಾರ್ಗವೇ ವಿಷ. ಧರ್ಮಮಾರ್ಗವೇ ದೇವತ್ವ. ಅಧರ್ಮಮಾರ್ಗವೇ ರಾಕ್ಷಸತ್ವ. ಆದುದರಿಂದ ಪ್ರಪಂಚದ ಅಮೃತಸ್ವರೂಪವಾದ ಧರ್ಮಮಾರ್ಗದಲ್ಲಿ ಶ್ರೀದೇವಿಯು ರಸಿಕಳೆಂದರೆ ಬಹು ಪ್ರೀತಿಯುಳ್ಳವಳು ಮತ್ತು ಧರ್ಮೋದ್ಧಾರ ಮಾಡುವವಳು.

೯೦ ರಿಂದ ೯೭ ನೆಯ ನಾಮದವರಿಗೆ ಕುಲವೆಂದರೆ ಪ್ರಪಂಚಕ್ಕೆ ಸಂಬಂಧಪಟ್ಟ ವಿಚಾರವೇ ಬರುವುದು. ಈ ನಾಮಗಳಿಗೆ ವೇದಮಾರ್ಗಕ್ಕನುಸಾರವಲ್ಲದ ಶ್ರೀ ಶಂಕರಾಚಾರ್ಯರು ಖಂಡಿಸಿರುವ ವಾಮಾಚಾರ ಪದ್ಧತಿಯಾದ ತಂತ್ರಗ್ರಂಥಗಳಲ್ಲಿರುವ ಕೌಲಮತಕ್ಕೆ ಸಂಬಂಧಪಟ್ಟುದೆಂಬ ಅರ್ಥವೆಂದು ತಿಳಿದಿರುತ್ತಾರೆ. ಇದು ಸಮಂಜಸವಾಗಿಲ್ಲ. ಕಾರಣವೇನೆಂದರೆ, ಸಕಲ ದೇವತಾವತಾರಗಳೂ ದುಷ್ಟನಿಗ್ರಹಮಾಡಿ ಧರ್ಮಸಂಸ್ಥಾಪನೆಗೋಸ್ಕರ ಆಗಿರುವಂತೆ ಶ್ರೀಲಲಿತಾಂಬೆಯ ಅವತಾರವೂ ಆಗಿರುವುದೇ ಹೊರತು ಹೇಯವಾದ ಕೌಲಮತ ಸಂಪ್ರದಾಯದ ಉದ್ಧಾರಕ್ಕಲ್ಲ. ಧರ್ಮಸಂಸ್ಥಾಪನೆಯೇ ಮುಖ್ಯವಾದುದೆಂದು ತಿಳಿಸುವ ಉದ್ದೇಶದಿಂದಲೇ ಸಹಸ್ರನಾಮದ ಪ್ರಾರಂಭದಲ್ಲಿ ದೇವಕಾರ್ಯಸಮುದ್ಯತಾ ಎಂಬ ನಾಮವು ಇದೆ. ಅಲ್ಲದೆ ಭಂಡಾಸುರನ ವಧೆಯ ವಿಚಾರವನ್ನು ಮತ್ತು ಶ್ರೀದೇವಿಯ ಮಂತ್ರತತ್ವವನ್ನು ತಿಳಿಸಿದಕೂಡಲೆ ಧರ್ಮೋದ್ಧಾರದ ವಿಚಾರವು ಈ ಕುಲಾಮೃತೈಕರಸಿಕಾ ಎಂಬ ನಾಮದಲ್ಲಿ ಪ್ರಾರಂಭವಾಗಿದೆ.

**೯೧. ಕುಳಸಂಕೇತ ಪಾಲಿನ್ಯೈನಮಃ—**

ಪ್ರಪಂಚದ ಸೃಷ್ಟಿಯ ಮತ್ತು ವ್ಯಾಪಾರದ ನಿಯಮಗಳನ್ನೂ ಅದರಲ್ಲಿರುವ ಗುಟ್ಟುಗಳನ್ನೂ ಕಾಪಾಡಿಕೊಂಡು ಬರುವವಳು.

**೯೨. ಕುಲಾಂಗನಾಯೈನಮಃ—**

ಪ್ರಪಂಚ ವ್ಯಾಪಾರ ಮಾಡಿಸುತ್ತಿದ್ದರೂ ತಾನು ನಿರ್ಲಿಪ್ತತೆಯಿಂದ ಇರುವವಳು. ಅಂದರೆ ಈಶ್ವರನಿಗೆ ರಾಣಿಯಾಗಿ ಪ್ರಪಂಚವ್ಯಾಪಾರಕ್ಕೆ ಪ್ರಕಾಶಕಳಾಗಿದ್ದರೂ ಪ್ರಪಂಚಕ್ಕೆ ಅಂಟದೆ ಈಶ್ವರತ್ವದ ಪತಿವ್ರತಾಶಿರೋಮಣಿಯಾಗಿರುವವಳು.

**೯೩. ಕುಲಾನ್ತಸ್ಸ್ಥಾಯೈನಮಃ—**

ಕುಲ ಎಂದರೆ ಪ್ರಪಂಚದಲ್ಲಿ ಅಂತಸ್ಥಾ ಎಂದರೆ ಅಂತರ್ಯಾಮಿಣಿಯಾಗಿ ಇರುವವಳು

**೯೪. ಕೌಳಿನ್ಯೈನಮಃ—**

ಕುಲರೂಪಿಣಿಯಾದ್ದರಿಂದ ಕೌಳಿನಿಯು. ಅಂದರೆ ಪ್ರಪಂಚವೇ ತಾನಾದುದರಿಂದ ವಿರಾಟ್‌ಸ್ವರೂಪಿಣಿಯಾಗಿರುವವಳು. ನಮ್ಮ ದೇಹದಲ್ಲಿ ವಿರಾಟ್ ಸ್ವರೂಪವಾದ ವಿಶ್ವಕ್ಕೆ ಅಂದರೆ ಓಂಕಾರದಲ್ಲಿನ ಅಕಾರಕ್ಕೆ ಮೂಲಾಧಾರ ಚಕ್ರವು ಪ್ರಧಾನ ಸ್ಥಳವಾಗಿದೆ. ವಿಶ್ವಸ್ವರೂಪಿಣಿಯಾದ ಶ್ರೀಕುಂಡಲನಿಯು ಇಲ್ಲಿ ನೆಲೆಸಿರುವದರಿಂದ ಇವಳಿಗೆ ಕೌಳನೀ ಎಂಬ ಹೆಸರಿರುವುದು.

**೯೫. ಕುಳಯೋಗಿನ್ಯೈನಮಃ—**

ಯೋಗವೆಂದರೆ ಯುಜ್-ಅರ್ಥದ ಮೇಲೆ ಸಂಯೋಗನಾಡಿ ಧರಿಸುವಿಕೆ. ಆದುದರಿಂದ ಪ್ರಪಂಚವನ್ನು ಧರಿಸುವವಳು.

**೯೬. ಅಕುಳಾಯೈನಮಃ—**

ಪ್ರಪಂಚವೆಲ್ಲ ತಾನೇ ಆಗಿದ್ದರೂ ತಾನು ಅದರಲ್ಲಿ ಇಲ್ಲದವಳು. ಅಂದರೆ ಪ್ರಪಂಚಕ್ಕೆ ನಿರ್ಲಿಪ್ತಳಾಗಿರುವ ಪರಬ್ರಹ್ಮಸ್ವರೂಪಿಣಿಯು.

ಕುಲಶಬ್ದಕ್ಕೆ ಪ್ರಪಂಚವೆಂಬ ಅರ್ಥವೆಂದು ಸೂಚಿಸಿರುವದರಿಂದ ಇದುವರೆಗಿನ ಏಳು ನಾಮಗಳು ಪ್ರಪಂಚಕ್ಕೂ ಶ್ರೀದೇವಿಗೂ ಇರುವ ಸಂಬಂಧವನ್ನು ತಿಳಿಸಿದವು. ಈತತ್ವ ಸಮರ್ಥನೆಗೆ ಶ್ರೀಕಾಳಿದಾಸನು ಸಕಲ ಜನನೀಸ್ತವ ಸ್ತೋತ್ರದಲ್ಲಿ,

> " ಕುಲಂಕೇಚಿತ್ಪ್ರಾಹುರ್ವಪುರಕುಲ ಮನ್ಯೇತವ ಬುಧಾಃ |
> ಪರೇ ತತ್ಸಂಭೇದಂ ಸಮಭಿದಧತೇ ಕೌಲಮಪರೇ ||
> ಚತುರ್ಣಾಮಪ್ಯೇಷಾ ಮುಪರಿ ಕಿಮಪಿ ಪ್ರಾಹುರಪರೇ |
> ಮಹಾಮಾಯೇ ತತ್ವಂ ತವಕಥಮಮೀ ನಿಶ್ಚಿನುಮಹೇ || "

**ಅರ್ಥ**— (೧) ಮಹಾಮಾಯೇ - ಅವ್ಯಕ್ತ ಶಕ್ತಿಯೆನಿಸುವ ಮಾತೆಯೆ! ತವ - ನಿನ್ನ, ವಪುಃ - ಸ್ವರೂಪ ಅಥವಾ ದೇಹವನ್ನು, ಕೇಚಿತ್ - ಕೆಲವರು, ಕುಲಮ್-ಪ್ರಪಂಚಸ್ವರೂಪವೆಂದು, ಪ್ರಾಹುಃ-ಹೇಳುತ್ತಾರೆ. (೨) ಅನ್ಯೇ-ಇನ್ನು ಕೆಲವರು, ಬುಧಾಃ - ಪಂಡಿತರು, ಅಕುಲಂ - ಪ್ರಪಂಚಸ್ವರೂಪವಲ್ಲದವಳೆಂದು, ಪ್ರಾಹುಃ - ಹೇಳುತ್ತಾರೆ. (೩) ಪರೇ - ಮತ್ತೆ ಕೆಲವರು, ತತ್ಸಂಭೇದಂ - ಮೇಲೆ

ಹೇಳಿದ ಕುಲ ಮತ್ತು ಅಕುಲಗಳೆರಡಕ್ಕೂ ಬಿನ್ನವಾಗಿರುವುದೆಂದು ಅಂದರೆ ಪ್ರಪಂಚಸ್ವರೂಪಳೂ ಅಲ್ಲ ಮತ್ತು ಶೂನ್ಯರೂಪಳೂ ಆಗದೆ ಚೈತನ್ಯವಾದ ಪರಬ್ರಹ್ಮವಾಗಿರುವಳೆಂದು, ಸಮಭಿದಧತೆ—ಹೇಳುತ್ತಾರೆ. (೪) ಅಪರೇ-ಇನ್ನೂ ಕೆಲವರು, ಕೌಲಮ್-ಕೌಲವೆಂದರೆ ಕುಲದಿಂದ ಉತ್ಪನ್ನವಾದುದಕ್ಕೆ ಕೌಲವೆಂದು ಹೆಸರು. ಇದರಂತೆ ಪರಬ್ರಹ್ಮಕುಲದಿಂದಲೇ ಪ್ರಪಂಚವು ಉತ್ಪತ್ತಿಯಾಗಿರುವುದರಿಂದ ಪರಬ್ರಹ್ಮಸ್ವರೂಪಿಣಿಯಾದ ಶ್ರೀದೇವಿಯೇ ಪ್ರಪಂಚರೂಪವಾಗಿರುವಳೆಂತ, ಸಮಭಿದಧತೆ - ಪ್ರತಿಪಾದಿಸುತ್ತಾರೆ. (೫) ಅಪರೇ-ಇನ್ನೂ ಕೆಲವರು, ಏಷಾಮ್-ಈ, ಚತುರ್ಣಾಮಪಿ- ಮೇಲೆ ಹೇಳಿದ ನಾಲಕ್ಕು ವಿಧಕ್ಕೂ, ಉಪರಿ-ಹೆಚ್ಚಿನದಾದ, ಕಿಮಪಿ-ಪರಬ್ರಹ್ಮ ಸ್ವರೂಪಿಣಿಯಾದ ಶ್ರೀದೇವಿಗೂ ಪ್ರಪಂಚಕ್ಕೂ ಇರುವ ಸಂಬಂಧವು ಹೀಗೆಯೇ ಇರುವುದೆಂತ ನಿರ್ಧರಿಸಲು ಊಹಿಸುವದಕ್ಕೂ ಸಾಧ್ಯವಿಲ್ಲವಾಗಿ ಅನಿರ್ವಚನೀಯವೆಂದು, ಪ್ರಾಹುಃ-ಹೇಳುತ್ತಾರೆ. ತವ-ನಿನ್ನ, ತತ್ವಂ-ಯಥಾರ್ಥವಾದ ಸ್ವರೂಪವು, ಅಮೀ-ತಮ್ಮನ್ನು ತಾವು ತಿಳಿದುಕೊಳ್ಳಲಾರದೆ ಇರುವ ಅಜ್ಞಾನಿಗಳಾದ ಇವರು, ಕಥಂ- ಹೇಗೆ, ನಿಶ್ಚನುಮಹೇ-ನಿಶ್ಚಯಿಸಬಲ್ಲರು? ಅಂದರೆ ಶ್ರೀದೇವಿಗೂ ಪ್ರಪಂಚಕ್ಕೂ ಇರುವ ಸಂಬಂಧದ ವಿಚಾರವನ್ನು ನಿರ್ಧರಿಸಲು ಅಜ್ಞಾನಿಗಳಾದ ನಮ್ಮಿಂದ ಸಾಧ್ಯವಿಲ್ಲವೆಂಬ ತತ್ವವಾಗಿದೆ. ಈ ಮೇಲಿನ ತತ್ವಾರ್ಥಗಳಿಂದಲೂ ಕುಲಶಬ್ದಕ್ಕೆ ಪ್ರಪಂಚವೆಂದು ಅರ್ಥ. ಸಹಸ್ರನಾಮದಲ್ಲಿ ಕುಲಶಬ್ದವು ಎಲ್ಲೆಲ್ಲಿ ಬಂದಿರುವುದೋ ಅಲ್ಲೆಲ್ಲಾ ಪ್ರಪಂಚದ ಅರ್ಥವನ್ನೇ ಬರೆದಿರುವುದು.

## ೯೭. ಸಮಯಾನ್ತಸ್ಥಾಯೈನಮಃ—

ಸಮ - ಸಮತೆಯನ್ನು, ಯಾ - ಹೊಂದಿದವರ, ಅಂತಸ್ಥಾ - ಕೊನೆಯಲ್ಲಿ ಇರುವವಳು. ಸಮತಾ ಎಂಬ ಶಬ್ದದ ತತ್ವಾರ್ಥವೇನೆಂದರೆ, "ಸಮಾಧಿಸ್ಸಮತಾವಸ್ಥಾ ಜೀವಾತ್ಮ ಪರಮಾತ್ಮನೋಃ" ಎಂಬ ಶ್ರುತ್ಯಾಧಾರದಂತೆ ಜೀವಾತ್ಮ ಪರಮಾತ್ಮರುಗಳ ಸಮತೆಯೇ ಸಮಾಧಿಯೆನಿಸುವುದು. ಆದುದರಿಂದ ಸಮಯ ಶಬ್ದವು ಜೀವಬ್ರಹ್ಮರ ಸಾಕ್ಷಾತ್ಕಾರ ಸ್ವರೂಪವನ್ನು ಪ್ರತಿಪಾದಿಸುವುದು. ಸಮತೆಯ ಅಂತಸ್ಥದಲ್ಲಿರುವವಳೆಂದರೆ ಜೀವ ಬಹ್ಮರ ಸಾಕ್ಷಾತ್ಕಾರದ ಅಂತ್ಯದಲ್ಲಿ ಜೀವನು ಪರಬ್ರಹ್ಮವಾಗುವುದರಿಂದ ಪರಬ್ರಹ್ಮ ಸ್ವರೂಪಿಣಿಯಾದ ಶ್ರೀದೇವಿಯು ಸಮಯಾಂತಸ್ಥಾ ಎನಿಸಿಕ್ಕೊಂಡಿರುವಳು. (೨) ಅಂತಸ್ಥಾ ಎಂದರೆ ಒಳಗಿರುವುದೆಂದೂ ಅರ್ಥವಾಗುವುದರಿಂದ ಜೀವಬ್ರಹ್ಮರ ಸಮತೆಯಾಗುವ ಮೋಕ್ಷಕ್ಕೆ ಪ್ರೇರಕಳಾಗಿಯೂ ಮೋಕ್ಷಮಾರ್ಗ ಕ್ರಮದ ನಿಯಾಮಕಳಾಗಿಯೂ ಶ್ರೀದೇವಿಯು ಇರುವವಳು ಎಂಬ ಅರ್ಥವೂ ಆಗುವುದು.

**೯೮. ಸಮಯಾಚಾರ ತತ್ಪರಾಯೈನಮಃ—**

ಜೀವಬ್ರಹ್ಮರ ಸಮತೆಯಿಂದುಂಟಾಗುವ ಮೋಕ್ಷದ ಆಚರಣೆಯಲ್ಲಿರುವವರ ಯೋಗಕ್ಷೇಮಕ್ಕೆ ಭಾಗಿನಿಯಾಗಿರುವವಳು.

೯೦ ನೆಯ ನಾಮದಲ್ಲಿ ಪ್ರಪಂಚ ವ್ಯಾಪಾರದಲ್ಲಿ ಧರ್ಮವೇ ಶ್ರೇಷ್ಠವಾದುದೆಂದೂ ಧರ್ಮಮಾರ್ಗವು ಶ್ರೀದೇವಿಗೆ ಬಹು ಪ್ರೀತಿಯಾದುದರಿಂದ ಧರ್ಮೋದ್ಧಾರ ಮಾಡುವವಳೆಂದೂ ತಿಳಿಸಿತಷ್ಟೆ! ಧರ್ಮಮಾರ್ಗವು ಮೋಕ್ಷಕ್ಕೆ ಸಹಕಾರಿಯಾದುದು. ಮೋಕ್ಷಕ್ಕೆ ಸಹಕಾರಿಯಾದ ಧರ್ಮದವಿಚಾರವನ್ನು ಪ್ರಥಮದಲ್ಲಿ ತಿಳಿಸಿ ಹಿಂದಿನ ಮತ್ತು ಈ ನಾಮದಲ್ಲಿ ಸಮಯಾಚಾರವೆನಿಸುವ ಮೋಕ್ಷದ ವಿಚಾರವನ್ನು ನಿರೂಪಿಸಿದೆ. ಸಮಯಾಚಾರವೆನ್ನುವದು ಮೋಕ್ಷಮಾರ್ಗವೆಂದು ಶ್ರೀ ಶಂಕರಾಚಾರ್ಯರು ಸೌಂದರ್ಯಲಹರಿಯಲ್ಲಿ ತಿಳಿಸಿರುತ್ತಾರೆ. ಸಮಯಾಚಾರ ಮಾರ್ಗವು ಯಾವುದೆಂಬುದನ್ನು ಮುಂದಿನ ೧೦—೧೨ ನಾಮಗಳು ತಿಳಿಸುವವು.

**೯೯. ಮೂಲಾಧಾರೈಕ ನಿಲಯಾಯೈನಮಃ—**

ಮೂಲಾಧಾರ ಚಕ್ರದಲ್ಲಿ ಪ್ರಧಾನತ್ವೇನ ನೆಲಸಿರುವವಳು. ಅಂದರೆ ಮೂಲಾಧಾರ ಚಕ್ರದಲ್ಲಿರುವ ಶ್ರೀ ಕುಂಡಲಿನೀ ಶಕ್ತಿಯೆ ಶ್ರೀದೇವಿಯು.

**೧೦೦. ಬ್ರಹ್ಮಗ್ರಂಥಿವಿಭೇದಿನ್ಯೈನಮಃ—**

ಬ್ರಹ್ಮಗ್ರಂಥಿಯನ್ನು ಭೇದಿಸುವವಳು. ಬ್ರಹ್ಮಗ್ರಂಥಿಯು ಮೂಲಾಧಾರ ಚಕ್ರದಲ್ಲಿರುವುದು.

**೧೦೧. ಮಣಿಪೂರಾನ್ತರುದಿತಾಯೈನಮಃ—**

ಮಣಿಪೂರಚಕ್ರದಲ್ಲಿ ಉದಯಿಸುವವಳು. ಮಣಿಪೂರಚಕ್ರದಲ್ಲಿ ಉದಯಿಸುವವಳೆಂದು ಹೇಳಿರುವದರ ತತ್ವವೇನೆಂದರೆ ಶ್ರೀ ಕುಂಡಲಿನಿಯು ಮೂಲಾಧಾರದಿಂದ ಎದ್ದು ಮಣಿಪೂರದ ಅಂತ್ಯವಾದ ಅನಾಹತಚಕ್ರವನ್ನು ಸಮೀಪಿಸಿದಾಗ ಓಂಕಾರನಾದೋತ್ಪತ್ತಿಯಾಗುವುದೇ ಉದಯಿಸುವವಳೆಂದು ಹೇಳಿರುವುದರ ತತ್ವವಾಗಿದೆ.

**೧೦೨. ವಿಷ್ಣುಗ್ರಂಥಿವಿಭೇದಿನ್ಯೈನಮಃ—**

ವಿಷ್ಣುಗ್ರಂಥಿಯನ್ನು ಭೇದಿಸುವವಳು. ವಿಷ್ಣುಗ್ರಂಥಿಯು ಅನಾಹತಚಕ್ರದಲ್ಲಿರುವುದು.

೧೦೩. ಆಜ್ಞಾಚಕ್ರಾನ್ತರಾಳಸ್ಥಾಯೈನಮಃ—

ಆಜ್ಞಾಚಕ್ರದೊಳಗಡೆ ಇರುವವಳು.

೧೦೪. ರುದ್ರಗ್ರನ್ಥಿವಿಭೇದಿನ್ಯೈನಮಃ—

ರುದ್ರಗ್ರನ್ಥಿಯನ್ನು ಭೇದಿಸುವವಳು. ರುದ್ರಗ್ರನ್ಥಿಯು ಆಜ್ಞಾಚಕ್ರದಲ್ಲಿರುವುದು

೧೦೫. ಸಹಸ್ರಾರಾಮ್ಬುಜಾ ರೂಢಾಯೈನಮಃ—

ಸಹಸ್ರಾರಕಮಲವನ್ನು ಹತ್ತಿ ನೆಲೆಸಿರುವವಳು. ಶ್ರೀ ಕುಂಡಲಿನೀ ಶಕ್ತಿಯು ಮೂಲಾಧಾರದಿಂದ ಎದ್ದು ಮೇಲಿನ ನಾಮಗಳಲ್ಲಿ ತಿಳಿಸಿರುವ ಬ್ರಹ್ಮ, ವಿಷ್ಣು, ರುದ್ರ ಗ್ರನ್ಥಿಗಳನ್ನು ಭೇದಿಸಿಕೊಂಡು ಶಿರಸ್ಸಿನಲ್ಲಿರುವ ಸಹಸ್ರಾರಕಮಲವನ್ನು ಸೇರುವುದೇ ಹತ್ತಿ ನೆಲೆಸಿರುವವಳು ಎಂಬುದರ ತತ್ವ.

೧೦೬. ಸುಧಾಸಾರಾಭಿವರ್ಷಿಣ್ಯೈನಮಃ—

ಸಹಸ್ರಾರಕಮಲದಿಂದ ಶ್ರೀ ಕುಂಡಲಿನೀ ಶಕ್ತಿಯು ಅಮೃತವನ್ನು ಸ್ರವಿಸುವವಳು.

೧೦೭. ತಟಿಲ್ಲತಾ ಸಮರುಚ್ಯೈನಮಃ—

ಮಿಂಚಿನೋಪಾದಿಯಲ್ಲಿ ಪ್ರಕಾಶವುಳ್ಳವಳು. ವಿದ್ಯುಜ್ಜ್ಯೋತಿಸ್ವರೂಪಳು. ಇದಕ್ಕೆ "ವಿದ್ಯುಲ್ಲೇಖೇವ ಭಾಸ್ವರಾ" ಎಂಬ ಶ್ರುತ್ಯಾಧಾರವೂ ಇರುವುದು.

೧೦೮. ಷಟ್ಚಕ್ರೋಪರಿ ಸಂಸ್ಥಿತಾಯೈನಮಃ—

ಷಟ್ಚಕ್ರಗಳ ಮೇಲ್ಭಾಗವಾದ ಸಹಸ್ರಾರದಲ್ಲಿ ವಾಸಿಸುವವಳು. ಅಂದರೆ ಜೀವಬ್ರಹ್ಮ ಸಾಕ್ಷಾತ್ಕಾರ ಸ್ವರೂಪವಾಗಿರುವ ಸಾಕ್ಷಾತ್ ಪರಬ್ರಹ್ಮಸ್ವರೂಪಿಣಿಯು.

೧೦೯. ಮಹಾಸಕ್ತ್ಯೈನಮಃ—

ಮಹಾ ಆಸಕ್ತಿಸ್ವರೂಪಳು. ಕಾರ್ಯವನ್ನು ಇಷ್ಟದಿಂದ ಮಾಡುವುದು ಆಸಕ್ತಿಯೆನ್ನಲ್ಪಡುವುದು. ಮಹಾಸಕ್ತಿಯೆಂದರೆ ಅತ್ಯಂತ ಪ್ರೀತಿಯೊಡಗೂಡಿದ ಇಷ್ಟದಿಂದ ಮಾಡುವುದು ಮಹಾಸಕ್ತಿಯೆನಿಸುವುದು. ಅಂದರೆ ಮೂಲಾಧಾರದಿಂದ ಶ್ರೀ ಕುಂಡಲಿನೀ ಶಕ್ತಿಯನ್ನು ಎಬ್ಬಿಸಿ ಸಹಸ್ರಾರಕ್ಕೆ ಸೇರುವ ತತ್ವವಾದ ಜೀವಬ್ರಹ್ಮರ ಸಾಕ್ಷಾತ್ಕಾರವನ್ನು ಹೊಂದಿ ಜನನ ಮರಣ ಪ್ರವಾಹದಿಂದ ತಪ್ಪಿಸಿ

ಕೊಳ್ಳಬೇಕಾದರೆ ಅತ್ಯಂತ ಪ್ರೀತಿಯಿಂದಲೂ ತೀವ್ರತಮವಾದ ಮೋಕ್ಷೇಚ್ಛೆಯಿಂದಲೂ ಧ್ಯಾನಾಭ್ಯಾಸದ ಕಾರ್ಯವನ್ನು ಮಾಡಬೇಕೆಂಬುದನ್ನು ಸೂಚಿಸುವುದೇ ಮಹಾ ಆಸಕ್ತಿಯೆನಿಸುವುದು. ಶ್ರೀದೇವಿಯು ಇಂತಹ ಆಸಕ್ತಿ ಸ್ವರೂಪಳು.

**೧೧೦. ಕುಂಡಲಿನ್ಯೈನಮಃ—**

ಕುಂಡಲಿನೀ ಸ್ವರೂಪಳು. ಶ್ರೀ ಕುಂಡಲಿನೀ ಶಕ್ತಿಯು ಹಾವು ಸುರಳೀ ಸುತ್ತಿಕೊಂಡು ಇರುವಂತೆ ಸುತ್ತಿಕೊಂಡು ಮೂಲಾಧಾರದಲ್ಲಿರುವುದರಿಂದ ಶ್ರೀದೇವಿಯು ಕುಂಡಲಿನೀ ಸ್ವರೂಪಳೆಂದು ಹೇಳಲ್ಪಟ್ಟಿರುವುದು.

**೧೧೧. ಬಿಸತನ್ತುತನೀಯಸ್ಯೈನಮಃ—**

ತಾವರೇ ದಂಟಿನಲ್ಲಿರುವ ತಂತುವಿನಂತೆ ಬಹು ಸೂಕ್ಷ್ಮಸ್ವರೂಪಳು. ಇದಕ್ಕೆ "ಶಕ್ತಿಃ ಕುಂಡಲಿನೀ ನಾಮ ಬಿಸತನ್ತು ನಿಭಾಶುಭಾ" ಎಂಬ ಶ್ರುತ್ಯಾಧಾರವಿರುವುದು.

೯೯ ನೆಯ ನಾಮದಿಂದ ೧೧೧ ನೆಯ ನಾಮದವರಿಗೆ ಸಮಯಾಚಾರವೆಂದರೆ ಮೋಕ್ಷ ಪಡೆಯುವ ಕ್ರಮವು ವಿವರಿಸಲ್ಪಟ್ಟಿದೆ ಶ್ರೀದೇವಿಯು ಕುಂಡಲಿನೀಯೆಂಬ ಹೆಸರಿನಿಂದ ಸೃಷ್ಟಿಸಿದ ದೇಹವನ್ನು ವ್ಯಾಪಾರಕ್ಕೋಸ್ಕರ ಧರಿಸಿಕೊಂಡು ಮೂಲಾಧಾರದಲ್ಲಿ ನೆಲೆಸಿರುವಳು. ಇವಳು ಬಹು ಸೂಕ್ಷ್ಮರೂಪಳು. ಮಿಂಚಿನೋಪಾದಿಯಲ್ಲಿ ಪ್ರಕಾಶಸ್ವರೂಪಳು. ಮತ್ತು ಮಹಾಶಕ್ತಿಸ್ವರೂಪಳು- ವ್ಯಾಪಾರವನ್ನು ಉಪಸಂಹರಿಸಿ ಮೋಕ್ಷಪಡೆಯುವ ಕ್ರಮವೆಂದರೆ ಪರಬ್ರಹ್ಮವಸ್ತುವೇ ತಾನೆಂದು ಧ್ಯಾನಮಾಡುವಾಗ ಪ್ರಥಮದಲ್ಲಿ ಮೂಲಾಧಾರದಲ್ಲಿರುವ ಬ್ರಹ್ಮಗ್ರಂಥಿಯು ಭೇದಿಸಲ್ಪಡುವುದು. ಅಂದರೆ ವಿಶ್ವತ್ವವೆನಿಸುವ ಬಹಿರ್ವ್ಯಾಪಾರವನ್ನು ಉಪಸಂಹಾರ ಮಾಡಿಕೊಳ್ಳುವಿಕೆಯುಂಟಾಗುವುದು. ಮೂಲಾಧಾರದಿಂದ ಮೇಲಕ್ಕೆ ಇರುವ ಮಣಿಪೂರಚಕ್ರದ ಅಂತ್ಯಕ್ಕೆ ಶ್ರೀ ಕುಂಡಲಿನಿಯು ಸೇರಿದ ಅನಂತರ ವಿಷ್ಣುಗ್ರಂಥಿಯು ಭೇದಿಸಲ್ಪಡುವುದು. ಅಂದರೆ ತೈಜಸತ್ವವೆಂದರೆ ಸ್ವಪ್ನಸದೃಶವಾದ ಸವಿಕಲ್ಪಸಮಾಧಿ ಸ್ಥಿತಿಯನ್ನು ಉಪಸಂಹಾರ ಮಾಡಿಕೊಳ್ಳುವಿಕೆಯು ಉಂಟಾಗುವುದು. ಸಮಾಧಿಯ ಅಭ್ಯಾಸವು ಬಲಿಯುತ್ತ ಕುಂಡಲಿನಿಯು ಭ್ರೂಮಧ್ಯದಲ್ಲಿರುವ ಆಜ್ಞಾಚಕ್ರಕ್ಕೆ ಸೇರಿದನಂತರ ರುದ್ರಗ್ರನ್ಥಿಯು ಭೇದಿಸಲ್ಪಡುವುದು. ಅಂದರೆ ಸಮಾಧಿಯಲ್ಲಿ ಸ್ವಪ್ನಸಾದೃಶ್ಯವೂ ಹೋಗಿ ಅನಂತರ "ನಾನು" ಎಂಬ ಜ್ಞಾನವನ್ನೂ ಉಪಸಂಹಾರಮಾಡಿಕೊಳ್ಳುವಿಕೆಯು ಉಂಟಾಗುವುದು. "ನಾನು" ಎಂಬ ಜ್ಞಾನವು ಉಪ

ಸಂಹಾರವಾಗಿ ಯಾವಾಗ ಪರಬ್ರಹ್ಮನಲ್ಲಿ ಲೀನವಾಗುವುದೋ ಅಂದರೆ ಪ್ರಾಜ್ಞತ್ವವೂ ಹೋಗುವದೋ ಆಗ ಕುಂಡಲಿನಿಯು ಸಹಸ್ರಾರದಲ್ಲಿ ನೆಲೆಸುವಳು. ಇದೇ ಮೋಕ್ಷ ಇದೇ ಬ್ರಹ್ಮಸಾಕ್ಷಾತ್ಕಾರವೆನಿಸಿ ಜನನ ಮರಣರಹಿತವಾದ ಅಮೃತತ್ವವುಂಟಾಗುವಿಕೆಯು. ಇದೇ ೯೯ ನೆಯ ನಾಮದಿಂದ ತಿಳಿಸಿರುವ ಸಮಯಮತ. ಈ ಸಮಯಮತವನ್ನು ಶ್ರೀಶಂಕರ ಭಗವತ್ಪಾದರವರು ಸೌಂದರ್ಯಲಹರಿಯಲ್ಲಿ ಮೇಲಿನಂತೆಯೇ ವಿವರಿಸಿರುತ್ತಾರೆ. ಮುಂದೆ ಸಹಸ್ರನಾಮದಲ್ಲಿ ಬಂದಿರುವ ವಿಚಾರಗಳೆಲ್ಲಾ ಸಮಯಾಚಾರಕ್ಕೆ ಸಂಬಂಧಿಸಿದ ವಿಚಾರಗಳೇ ಆಗಿರುವುವು.

**೧೧೨. ಭವಾನ್ಯೈನಮಃ—**

ಭವ ಎಂದರೆ ಈಶ್ವರ, ಸಂಸಾರ, ಮನ್ಮಥ ಎಂಬ ಅರ್ಥಗಳಾಗುವುವು. ಅಂದರೆ ಈಶ್ವರನ ರಾಣಿಯು. ಮನ್ಮಥನಿಗೆ ಪ್ರಾಣದಾತಳು. ಪ್ರಪಂಚಕ್ಕೆ ಪ್ರಾಣದಾತಳು.

**೧೧೩. ಭಾವನಾಗಮ್ಯಾಯೈನಮಃ—**

ಭಾವನೆಯೊಡಗೂಡಿದ ಧ್ಯಾನದಿಂದ ಲಭ್ಯಳು.

**೧೧೪. ಭವಾರಣ್ಯಕುಠಾರಿಕಾಯೈನಮಃ—**

ಪ್ರಪಂಚಬಂಧನವೆಂಬ ಕಾಡಿಗೆ ಕೊಡಲಿಯಂತಿರುವವಳು.

**೧೧೫. ಭದ್ರಪ್ರಿಯಾಯೈನಮಃ—**

ಮಂಗಳವನ್ನುಂಟುಮಾಡುವುದರಲ್ಲಿ ಬಹು ಪ್ರೀತಿಯುಳ್ಳವಳು.

**೧೧೬. ಭದ್ರಮೂರ್ತ್ಯೈನಮಃ—**ತಾನೇ ಮಂಗಳ ಸ್ವರೂಪಳು.

**೧೧೭. ಭಕ್ತಸೌಭಾಗ್ಯದಾಯಿನ್ಯೈನಮಃ—**

ಭಕ್ತರುಗಳಿಗೆ ಮೋಕ್ಷಸ್ವರೂಪವಾದ ಮಂಗಳವನ್ನುಂಟುಮಾಡುವವಳು.

**೧೧೮. ಭಕ್ತಿಪ್ರಿಯಾಯೈನಮಃ—**ಭಕ್ತಿಗೆ ಸಂತೋಷ ಪಡುವವಳು.

**೧೧೯. ಭಕ್ತಿಗಮ್ಯಾಯೈನಮಃ—**ಭಕ್ತಿಯಿಂದ ದೊರಕುವವಳು.

**೧೨೦. ಭಕ್ತಿವಶ್ಯಾಯೈನಮಃ—**ಭಕ್ತಿಗೆ ವಶಳಾಗಿರುವವಳು.

**೧೨೧. ಭಯಾಪಹಾಯೈನಮಃ—**

ಜನನ ಮರಣಾತ್ಮಕ ಸಂಸಾರ ಭಯವನ್ನು ಹೋಗಲಾಡಿಸುವವಳು.

೧೧೨ ನೆಯ ನಾಮದವರಿಗೆ ಸಮಯಾಚಾರದ (ಮೋಕ್ಷದ ಮಾರ್ಗದ) ವಿಚಾರವನ್ನು ತಿಳಿಸಿತು. ೧೧೨ ರಿಂದ ೧೨೧ ರವರಿಗೆ ಮೋಕ್ಷವನ್ನು ಪಡೆಯುವ ದಕ್ಕೆ ಭಕ್ತಿಯೇ ಬಹು ದೊಡ್ಡ ಸಹಾಯವೆಂದೂ ಪರಾಭಕ್ತಿಯಿಂದ ಶ್ರೀದೇವಿಯನ್ನು ಧ್ಯಾನಮಾಡಬೇಕೆಂಬುದನ್ನೂ ಸೂಚಿಸುತ್ತದೆ.

**೧೨೨. ಶಾಂಭವ್ಯೈನಮಃ—**

ಸುಖದಾಯಕನಾದ ಶಂಭುವಿನ ರಾಣಿಯು. ಮೋಕ್ಷ ಸುಖವನು ಕೊಡುವವಳು.

**೧೨೩. ಶಾರಧಾರಾಧ್ಯಾಯೈನಮಃ—**

ನಾದ ಮತ್ತು ವಿದ್ಯೆಗಳಿಗೆ ಅಧಿದೇವತೆಯಾದ ಶ್ರೀ ಶಾರದಾದೇವಿಯಿಂದ ಆರಾಧಿಸಲ್ಪಡುವವಳು. ಶರತ್ಕಾಲವಾದ ನವರಾತ್ರೆಯ ಮಹಾನವಮಿಯ ದಿನ ಪೂಜಿಸಲ್ಪಡುವವಳು. ಶ್ರೀದೇವಿಯು ನವರಾತ್ರಿಯ ಮಹಾನವಮಿದಿನ ದೇವತೆ ಗಳಿಗೆ ಅನುಗ್ರಹಮಾಡಿದ ದಿನವೆಂದು ಕಾಳಿಕಾಪುರಾಣದಲ್ಲಿ ತಿಳಿಸಿರುವುದು. ನಿರ್ಮಲವಾದ ಮನಸ್ಸುಳ್ಳವರಿಂದ ಆರಾಧಿಸಲ್ಪಡುವವಳು. ಶಾರ ಎಂದರೆ ಜ್ಞಾನ ವನ್ನು, ದಾ-ಕೊಡತಕ್ಕವಳು. ಶಾರ-ಅಜ್ಞಾನವನ್ನು, ದಾ-ನಾಶಪಡಿಸತಕ್ಕವಳು.

**೧೨೪. ಶರ್ವಾಣ್ಯೈನಮಃ—**

ಭೂಮಿಯೇ ದೇಹವಾಗಿ ಉಳ್ಳ ಈಶ್ವರನಿಗೆ ಶರ್ವನೆಂದು ಹೆಸರು. ಇಂತಹ ಈಶ್ವರನ ಪತ್ನಿಯು. ಪ್ರಳಯಕಾಲದಲ್ಲಿ ಪ್ರಾಣಿಗಳನ್ನು (ಶೃ-ಹಿಂಸಾಯಾಂ) ಹಿಂಸಿಸುವವಳಾದುದರಿಂದ ಶರ್ವಾಣಿಯು.

**೧೨೫. ಶರ್ಮದಾಯಿನ್ಯೈನಮಃ—**ಆನಂದವನ್ನುಂಟು ಮಾಡುವವಳು.

**೧೨೬. ಶಾಙ್ಕರ್ಯೈನಮಃ—**ಸೌಖ್ಯ ಪ್ರದಾತಳು. ಶಂಕರನ ಪತ್ನಿಯು.

**೧೨೭. ಶ್ರೀಕರ್ಯೈನಮಃ—**

ಸಂಪತ್ತನ್ನೂ, ಜಯವನ್ನೂ, ಯಶಸ್ಸನ್ನೂ ಕೊಡುವವಳು. ವಿಷ್ಣುವಿನ ಪತ್ನಿಯಾದ ಲಕ್ಷ್ಮಿಯು.

**೧೨೮. ಸಾಧ್ವ್ಯೈನಮಃ—**

ಪತಿವ್ರತಾಶಿರೋಮಣಿಯು. ಉತ್ತಮವಾದ ನಡೆವಳಿಕೆಯುಳ್ಳವಳು.

**೧೨೯. ಶರಚ್ಚನ್ದ್ರನಿಭಾನನಾಯೈನಮಃ—**

ಶರತ್ಕಾಲದ ಚಂದ್ರನಂತೆ ಮುಖವುಳ್ಳವಳು. ಶರತ್ಕಾಲದಲ್ಲಿ ಬಹು ನಿರ್ಮಲನಾಗಿ ಚಂದ್ರನು ಕಾಣುವುದರಿಂದ ಶ್ರೇಷ್ಠತ್ವವು ಬಂದಿರುವುದು.

**೧೩೦. ಶಾತೋದರ್ಯೈನಮಃ—**

ಬಹು ತೆಳ್ಳನಾದ ಹೊಟ್ಟೆಯುಳ್ಳವಳು. ಅನೇಕ ಗುಹೆಗಳುಳ್ಳ ಹಿಮವತ್ಪರ್ವತ ರಾಜನ ಮಗಳು ಸಕಲಪ್ರಾಣಿಗಳ ಹೃದಯ ಗುಹೆಗಳಲ್ಲಿ ಚಿದಗ್ನಿ ರೂಪದಿಂದಿರತಕ್ಕವಳು.

**೧೩೧. ಶಾನ್ತಿಮತ್ಯೈನಮಃ—**

ಶಾಂತಸ್ವಭಾವದವಳು. ಸುಖದುಃಖಗಳಿಲ್ಲದವಳು.

**೧೩೨. ನಿರಾಧಾರಾಯೈನಮಃ—**

ಯಾವ ಆಧಾರವೂ ಇಲ್ಲದೆ ತನಗೆ ತಾನೇ ಆಧಾರವಾಗಿ ಇರುವ ಪರಬ್ರಹ್ಮ ಸ್ವರೂಪಿಣಿಯು. ತ್ರಿಪುಟೀರಾಹಿತ್ಯ ಸ್ವರೂಪಿಣಿಯು.

**೧೩೩. ನಿರಞ್ಜನಾಯೈನಮಃ—**ಪರಿಶುದ್ಧವಾದ ವಸ್ತುವಾಗಿರುವವಳು.

**೧೩೪. ನಿರ್ಲೇಪಾಯೈನಮಃ—**

ಯಾವದಕ್ಕೂ ಅಂಟದೆ ತನಗೆತಾನೇ ಇರುವವಳು. ಪರಬ್ರಹ್ಮಸ್ವರೂಪಿಣಿಯು.

**೧೩೫. ನಿರ್ಮಲಾಯೈನಮಃ—**

ಅಜ್ಞಾನವೆಂಬ ಕೊಳೆಯಿಲ್ಲದೆ ಸ್ವಚ್ಛವಾದ ಜ್ಞಾನಸ್ವರೂಪಳಾಗಿರುವವಳು.

**೧೩೬. ನಿತ್ಯಾಯೈನಮಃ—**ನಾಶವೇ ಇಲ್ಲದೆ ಶಾಶ್ವತವಾಗಿರುವವಳು.

**೧೩೭. ನಿರಾಕಾರಾಯೈನಮಃ—**

ಆಕಾರರಹಿತಳು. ಅಂದರೆ ಭಾವನೆಗೆ ನಿಲುಕದ ಪರಬ್ರಹ್ಮಸ್ವರೂಪಿಣಿಯು.

**೧೩೮. ನಿರಾಕುಲಾಯೈನಮಃ—**

ಪ್ರಪಂಚಕ್ಕೆ ಅತೀತಳು. ಯಾವ ಬಗೆಯ ಮನಸ್ಸಿನ ಕಳವಳವಿಲ್ಲದವಳು.

**೧೩೯. ನಿರ್ಗುಣಾಯೈನಮಃ**—ಸತ್ವರಜಸ್ತಮೋಗುಣಾತೀತಳು.

**೧೪೦. ನಿಷ್ಕಳಾಯೈನಮಃ—**

ಕ್ಷಣಿಕವಲ್ಲದವಳು. ವಿದ್ಯೆಗೂ ಅತೀತಳು. ಕಾಲಾತೀತಳು

**೧೪೧. ಶಾನ್ತಾಯೈನಮಃ—**

ಯಾವ ವಿಕಾರಕ್ಕೂ ಒಳಗಾಗದ ನಿಶ್ಚಲವಾಗಿರುವ ಆನಂದಸ್ವರೂಪಿಣಿಯು. ಇದಕ್ಕೆ "ಚತುರ್ಥಶ್ಶಾಂತ ಆತ್ಮಾ" ಎಂಬ ಶ್ರುತ್ಯಾಧಾರವೂ ಇರುವುದು.

**೧೪೨. ನಿಷ್ಕಾಮಾಯೈನಮಃ**—ಕಾಮರಹಿತಳು.

**೧೪೩. ನಿರುಪಪ್ಲವಾಯೈನಮಃ—**

ಯಾವ ವಿಧವಾದ ಉಪದ್ರವವೂ ಇಲ್ಲದವಳು. ನಾಶರಹಿತಳು. ಪ್ರಪಂಚಕ್ಕೂ ದೇಹಕ್ಕೂ ಅಮೃತವೃಷ್ಟಿಯನ್ನುಂಟುಮಾಡುವವಳು.

**೧೪೪. ನಿತ್ಯಮುಕ್ತಾಯೈನಮಃ—**

ಯಾವಾಗಲೂ ಯಾವ ಉಪಾಧಿಯೂ ಇಲ್ಲದವಳು.

**೧೪೫. ನಿರ್ವಿಕಾರಾಯೈನಮಃ**—ವಿಕಾರರಹಿತಳು.

**೧೪೬. ನಿಷ್ಪ್ರಪಂಚಾಯೈನಮಃ—**

ಪ್ರಪಂಚರಹಿತಳು. ದ್ವೈತಭಾವವಿಲ್ಲದವಳು.

**೧೪೭. ನಿರಾಶ್ರಯಾಯೈನಮಃ—**

ಯಾವ ಆಧಾರದಿಂದಲೂ ಇರದೆ ತನ್ನ ಆಧಾರದ ಮೇಲೆಯೆ ತಾನು ಇರುವವಳು.

**೧೪೮. ನಿತ್ಯಶುದ್ಧಾಯೈನಮಃ—**

ಯಾವಾಗಲೂ ಅವಿದ್ಯಾಲೇಪವಿಲ್ಲದೆ ಪರಿಶುದ್ಧವಾಗಿರುವವಳು. ಇದಕ್ಕೆ "ಅಸ್ಪರ್ಶಶ್ಚ ಮಹಾಶುಚಿಃ," ಎಂಬ ಶ್ರುತ್ಯಾಧಾರವೂ ಇರುವುದು.

೧೪೯. ನಿತ್ಯಬುದ್ಧಾಯೈನಮಃ—

ಯಾವಾಗಲೂ ಅಜ್ಞಾನವಿಲ್ಲದ ಶುದ್ಧವಾದ ಜ್ಞಾನಸ್ವರೂಪಳು. ಇದಕ್ಕೆ "ನಹಿ ವಿಜ್ಞಾತು ರ್ವಿಜ್ಞಾತೇ ರ್ವಿಪರಿಲೋಪೋವಿದ್ಯತೆ" ಎಂಬ ಶ್ರುತ್ಯಾಧಾರವು.

೧೫೦. ನಿರವದ್ಯಾಯೈನಮಃ—ಅವಿದ್ಯಾರಹಿತಳು. ದೋಷರಹಿತಳು.

೧೫೧. ನಿರನ್ತರಾಯೈನಮಃ—ಸದಾಕಾಲದಲ್ಲೂ ಏಕಸ್ವರೂಪವಾಗಿರುವವಳು.

೧೫೨. ನಿಷ್ಕಾರಣಾಯೈನಮಃ—

ಶ್ರೀದೇವಿಯ ಸ್ವರೂಪಕ್ಕೆ ಕಾರಣವಾದುದು ಮತ್ತೊಂದಿಲ್ಲ. ತನಗೆ ತಾನೇ ಕಾರಣಳು.

೧೫೩. ನಿಷ್ಕಳಂಕಾಯೈನಮಃ—ಕಳಂಕರಹಿತಳು. ಪರಿಶುದ್ಧವಾದವಳು.

೧೫೪. ನಿರುಪಾಧಯೇನಮಃ—

ಯಾವ ತೊಂದರೆಯೂ ಇಲ್ಲದವಳು. ಯಾವ ವೇಷವೂ ಇಲ್ಲದವಳು.

೧೫೫. ನಿರೀಶ್ವರಾಯೈನಮಃ—

ಶ್ರೀದೇವಿಗಿಂತ ಶ್ರೇಷ್ಠರೂ ನಿಯಾಮಕರೂ ಯಾರೂ ಇಲ್ಲದೆ ತಾನೇ ಎಲ್ಲರಿಗಿಂತಲೂ ಶ್ರೇಷ್ಠಳಾಗಿಯೂ ನಿಯಾಮಕಳಾಗಿಯೂ ಇರುವುದರಿಂದ ನಿರೀಶ್ವರೆ ಎನಿಸಿಕೊಳ್ಳುವಳು.

೧೫೬. ನೀರಾಗಾಯೈನಮಃ—ವಿಷಯಾಭಿಲಾಷಾರಹಿತಳು.

೧೫೭. ರಾಗಮಥನಾಯೈನಮಃ—ವಿಷಯಾಶೆಯನ್ನು ಧ್ವಂಸಮಾಡುವವಳು.

೧೫೮. ನಿರ್ಮದಾಯೈನಮಃ—

ಅಹಂಕಾರರಹಿತಳು. ಹೆಮ್ಮೆ ಇಲ್ಲದವಳು. ಡಂಭವಿಲ್ಲದವಳು.

೧೫೯. ಮದನಾಶಿನ್ಯೈನಮಃ—

ಅಹಂಕಾರವನ್ನೂ ಹೆಮ್ಮೆಯನ್ನೂ ಡಂಭವನ್ನೂ ಧ್ವಂಸಮಾಡುವವಳು.

೧೬೦. ನಿಶ್ಚಿಂತಾಯೈನಮಃ—ವ್ಯಸನರಹಿತಳು.

೧೬೧. **ನಿರಹಂಕಾರಾಯೈನಮಃ**—

ನಾನು, ನನ್ನದು ಎಂಬ ಅಭಿಮಾನರಹಿತಳು.

೧೬೨. **ನಿರ್ಮೋಹಾಯೈನಮಃ**—ಮೋಹರಹಿತಳು

೧೬೩. **ಮೋಹನಾಶಿನ್ಯೈನಮಃ**—

ಪತ್ನೀ ಪುತ್ರಾದಿ ಪ್ರಾಪಂಚಿಕ ವಿಷಯಗಳಲ್ಲಿರುವ ಮೋಹವನ್ನು ಧ್ವಂಸ ಮಾಡುವವಳು. ವಿರಕ್ತಿಯನ್ನು ಅನುಗ್ರಹಿಸುವವಳು.

೧೬೪. **ನಿರ್ಮಮಾಯೈನಮಃ**—

ತನಗೋಸ್ಕರವಾಗಿ ಯಾವ ಅಭಿಮಾನವೂ ಇಲ್ಲದವಳು. ಸ್ವಾರ್ಥತೆ ಇಲ್ಲದವಳು.

೧೬೫. **ಮಮತಾಹನ್ತ್ರ್ಯೈನಮಃ**—

ನಾನು ಮತ್ತು ನನ್ನದೆಂಬ ಅಭಿಮಾನವನ್ನು ನಾಶಪಡಿಸುವವಳು. ಸ್ವಾರ್ಥತೆಯನ್ನು ತೊಲಗಿಸುವವಳು.

೧೬೬. **ನಿಷ್ಪಾಪಾಯೈನಮಃ**—ಲೇಶವಾದರೂ ಪಾಪಲೇಪವಿಲ್ಲದವಳು.

೧೬೭. **ಪಾಪನಾಶಿನ್ಯೈನಮಃ**—

ಪಾಪ (ದೋಷ) ಗಳನ್ನೆಲ್ಲಾ ನಿರ್ಮೂಲಮಾಡುವವಳು.

೧೬೮. **ನಿಷ್ಕ್ರೋಧಾಯೈನಮಃ**—ಕೋಪವಿಲ್ಲದವಳು. ದ್ವೇಷವಿಲ್ಲದವಳು.

೧೬೯. **ಕ್ರೋಧಶಮನ್ಯೈನಮಃ**—

ಕೋಪವನ್ನೂ ದ್ವೇಷವನ್ನೂ ನಿರ್ಮೂಲ ಮಾಡುವವಳು.

೧೭೦. **ನಿರ್ಲೋಭಾಯೈನಮಃ**—

ಲುಬ್ಧತ್ವವಿಲ್ಲದವಳು. ಅತ್ಯುದಾರ ಸ್ವಭಾವದವಳು.

೧೭೧. **ಲೋಭನಾಶಿನ್ಯೈನಮಃ**—ಲೋಭಿತನವನ್ನು ನಾಶಮಾಡುವವಳು.

೧೭೨. **ನಿಸ್ಸಂಶಯಾಯೈನಮಃ**—ಸಂಶಯವಿಲ್ಲದವಳು.

೧೭೩. **ಸಂಶಯಘ್ನ್ಯೈನಮಃ—**

ಸಂಶಯವನ್ನು ಹೋಗಲಾಡಿಸುವವಳು. ದೇವರಿಲ್ಲವೆಂಬ ಭಾವನೆ, ದೇವರು ಒಂದು ಬಗೆಯಾಗಿದ್ದರೆ ತಾನೊಂದು ಬಗೆಯಾಗಿ ತಿಳಿದುಕೊಳ್ಳುವ ವಿಪರೀತ ಭಾವನೆ, ಇಂತಹ ಸಂಶಯಗಳನ್ನು ಹೋಗಲಾಡಿಸುವವಳು.

೧೭೪. **ನಿರ್ಭವಾಯೈನಮಃ—**

ಜನ್ಮವಿಲ್ಲದವಳು. "ಅನಾದಿಮತ್ಪರಂ ಬ್ರಹ್ಮ" ಎಂಬ ಶ್ರುತ್ಯಾಧಾರ.

೧೭೫. **ಭವನಾಶಿನ್ಯೈನಮಃ**—ಜನನ ಮರಣಗಳನ್ನು ನಾಶಮಾಡುವವಳು.

೧೭೬. **ನಿರ್ವಿಕಲ್ಪಾಯೈನಮಃ—**

ಯಾವ ವಿಕಾರವೂ ಇಲ್ಲದವಳು. ಭ್ರಾಂತಿಯೇ ಇಲ್ಲದವಳು, ಕಲ್ಪನೆಗೆ ಅತೀತಳು.

೧೭೭. **ನಿರಾಬಾಧಾಯೈನಮಃ**—ಯಾವ ಬಾಧೆಯೂ ಇಲ್ಲದವಳು.

೧೭೮. **ನಿರ್ಭೇದಾಯೈನಮಃ—**

ಭೇದಭಾವನೆ ಇಲ್ಲದವಳು. ವ್ಯತ್ಯಾಸವಾಗದವಳು.

೧೭೯. **ಭೇದನಾಶಿನ್ಯೈನಮಃ—**

ಭೇದಭಾವನೆಯನ್ನು. ದ್ವೈತವನ್ನು ನಿರ್ಮೂಲಮಾಡುವವಳು.

೧೮೦. **ನಿರ್ನಾಶಾಯೈನಮಃ**—ನಾಶವೇ ಇಲ್ಲದವಳು. ಆದ್ಯಂತಗಳಿಲ್ಲದವಳು.

೧೮೧. **ಮೃತ್ಯುಮಥನ್ಯೈನಮಃ—**

ಸಾಯುವಿಕೆಯನ್ನು (ಮೃತ್ಯುವನ್ನು) ನಾಶಮಾಡುವವಳು.

೧೮೨. **ನಿಷ್ಕ್ರಿಯಾಯೈನಮಃ—**

ಕ್ರಿಯಾರೂಪವಾದ ಕಾರ್ಯವೇ ಇಲ್ಲದವಳು. ಕರ್ಮವೇ ಇಲ್ಲದವಳು.

೧೮೩. **ನಿಷ್ಪರಿಗ್ರಹಾಯೈನಮಃ—**

ಯಾವುದನ್ನೂ ಸ್ವೀಕರಿಸದವಳು. ಯಾರಿಂದಲೂ ಏನನ್ನೂ ಅಪೇಕ್ಷಿಸದೇ ಇರುವವಳು.

೧೮೪. **ನಿಸ್ತುಲಾಯೈನಮಃ—**

ತನಗೆ ಸಮಾನವಾಗಲಿ ಅಥವಾ ಹೆಚ್ಚಿನವರಾಗಲಿ ಇಲ್ಲದವಳು. ಹೋಲಿಕೆ ಇಲ್ಲದವಳು. ನಿರಾಕಾರಳು.

೧೮೫. **ನೀಲಚಿಕುರಾಯೈನಮಃ—**

ಕಪ್ಪುವರ್ಣದ ಕೂದಲುಳ್ಳವಳು ಆಕಾಶವು ನೀಲವರ್ಣವಾಗಿ ಕಾಣುವುದು. ವಿರಾಟ್‌ಸ್ವರೂಪಳಾದ ಶ್ರೀದೇವಿಯ ಶಿರಸ್ಸಿನ ಕೂದಲು ಆಕಾಶವೆಂಬ ತತ್ತ್ವ.

೧೮೬. **ನಿರಪಾಯಾಯೈನಮಃ—**

ನಾಶವೇಇಲ್ಲದವಳು. ನಿತ್ಯಮುಕ್ತಸ್ವಭಾವದವಳು.

೧೮೭. **ನಿರತ್ಯಯಾಯೈನಮಃ—**

ರೂಪಾಂತರವನ್ನು ಹೊಂದುವುದು ಪರಿಣಾಮ. ಈ ಬಗೆಯು ಇಲ್ಲದವಳು. ಹೆಚ್ಚುವಿಕೆ ಕುಗ್ಗುವಿಕೆಯ ಸ್ವಭಾವವಿಲ್ಲದವಳು.

೧೮೮. **ದುರ್ಲಭಾಯೈನಮಃ—**

ಹೊಂದಲು ಸುಲಭಸಾಧ್ಯವಿಲ್ಲದವಳು. ಜನ್ಮಮೃತ್ಯುಗಳನ್ನುಂಟುಮಾಡುವ ಅಜ್ಞಾನದ ಬಲೆಯನ್ನು ಛೇದಿಸಿಕೊಂಡು ಶ್ರೀದೇವಿಯ ಸಾಯುಜ್ಯಪದವಿಯು ಮೋಕ್ಷಮಾರ್ಗದಲ್ಲಿರುವ ಧೀರರಿಗಲ್ಲದೆ ಅನ್ಯರಿಗೆ ಲಭಿಸುವದಿಲ್ಲ.

೧೮೯. **ದುರ್ಗಮಾಯೈನಮಃ—**

ಪ್ರಪಂಚದ ವ್ಯವಹಾರದ ಬಲೆಯಿಂದ ಬಿಡಿಸಿಕೊಂಡು ಶ್ರೀದೇವಿಯ ಸಾಯುಜ್ಯವನ್ನು ಪಡೆಯುವುದು ಬಹು ಕಷ್ಟವೇ ಆಗಿರುವುದರಿಂದ ಸುಲಭವಾಗಿ ದೊರಕದವಳಾಗಿರುತ್ತಾಳೆ.

೧೯೦. **ದುರ್ಗಾಯೈನಮಃ—**

ದುರಿತಗಳನ್ನೆಲ್ಲಾ ನಿವಾರಿಸಿ ಮುಕ್ತಿಪದವಿಯನ್ನು ಕೊಡುವ ಒಂಭತ್ತು ವರುಷದ ಕನ್ಯೆಯು. ದುರ್ಗಮಾ ಎಂಬ ರಾಕ್ಷಸನನ್ನು ನಿಗ್ರಹಿಸಲು ಅವತಾರವೆತ್ತಿದ್ದ ಶ್ರೀದುರ್ಗಾದೇವಿಯೂ ಶ್ರೀಲಲಿತಾದೇವಿಯೂ ಒಬ್ಬಳೇಯಾಗಿರುತ್ತಾಳೆ.

೧೯೧. **ದುಃಖಹನ್ತ್ರ್ಯೈನಮಃ**—ದುಃಖವನ್ನು ಪರಿಹರಿಸುವವಳು.

೧೯೨. **ಸುಖಪ್ರದಾಯೈನಮಃ**—

ಪ್ರಾಪಂಚಿಕ ಮತ್ತು ಪಾರಮಾರ್ಥಿಕ ಸುಖವನ್ನು ಕೊಡುವವಳು.

೧೯೩. **ದುಷ್ಟದೂರಾಯೈನಮಃ**—

ಅರಿಷಡ್ವರ್ಗಗಳಿಂದ ಕೂಡಿದ ದುಷ್ಟರಿಗೆ ಲಭಿಸದವಳು. ರಾಕ್ಷಸರನ್ನು ನಿಗ್ರಹಿಸುವವಳು.

೧೯೪. **ದುರಾಚಾರಶಮನ್ಯೈನಮಃ**—

ಮೋಕ್ಷಕ್ಕೆ ಸಹಕಾರಿಯಾಗದ ಅಥರ್ವಸ್ವರೂಪವಾದ ಕೆಟ್ಟ ನಡೆವಳಿಕೆಗಳನ್ನು ಧ್ವಂಸಮಾಡುವವಳು. ವೇದ ಸಮ್ಮತವಲ್ಲದ ರಾಕ್ಷಸೀಸ್ವಭಾವದ ಪೂಜೆ ಮತ್ತು ಉಪಾಸನಾ ಮುಂತಾದವುಗಳನ್ನೂ ಮಾರಣಶೂನ್ಯಗಳಿಂದ ಮತ್ತೊಬ್ಬರಿಗೆ ಕೆಡಕನ್ನುಂಟುಮಾಡುವ ದುರಾಚಾರಗಳನ್ನೂ, ಶಾಸ್ತ್ರಕ್ಕೆ ವ್ಯತಿರೇಕಾರ್ಥ ಮಾಡಿಕೊಂಡು ನಡೆಯುವದನ್ನೂ ಧ್ವಂಸ ಮಾಡುವವಳು.

೧೯೫. **ದೋಷವರ್ಜಿತಾಯೈನಮಃ**— ಯಾವ ದೋಷವೂ ಇಲ್ಲದವಳು.

೧೯೬. **ಸರ್ವಜ್ಞಾಯೈನಮಃ**—

ಬ್ರಹ್ಮಾಂಡದ ಸಕಲವಿಚಾರವನ್ನೂ ತಿಳಿದಿರುವವಳು. ಮತ್ತು ತಿಳಿಯತಕ್ಕವಳು. ಬ್ರಹ್ಮಾಂಡದ ಸೃಷ್ಟಿ ಸ್ಥಿತಿ ಲಯದ ಸಕಲ ವಿಚಾರಗಳ ಜ್ಞಾನ ಭಂಡಾರ ಸ್ವರೂಪಳು.

೧೯೭. **ಸಾನ್ದ್ರಕರುಣಾಯೈನಮಃ**—

ಅತ್ಯಂತ ಮನಕರಗುವಂತಹ ಕರುಣೆಯುಳ್ಳವಳು.

೧೯೮. **ಸಮಾನಾಧಿಕವರ್ಜಿತಾಯೈನಮಃ**—

ಶ್ರೀದೇವಿಗೆ ಸಮನಾದ ಮತ್ತು ಶ್ರೇಷ್ಠವಾದ ಮತ್ತೊಬ್ಬರು ಬ್ರಹ್ಮಾಂಡದಲ್ಲಿ ಇರುವುದಿಲ್ಲ.

೧೮೯ ನೆಯ ನಾಮದಿಂದ ಇದುವರೆಗೆ ಶ್ರೀದೇವಿಯು ದುರ್ಗಾವತಾರದ ಮಹಿಮೆಯನ್ನು ತಿಳಿಸುವುದು.

೧೯೯. **ಸರ್ವಶಕ್ತಿಮಯ್ಯೈನಮಃ—**

ಬ್ರಹ್ಮಾಂಡದಲ್ಲಿರುವ ಸರ್ವಶಕ್ತಿಸ್ವರೂಪಳು. ಆದಿಶಕ್ತಿ ಸ್ವರೂಪಿಣಿಯು.

೨೦೦. **ಸರ್ವಮಂಗಳಾಯೈನಮಃ—**

ಸಕಲ ಶುಭ ಸ್ವರೂಪಿಣಿಯು. ಅಲ್ಲದೆ ಸರ್ವಮಂಗಳಪ್ರದಾಯಕಳು.

೨೦೧. **ಸದ್ಗತಿಪ್ರದಾಯೈನಮಃ—**

ಯಾವ ಕಾಲದಲ್ಲೂ ಚ್ಯುತಿ ಯಿಲ್ಲದಿರುವ ಪರಬ್ರಹ್ಮವಸ್ತುವೇ ಸತ್ ಎನ್ನಲ್ಪಡುವುದು. ಇಂತಹ ಪರಬ್ರಹ್ಮತ್ವವೆಂದರೆ ಮೋಕ್ಷವನ್ನು ಹೊಂದಲು ಅನುಗ್ರಹಿಸುವವಳು.

೨೦೨. **ಸರ್ವೇಶ್ವರ್ಯೈನಮಃ—**

ಬ್ರಹ್ಮಾಂಡವನ್ನೇ ಆಳತಕ್ಕವಳು ಮತ್ತು ಬ್ರಹ್ಮಾಂಡಕ್ಕೆ ನಿಯಾಮಕಳು.

೨೦೩. **ಸರ್ವಮಯ್ಯೈನಮಃ**—ಬ್ರಹ್ಮಾಂಡವನ್ನೆಲ್ಲಾ ವ್ಯಾಪಿಸಿರುವವಳು.

೨೦೪. **ಸರ್ವಮನ್ತ್ರಸ್ವರೂಪಿಣ್ಯೈನಮಃ—**

ಸಕಲ ಮಂತ್ರಗಳ ಸ್ವರೂಪಿಣಿಯು. "ಮನನಾತ್ತ್ರಾಣನಾತ್ ಮಂತ್ರಃ" ಎಂಬ ಅರ್ಥದಂತೆ ಮಂತ್ರಗಳಲ್ಲಿರುವ ತ್ರಾಣವೆಲ್ಲಾ ಸ್ವರಶಕ್ತಿಯೊಡಗೂಡಿದ ಅಕ್ಷರಶಕ್ತಿಗಳಲ್ಲಿರುವುವು. ಅಂದರೆ ಋಗ್ಯಜುಸ್ಸಾಮ ಅಥರ್ವಣವೇದಗಳ ಸ್ವರೂಪವುಳ್ಳದ್ದು. ಎಂದರೆ ಜ್ಞಾನಕ್ರಿಯಾ ಇಚ್ಛಾಶಕ್ತ್ಯಾತ್ಮಕವಾಗಿ ಉದಾತ್ತ, ಅನುದಾತ್ತ, ಸ್ವರಿತ, ಪ್ರಚಯ ಸ್ವರೂಪವಾದ ಸ್ವರಗಳ ತ್ರಾಣದಿಂದ ಉಚ್ಚರಿಸಲ್ಪಟ್ಟು ಆಯಾಯ ಮನ್ತ್ರಾಭಿಮಾನಿ ದೇವತೆಗಳಿಗೂ ಕಳಾಸ್ವರೂಪದಲ್ಲಿರುವ ಈಶ್ವರೀಸ್ವರೂಪಳಾದ ಶ್ರೀದೇವಿಗೂ ಸಂಬಂಧವುಂಟಾಗುವ ತ್ರಾಣವುಳ್ಳ ಪದ ಮತ್ತು ವಾಕ್ಯಗಳಿಗೆ ಮಂತ್ರವೆಂದು ಹೆಸರು. ಅಲ್ಲದೆ ಉಪಾಸನಾದೇವತೆಗಳೊಡನೆ ಸಂಬಂಧವನ್ನುಂಟುಮಾಡಿಸುವ ಬೀಜಾಕ್ಷರ ಸ್ವರೂಪವಾದವುಗಳೂ ಮನ್ತ್ರಗಳೆನಿಸುವುವು. ಶ್ರೀದೇವಿಯು ಇಂತಹ ಸರ್ವಮನ್ತ್ರಸ್ವರೂಪಿಣಿಯು.

೨೦೫. **ಸರ್ವಯನ್ತ್ರಾತ್ಮಿಕಾಯೈನಮಃ—**

ಒಂದು ರಾಜ್ಯದಲ್ಲಿ ಅನೇಕ ವಿಧವಾದ ರಾಜ್ಯಾಧಿಕಾರವರ್ಗದವರು ಇರುವಂತೆ ಈಶ್ವರಿಯ ಪ್ರಪಂಚವೆಂಬ ರಾಜ್ಯದಲ್ಲಿ ಅನೇಕ ರಾಜ್ಯಾಧಿಕಾರವರ್ಗದ

ದೇವತಾಶಕ್ತಿಗಳಿರುವವು. ಅಲ್ಲದೆ ಸೃಷ್ಟಿ ಸ್ಥಿತಿಗೋಸ್ಕರ ಅನೇಕ ದೇವತಾ ಅವತಾರಗಳೂ ಆಗಿರುವುವು. ಈ ಅನೇಕ ದೇವತೆಗಳೂ ಮತ್ತು ದೇವತಾವತಾರಗಳೂ ಪ್ರತ್ಯೇಕ ಪ್ರತ್ಯೇಕ ಶಕ್ತಿಗಳಾಗಿರುವುವು. ಈ ಶಕ್ತಿಗಳಿಗೆ ತಕ್ಕಂತೆ ಮಂತ್ರಗಳಿರುವುವು. ಹೀಗೆ ಮನ್ತ್ರಾಧಿಷ್ಠಾನದೇವತೆಗಳಾಗಿರುವ ಪ್ರತಿಯೊಬ್ಬರಿಗೂ ಇರುವ ಶಕ್ತಿಯ ಸಾರವನ್ನು ಮತ್ತು ಅವರು ನೆಲೆಸಿರುವ ಸ್ಥಳದ ಕ್ರಮವನ್ನೂ ನಿರೂಪಿಸುವುದಕ್ಕೆ ಯಂತ್ರವೆಂದು ಹೆಸರು. ಹೀಗೆ ಸಾರಭೂತವಾದ ಶಕ್ತಿಯನ್ನು ನಿರೂಪಿಸುವುದರಿಂದ ಯನ್ತ್ರಕ್ಕೆ "ಯತ್ರಿ ಸಂಕೋಚೇ" ಎಂದು ಅರ್ಥವಾಗುವುದು. ಮುಖ್ಯವಾಗಿ ಆಯಾಯ ದೇವತಾ ಪ್ರಾಣರೂಪವಾಗಿ ನೆಲೆಸುವ ಮಂತ್ರದೊಡಗೂಡಿದ ಶಕ್ತಿರೂಪಕ್ಕೆ ಯಂತ್ರವೆಂದು ಹೆಸರು. ಈ ಯಂತ್ರರೂಪವಾದ ಶಕ್ತಿಗಳು ಇತರ ದುಷ್ಟಶಕ್ತಿಗಳನ್ನು ತಡೆಗಟ್ಟಿ ಧ್ವಂಸಮಾಡಬಲ್ಲವು. ಹೀಗೆ ಧ್ವಂಸಮಾಡುವ ಶಕ್ತಿಯು ಇರುವುದರಿಂದಲೇ ಯನ್ತ್ರಕ್ಕೆ "ಯಮ-ಉಪರಮೆ" ಅಂದರೆ ಅಡ್ಡಿಮಾಡುವುದೆಂದು ಅರ್ಥವಿರುವುದು. ಈಶ್ವರೀರಾಜ್ಯವಾದ ಬ್ರಹ್ಮಾಂಡದಲ್ಲಿ ಯನ್ತ್ರಸ್ವರೂಪವಾದ ಈ ಶಕ್ತಿಗಳು ಕೋಟ್ಯಂತರಗಳಿರುವುದರಿಂದ ಒಟ್ಟಿನಲ್ಲಿ ಪ್ರಪಂಚವೇ ಒಂದು ಯನ್ತ್ರರೂಪವಾಗಿ ಈಶ್ವರಿಯ ರಾಜ್ಯಾಧಿಕಾರವಾಗಿರುವುದು. ಆದುದರಿಂದ ಶ್ರೀದೇವಿಯು ಇಂತಹ ಸಕಲಯನ್ತ್ರ ಸ್ವರೂಪಿಣಿಯು.

## ೨೦೬ ಸರ್ವತನ್ತ್ರರೂಪಾಯೈನಮಃ—

ಸರ್ವ ಯನ್ತ್ರಾತ್ಮಿಕಾ ಎಂಬ ಮೇಲಿನ ನಾಮದಲ್ಲಿ ತಿಳಿಸಿರುವಂತೆ ಈಶ್ವರಿಯ ಜಗತ್ಸ್ವರೂಪವಾದ ರಾಜ್ಯದಲ್ಲಿ ರಾಜ್ಯಾಧಿಕಾರಿಗಳಾಗಿರುವ ದೇವತೆಗಳ ಮತ್ತು ದೇವತಾ ಅವತಾರಗಳ ಕೋಟ್ಯಂತರ ಶಕ್ತಿಗಳಿರುವವಷ್ಟೆ? ರಾಜ್ಯಾಧಿಕಾರಿಗಳಾದ ಈ ಶಕ್ತಿಗಳು ತಮತಮಗೆ ಹಂಚಿಬಂದ ಜಗತ್ತಿನ ಭಾಗಗಳನ್ನು ಧರಿಸಿಕೊಳ್ಳುತ್ತವೆ. ತನ್ತ್ರ ಎಂದರೆ "ತತ್ರಿ-ಧಾರಣೆ" ಎಂಬ ಅರ್ಥದಂತೆ ಪ್ರತಿಯೊಂದು ಶಕ್ತಿಯೂ ತನ್ನ ತನ್ನ ಭಾಗವನ್ನು ಧರಿಸುವ ಶಕ್ತಿಯುಳ್ಳದ್ದಾಗಿರುವುದೆಂಬುದನ್ನು ತಿಳಿಸುವುದರಿಂದ ತನ್ತ್ರವೆಂದು ಹೆಸರು. ಹೀಗೆ ಪ್ರತಿಯೊಂದು ಶಕ್ತಿಯೂ ಜಗತ್ತಿನ ತನ್ನ ತನ್ನ ಭಾಗವನ್ನು ಧರಿಸಿ ಸುಮ್ಮನಿರದೆ ತನ್ನ ತನ್ನ ಭಾಗದಲ್ಲಿನ ಕಾರ್ಯಗಳನ್ನೂ ಸಹ ಮಾಡಿಸಿ ಕ್ರಿಯಾರೂಪದ ವಿವರಣೆಯಾಗಿಯೂ ಇರುವುದು. ಈ ಸಮರ್ಥನೆಗೆ ಸರಿಯಾಗಿ ತನ್ತ್ರ ಎಂದರೆ "ತನುವಿಸ್ತಾರೆ" ಎಂದರ್ಥವಾಗಿ ಕಾರ್ಯದ ವಿಸ್ತಾರವನ್ನೂ ಸೂಚಿಸುವುದು. ಅಲ್ಲದೆ ತನ್ತ್ರವೆಂದರೆ ನೂಲುವಿಕೆಯೆಂದೂ ಅರ್ಥ. ನೂಲುವಿಕೆಯು ಹೇಗೆ ಒಂದಕ್ಕೊಂದು ಸೇರಿಕೊಳ್ಳುವುದೊ ಅದರಂತೆ ಜಗತ್ತಿನ ರಾಜ್ಯಾಧಿಕಾರಿಗಳಾದ ವಿವಿಧಶಕ್ತಿಗಳ ಕಾರ್ಯಗಳೂ ಒಂದಕ್ಕೊಂದು ಸೇರಿಕೊಂಡು ಒಟ್ಟಿನಲ್ಲಿ ಒಂದು ಜಗದ್ರೂಪವಾಗಿರುವುದು. ತನ್ತ್ರವೆಂದರೆ ಯುಕ್ತಿಯೆಂದೂ ಅರ್ಥವಾಗುವುದು. ಜಗತ್ತಿನ

ರಾಜ್ಯಾಧಿಕಾರಿಗಳಾದ ವಿವಿಧಶಕ್ತಿಗಳು ಯುಕ್ತಿಯಿಂದ ತಮ್ಮ ತಮ್ಮ ಕಾರ್ಯಗಳನ್ನು ಮಾಡುತ್ತವೆಂಬುದನ್ನೂ ಸೂಚಿಸುವುದು. ಈ ಮೇಲಿನ ವಿವರಣೆಯಿಂದ ಜಗತ್ತಿನ ರಾಜ್ಯಾಧಿಕಾರಿಗಳಾದ ಯನ್ತ್ರಸ್ವರೂಪವಾದ ಕೋಟ್ಯಾನುಕೋಟಿ ಶಕ್ತಿಗಳು ಜಗತ್ತಿನ ತಮ್ಮ ತಮ್ಮ ಭಾಗಗಳನ್ನು ಧರಿಸುವಿಕೆ, ಕಾರ್ಯರೂಪ ಮತ್ತು ಕಾರ್ಯಗಳೆಲ್ಲಾ ಒಂದಕ್ಕೊಂದು ಹೊಂದಿಕೊಂಡು ಇರುವಿಕೆಗಳಾದ ಸಕಲ ತನ್ತ್ರಸ್ವರೂಪಿಣಿಯೂ ಶ್ರೀದೇವಿಯೇ ಆಗಿರುತ್ತಾಳೆ.

ಮಂತ್ರ ಯಂತ್ರ ತಂತ್ರಗಳ ವಿಚಾರಕ್ಕೆ ಪಿಂಡಾಂಡವಾದ ಮನುಷ್ಯದೇಹದ ಸೃಷ್ಟಿವ್ಯಾಪಾರಗಳ ಕ್ರಮಗಳನ್ನು ಉದಾಹರಣೆಗಾಗಿ ತೆಗೆದುಕೊಳ್ಳಬಹುದು. ಶುಕ್ಲಶೋಣಿತದ್ವಂದ್ವವಾದ ನೀರಿನಲ್ಲಿ ದೇಹದ ಎಲ್ಲಾ ಅವಯವಗಳ ಶಕ್ತಿಗಳು ಜೀವನೊಡನೆ ಅಡಗಿದ್ದು ವಿಧವಿಧವಾದ ಅಂಗಗಳಾಗಿ ಒಂದಕ್ಕೊಂದು ಹೊಂದಿಕೊಂಡು ಸೃಷ್ಟಿಯಾಗಿ ಅನಂತರ ಅಂಗಗಳೆಲ್ಲಾ ಒಂದಕ್ಕೊಂದು ಹೊಂದಿಕೊಂಡು ವಿಚಿತ್ರತರವಾದ ಯಂತ್ರವಾಗಿ ವ್ಯಾಪಾರ ನಡೆಯುವುದು. ಪಿಂಡಾಂಡದಲ್ಲಿ ಹೇಗೊ ಬ್ರಹ್ಮಾಂಡದಲ್ಲೂ ಹಾಗೆಯೆ. ಆದುದರಿಂದ ಶ್ರೀದೇವಿಯು ಇಂತಹ ಸಕಲ ಯಂತ್ರ ತಂತ್ರಸ್ವರೂಪಿಣಿಯೂ ಆಗಿರುತ್ತಾಳೆ. ಮೇಲೆ ವಿವರಿಸಿರುವ ಜಗದೀಶ್ವರಿಯ ರಾಜ್ಯಾಧಿಕಾರಿಗಳ ಶಕ್ತಿರೂಪವಾದ ತನ್ತ್ರಗಳಿಗೂ ಈ ನಾಮದ ಅರ್ಥವಾಗಿ ಭಾಸ್ಕರರಾಯರು ತಮ್ಮ ಭಾಷ್ಯದಲ್ಲಿ ಬರೆದಿರುವ ಪುರುಷಾರ್ಥಪ್ರದವಲ್ಲದ ವಾಮಕೇಶ್ವರಾದಿ ೬೪ ತನ್ತ್ರಗಳಿಗೂ ಸಂಬಂಧವೇ ಇಲ್ಲ.

**೨೦೭. ಮನೋನ್ಮನ್ಯೈನಮಃ—**

ಪ್ರಪಂಚ ವ್ಯವಹಾರವಿಲ್ಲದೆ ಬ್ರಹ್ಮಾನಂದದಲ್ಲಿ ಮಗ್ನವಾಗಿ ಮುಳುಗಿರುವ ಮನಸ್ಸಿನ ಸ್ಥಿತಿಗೆ ಉನ್ಮನೀ ಸ್ವಭಾವವೆಂದು ಹೆಸರು. ಇಂತಹ ಮುಕ್ತಸ್ಥಿತಿಯು ಶ್ರೀದೇವಿಗೆ ಬಹುಪ್ರಿಯವಾದುದರಿಂದ ಮನೋನ್ಮನಿಯ ಸ್ವರೂಪಳಾಗಿರುವವಳು.

**೨೦೮. ಮಾಹೇಶ್ವರ್ಯೈನಮಃ—**

ಮಹೇಶ್ವರನ ರಾಣಿಯು. ಬ್ರಹ್ಮಾಂಡವನ್ನು ಆಳಲು ಮತ್ತು ಬ್ರಹ್ಮಾಂಡಕ್ಕೆ ನಿಯಾಮಕರಾಗಲು ಶ್ರೀದೇವಿಗೆ ಸಮನಾದವರು ಯಾರೂ ಇಲ್ಲದಿರುವುದರಿಂದ ಅಂತಹ ಮಹತ್ವವುಳ್ಳವಳಾದುದರಿಂದ ಮಾಹೇಶ್ವರಿಯು.

**೨೦೯. ಮಹಾದೇವ್ಯೈನಮಃ—**

ಅತ್ಯಂತ ಮಹತ್ತಾದ ಪ್ರಕಾಶವುಳ್ಳವಳು. ದೇವತೆಗಳನ್ನು ಲೀಲಾಮಾತ್ರದಿಂದ ಕಾಪಾಡುವದರಲ್ಲಿ ನಿಸ್ಸೀಮಳು. ದೇವತೆಗಳಿಗೆಲ್ಲಾ ಪ್ರಭುವು. ದ್ಯೋತನಾತ್ ದೇವೀ=ಸರ್ವಪ್ರಕಾಶಕಳು.

**೨೧೦. ಮಹಾಲಕ್ಷ್ಮ್ಯೈನಮಃ—**

ನಿಜಾನಂದ ಸ್ವರೂಪವಾದ ಪರಬ್ರಹ್ಮಸ್ವರೂಪಿಣಿಯಾದುದರಿಂದಲೂ ಶ್ರೀದೇವಿಗೆ ಸರಿಸಮಾನವಾದ ಕ್ರೀರ್ತಿಯೂ, ಯಶಸ್ಸೂ, ಮನೋಹರತ್ವವೂ ಮತ್ತಾರಲ್ಲೂ ಇಲ್ಲದಿರುವುದರಿಂದಲೂ ಮಹಾಲಕ್ಷ್ಮಿಯು. ಮಹಾವಿಷ್ಣುವಿನ ಪತ್ನಿಯೂ ಶ್ರೀದೇವಿಯೇ.

**೨೧೧. ಮೃಡಪ್ರಿಯಾಯೈನಮಃ—**

ಸ್ತುತಿಸಲು ಅರ್ಹಳಾದ ಪರಿಶುದ್ಧವಾದ ವಸ್ತುವಾಗಿರುವವಳು. ಶುದ್ಧ ಸತ್ವಪ್ರಧಾನ ಮಾಯೆಯೊಡಗೂಡಿದ ಈಶ್ವರನಿಗೆ ಮೃಡನೆಂದು ಹೆಸರು. ಆತನಲ್ಲಿ ಪ್ರೀತಿಯುಳ್ಳವಳು. ಆನಂದ ಸ್ವರೂಪಿಣಿಯು.

**೨೧೨. ಮಹಾರೂಪಾಯೈನಮಃ—**

ದೊಡ್ಡದಕ್ಕೆ ದೊಡ್ಡದಾಗಿಯೂ ಶ್ರೇಷ್ಠತೆಗೆ ಶ್ರೇಷ್ಠವಾಗಿಯೂ ಇರುವುದಕ್ಕೆ ಮಹತ್ ಎನ್ನಲ್ಪಡುವುದು. ಮಹಾರೂಪವೆಂದರೆ ವಿರಾಟ್ ಸ್ವರೂಪಿಣಿಯು. ಶ್ರೇಷ್ಠವಾದುದಕ್ಕೆಲ್ಲಾ ಶ್ರೇಷ್ಠವಾದ ಸೌಂದರ್ಯವಿರುವವಳು.

**೨೧೩. ಮಹಾಪೂಜ್ಯಾಯೈನಮಃ—**

ತ್ರಿಮೂರ್ತಿಗಳಿಂದಲೇ ಪೂಜಿಸಲ್ಪಡುವುವಳಾದ್ದರಿಂದ ಪೂಜಿಸಲ್ಪಡುವುದಕ್ಕೆ ಇವಳಿಗಿಂತ ಹೆಚ್ಚಿನವರು ಯಾರೂ ಇರುವುದಿಲ್ಲವಾದ್ದರಿಂದ ಪರಮ ಶ್ರೇಷ್ಠವಾದವಳು.

**೨೧೪. ಮಹಾಪಾತಕನಾಶಿನ್ಯೈನಮಃ—**

ಅಗಾಧವಾದ ಮತ್ತು ಕ್ರೂರವಾದಂತಹ ಪಾಪಗಳನ್ನೆಲ್ಲಾ ನಾಶ ಮಾಡುವವಳು.

**೨೧೫. ಮಹಾಮಾಯಾಯೈನಮಃ—**

ಮಾಯಾ ಎಂದರೆ ಜ್ಞಾನವೆಂದು ಯಾಸ್ಕರ ನಿರುಕ್ತದಲ್ಲಿ ಹೇಳಿದೆ. ಮಹಾಮಾಯಾ ಎಂದರೆ ಶುದ್ಧಜ್ಞಾನವಾದ ಪರಬ್ರಹ್ಮಸ್ವರೂಪಿಣಿಯು. (೨) ಕಾರದಿಂದಲೇ ಊಹಿಸಬೇಕಾದುದಕ್ಕೆ ಮಾಯಾ ಎನ್ನಲ್ಪಡುವುದು. ಬ್ರಹ್ಮಾಂಡದ ಸೃಷ್ಟಿ ಸ್ಥಿತಿಲಯಗಳನ್ನು ಅವುಗಳ ಕಾರ್ಯಗಳಿಂದಲೇ ಊಹಿಸಬೇಕಾಗಿ ತಿಳಿಯಲ ಸಾಧ್ಯವಾದುದರಿಂದ ಮಹಾಮಾಯಾ. (೩) ಸರ್ವಪ್ರಾಣಿಗಳನ್ನೂ ಆನಂದಾಂಶವಾದ ಉತ್ಸಾಹದಿಂದ ಮೋಹಗೊಳಿಸಿ ಪ್ರಪಂಚ ವ್ಯವಹಾರವನ್ನು ನಡೆಸುವವಳಾದುದರಿಂದ ಮಹಾಮಾಯಾ ಎನಿಸಿಕೊಳ್ಳುವಳು.

೨೧೬. ಮಹಾಸತ್ತ್ವಾಯೈನಮಃ—

ತ್ರಿಕಾಲದಲ್ಲೂ ಚ್ಯುತಿಇಲ್ಲದೆ ಯಾವುದು ಇರುವುದೋ, ಸಾರಕ್ಕೆಲ್ಲಾ ಸಾರವಾದುದು ಯಾವುದೋ ಅಂತಹ ಮಹಾಸತ್ವವೆನಿಸುವ ಪರಬ್ರಹ್ಮ ಸ್ವರೂಪಿಣಿಯು.

೨೧೭. ಮಹಾಶಕ್ತ್ಯೈನಮಃ—

ಶಕ್ತಿಗಳಿಗೆಲ್ಲಾ ಶ್ರೇಷ್ಠವಾದ ಮತ್ತು ಮೂಲವಾದ ಆದಿಶಕ್ತಿಯಾಗಿರುವವಳು.

೨೧೮. ಮಹಾರತ್ಯೈನಮಃ—

ಮನ್ಮಥನ ಹೆಂಡತಿಗೆ ರತಿ ಎಂದು ಹೆಸರು. ಸರಿಸಮಾನವಿಲ್ಲದ ಲೋಕ ಮೋಹ ಸ್ವರೂಪವಾದ ರೂಪಾತಿ ಸೌಂದರ್ಯವುಳ್ಳವಳಾದ್ದರಿಂದ ಮಹಾರತಿಯು. ಈಶ್ವರನೊಡನೆ ಕ್ರೀಡಿಸುವವಳು.

೨೧೯ ಮಹಾಭೋಗಾಯೈನಮಃ—

ಬ್ರಹ್ಮಾಂಡದ ಸಕಲಸೌಭಾಗ್ಯ ಸಂಪತ್ತುಳ್ಳವಳು. ಪ್ರಪಂಚವನ್ನೆಲ್ಲಾ ವ್ಯಾಪಿಸಿರುವವಳು.

೨೨೦. ಮಹೈಶ್ವರ್ಯಾಯೈನಮಃ—

ಐಶ್ವರ್ಯಶಾಲಿಗಳಾದ ದೇವೇಂದ್ರ, ಕುಬೇರ ಮುಂತಾದವರೆಲ್ಲ ಶ್ರೀದೇವಿಯ ಕಿಂಕರರಾದುದರಿಂದ ಜಗತ್ತಿನ ಸಕಲೈಶ್ವರ್ಯ ಸ್ವರೂಪಳು.

೨೨೧. ಮಹಾವೀರ್ಯಾಯೈನಮಃ—

ದೇಹದ ಸಕಲ ಅಂಶಗಳ ಸಾರಗಳನ್ನೊಳಗೊಂಡು ದೇಹಕ್ಕೆ ಕಾಂತಿಯನ್ನೂ ಶಕ್ತಿಯನ್ನೂ ಕೊಡುವುದಕ್ಕೆ ವೀರ್ಯವೆಂದು ಹೆಸರು. ಬ್ರಹ್ಮಾಂಡದ ಸಕಲಾಂಶ ಗಳ ಸಾರಭೂತವಾದ ಶಕ್ತಿಸ್ವರೂಪಳಾದುದರಿಂದ ಮಹಾವೀರ್ಯ ಸ್ವರೂಪಿಣಿಯು. ಅತ್ಯಂತ ತೇಜಸ್ವರೂಪಿಣಿಯು ಮತ್ತು ಪರಾಕ್ರಮಶಾಲಿನಿಯು.

೨೨೨. ಮಹಾಬಲಾಯೈನಮಃ—

ಇಂದ್ರಿಯಗಳ ಸ್ಥೂಲಶಕ್ತಿಗೂ ಸೇನೆಗೂ ಬಲವೆಂದು ಹೆಸರು. ಬ್ರಹ್ಮಾಂಡದ ಸಕಲ ಸ್ಥೂಲವಸ್ತುಗಳ ಶಕ್ತಿಯಾಗಿರುವುದರಿಂದಲೂ, ಪ್ರಪಂಚವನ್ನು ಧರ್ಮದಿಂದ ಕಾಪಾಡಲು ಸತ್ವಗುಣದ ಸೇನಾಸ್ವರೂಪವಾದ ಗಣಶಕ್ತಿಗಳಿಂದ ಪರಿವೃತಳಾಗಿರುವುದರಿಂದಲೂ ಮಹಾಬಲಸ್ವರೂಪಿಣಿಯು.

**೨೨೩. ಮಹಾಬುದ್ಧ್ಯೈನಮಃ—**

ಯಾವ ಒಂದರ ಜ್ಞಾನವಾದರೆ ಸರ್ವವನ್ನೂ ತಿಳಿದಂತಾಗುವುದೋ ಅಂತಹ ಸತ್ಯಜ್ಞಾನಸ್ವರೂಪಿಣಿಯು. ಸರ್ವಜ್ಞಮೂರ್ತಿಯು.

**೨೨೪. ಮಹಾಸಿದ್ಧ್ಯೈನಮಃ—**

ಅಮಾನುಷವಾದ ಕಾರ್ಯಗಳ ಶಕ್ತಿಯನ್ನು ಮನುಷ್ಯನು ಹೊಂದುವುದು ಸಿದ್ಧಿಯೆಂದು ಹೇಳಲ್ಪಡುವುದು. ಇಂತಹ ಅಮಾನುಷ ಕಾರ್ಯಗಳ ಶಕ್ತಿಗೆ ಮೂಲರೂಪವಾಗಿ ಜಗತ್ತನ್ನು ಪಾಲಿಸುವವಳಾದುದರಿಂದ ಮಹಾಸಿದ್ಧಿ ಸ್ವರೂಪಿಣಿಯು. ವಿದೇಹ ಮುಕ್ತಿಯನ್ನು ಪಡೆದ ಸ್ಥಿತಿಗೂ ಮಹಾಸಿದ್ಧಿ ಎಂದು ಹೆಸರು.

**೨೨೫. ಮಹಾಯೋಗೀಶ್ವರೇಶ್ವರ್ಯೈನಮಃ—**

ನಿಯಾಮಕರಾಗಿ ಪ್ರಪಂಚವನ್ನು ಧರಿಸುವ (ಯುಜ್ - ಸಂಯೋಗ) ತ್ರಿಮೂರ್ತಿಗಳಾದಿಯಾಗಿ ಸಕಲದೇವತಾ ಶಕ್ತಿಗಳಿಗೂ ನಿಯಾಮಕಳಾಗಿ ಸಕಲ ಬ್ರಹ್ಮಾಂಡವನ್ನೆಲ್ಲಾ ಧರಿಸುವವಳು.

**೨೨೬. ಮಹಾತನ್ತ್ರಾಯೈನಮಃ—**

೨೦೬ನೇ ನಾಮದಲ್ಲಿ ವಿವರಿಸಿರುವಂತೆ ಜಗತ್ತಿನ ವಿವಿಧ ಭಾಗಗಳನ್ನು ಧರಿಸಿಕೊಂಡು ವಿವಿಧಭಾಗಗಳ ಕಾರ್ಯಗಳನ್ನೂ ಮಾಡಿಸಿಕೊಂಡು ಈಶ್ವರಿಯ ರಾಜ್ಯಾಧಿಕಾರಿಗಳಾಗಿರುವ ಎಲ್ಲಾ ಶಕ್ತಿಗಳಿಗೂ ಮೂಲವಾಗಿ ಬ್ರಹ್ಮಾಂಡವನ್ನೇ ಧರಿಸಿ ಬ್ರಹ್ಮಾಂಡದ ಕ್ರಿಯಾರೂಪಕ್ಕೂ ಮೂಲವಾಗಿ ಕರ್ಮಸಾಕ್ಷಿಯಾಗಿರುವ ಮಹತ್ವವುಳ್ಳವಳಾದುದರಿಂದ ಮಹಾತನ್ತ್ರಸ್ವರೂಪಿಣಿಯು.

**೨೨೭. ಮಹಾಮನ್ತ್ರಾಯೈನಮಃ—**

೨೦೪ನೇ ನಾಮದಲ್ಲಿ ವಿವರಿಸಿರುವ ಮನ್ತ್ರಗಳ ಸಾರವನ್ನೆಲ್ಲಾ ಒಳಗೊಂಡಿರುವ ಓಂ, ಹ್ರೀಂ, ಐಂ, ಶ್ರೀಂ, ಕ್ಲೀಂ ಮುಂತಾದ ಮನ್ತ್ರಸ್ವರೂಪಿಣಿಯು. ಅಲ್ಲದೆ ಮೋಕ್ಷಸಾಮ್ರಾಜ್ಯವನ್ನುಂಟುಮಾಡುವ ಋಗ್ಯಜುಸಾಮಾಥರ್ವ ವೇದಗಳ ಸಾರಭೂತವಾದ ಪ್ರಜ್ಞಾನಂಬ್ರಹ್ಮ, ಅಹಂಬ್ರಹ್ಮಾಸ್ಮಿ, ತತ್ವಮಸಿ, ಅಯಮಾತ್ಮಾಬ್ರಹ್ಮ ಎಂಬ ಮಹಾಮನ್ತ್ರಗಳ ಸ್ವರೂಪಿಣಿಯು.

**೨೨೮. ಮಹಾಯನ್ತ್ರಾಯೈನಮಃ—**

ಜಗತ್ತಿನಲ್ಲಿ ದುಷ್ಟನಿಗ್ರಹ ಶಿಷ್ಟಪರಿಪಾಲನಾಕಾರ್ಯಕ್ಕೆ ನಿಯಾಮಕಳಾಗಿಯೂ ಮತ್ತು ಜಗತ್ತನ್ನು ಧರಿಸಿರುವ ವಿವಿಧ ಶಕ್ತಿಗಳಿಗೂ ಸೂತ್ರಧಾರಿಣಿಯಂತೆಯೂ

ಇದ್ದು ಜಗತ್ತಿನ ಸ್ಥಿತಿಯನ್ನು ನಡೆಸುವ ಮಹತ್ವವುಳ್ಳವಳಾದುದರಿಂದ ಮಹಾಯಂತ್ರಸ್ವರೂಪಿಯು.

೨೦೫ ನೇ ನಾಮದಲ್ಲಿ ವಿವರಿಸಿರುವುದನ್ನು ಇಲ್ಲಿಗೆ ಅನ್ವಯಮಾಡಿಕೊಳ್ಳಬೇಕು.

**೨೨೯. ಮಹಾಸನಾಯೈನಮಃ—**

ಶ್ರೀದೇವಿಯು ವ್ಯಾಪಿಸಿ ಕುಳಿತಿರುವ ಸ್ಥಳವು ಪೃಥ್ವೀ ಮೊದಲುಗೊಂಡು ಸಕಲತತ್ವಗಳನ್ನು ಒಳಗೊಂಡ ಬ್ರಹ್ಮಾಂಡ ಮತ್ತು ಮನುಷ್ಯರ ಶಿರಸ್ಸಿನಲ್ಲಿರುವ ಸಹಸ್ರಾರ ಕಮಲವು. ಆದುದರಿಂದ ಮಹಾಸನಾಸೀನಳಾಗಿರುವವಳು.

**೨೩೦ ಮಹಾಯಾಗಕ್ರಮಾರಾಧ್ಯಾಯೈನಮಃ—**

ಮಹತ್ತೆಂದರೆ ಪರಬ್ರಹ್ಮತ್ವವನ್ನುಂಟುಮಾಡುವ ಓಂಕಾರದ ಅಕಾರ ಉಕಾರ ಮಕಾರ ಸ್ವರೂಪವಾದ ಗಾರ್ಹಪತ್ಯ, ದಕ್ಷಿಣಾಗ್ನಿ, ಆಹವನೀಯಾಗ್ನಿಗಳನ್ನು ಕ್ರಮವಾಗಿ ನಮ್ಮಲ್ಲಿ ಪ್ರಜ್ವಲನೆಮಾಡಿ ಪರಬ್ರಹ್ಮ ಸ್ವರೂಪಿಣಿಯಾದ ಶ್ರೀದೇವಿಯನ್ನು ಹೊಂದುವ ಜೀವನ್ಮುಕ್ತಸ್ಥಿತಿಗೂ, ಗಾರ್ಹಪತ್ಯ, ದಕ್ಷಿಣಾಗ್ನಿ ಆಹವನೀಯಾಗ್ನಿಗಳ ಜೊತೆಗೆ ಬಡಬಾಗ್ನಿ ಮತ್ತು ಕಾಲಾಗ್ನಿಗಳನ್ನು ಪ್ರಜ್ವಲನೆಗೊಳಿಸಿ ಜೀವನ್ಮುಕ್ತನು ದೇಹಪತನ ಕಾಲದಲ್ಲಿ ಹೊಂದುವ ವಿದೇಹ ಕೈವಲ್ಯದ ಸ್ಥಿತಿಗೂ ಮಹಾಯಾಗದ ಕ್ರಮದಿಂದ ಶ್ರೀದೇವಿಯನ್ನು ಆರಾಧಿಸುವ ತತ್ವವಾಗಿರುವುದು. ಕರ್ಮಕಾಂಡದಂತೆ ಅನುಷ್ಠಿಸುವ ಪೌಂಡರೀಕ, ಗರುಡಚಯನ, ಅಶ್ವಮೇಧ ಮುಂತಾದವುಗಳೂ ಮಹಾಯಾಗಗಳೆನಿಸುವುವು.

**೨೩೧. ಮಹಾಭೈರವಪೂಜಿತಾಯೈನಮಃ—**

ಮಹಾಪ್ರಳಯಕಾಲದಲ್ಲಿ ಈಶ್ವರನು ಮಹಾಭೈರವಾವತಾರವನ್ನು ಎತ್ತುವನು. ಮಹಾಪ್ರಳಯದ ಕಾರ್ಯಕರ್ತೃಸ್ವರ ಮಹಾಭೈರವನು ಪರಬ್ರಹ್ಮ ಸ್ವರೂಪಿಣಿಯಾದ ಶ್ರೀದೇವಿಯನ್ನು ಪೂಜಿಸುತ್ತಾನೆ. ಶ್ರೀದೇವಿಯು ಮಹಾಭೈರವನ ಮಹಾಪ್ರಳಯ ಕಾರ್ಯಕ್ಕೆ ಸಾಕ್ಷಿಯಾಗಿರುವಳೆಂತ ಮುಂದಿನ ನಾಮದಲ್ಲೇ ಬರುವುದು.

**೨೩೨. ಮಹೇಶ್ವರ ಮಹಾಕಲ್ಪ ಮಹಾತಾಣ್ಡವಸಾಕ್ಷಿಣ್ಯೈನಮಃ—**

ಮಹಾಪ್ರಳಯಕಾಲದಲ್ಲಿ ಪಂಚಭೂತಗಳೂ ಕರಗಿ ಸೂಕ್ಷ್ಮಪರಿಣಾಮಕ್ಕೆ ಬರುವುವು. ಈ ಲಯದಕಾರ್ಯವು ಓಂಕಾರ ನಾದಬ್ರಹ್ಮದ ಕಾರ್ಯವಾಗಿರು

ವುದರಿಂದ ಮಹೇಶ್ವರನು ಮಹಾಪ್ರಳಯದಲ್ಲಿ ಈ ಓಂಕಾರನಾದವನ್ನು ಅನುಸರಿಸಿ ಮಹಾನಂದದಿಂದ ತಾಂಡವವಾಡುತ್ತಿರುವನು. ಮಹೇಶ್ವರನು ಹೀಗೆ ತಾಂಡವ ವಾಡವುದಕ್ಕೆ ಶ್ರೀದೇವಿಯು ಸಾಕ್ಷಿಯಾಗಿರುವಳು.

**೨೩೩. ಮಹಾಕಾಮೇಶಮಹಿಷ್ಯೈನಮಃ—**

ಮನ್ಮಥನಿಗೂ ನಿಯಾಮಕನಾದ ಮಹೇಶ್ವರನ ಪಟ್ಟದರಾಣಿಯಾಗಿರುವವಳು.

**೨೩೪. ತ್ರಿಪುರಸುಂದರ್ಯೈನಮಃ—**

ತ್ರಿಲೋಕಗಳನ್ನೂ ಮೋಹಗೊಳಿಸುವ ಮಹಾಮಹಿಮವಾದ ಸೌಂದರ್ಯವತಿಯಾಗಿರುವವಳು

**೨೩೫. ಚತುಷ್ಷಷ್ಟ್ಯುಪಚಾರಾಢ್ಯಾಯೈನಮಃ—**

ಈ ನಾಮದಲ್ಲಿ ತಿಳಿಸುವ ೬೪ ವಿಧ ಉಪಚಾರಗಳ ತತ್ವಗಳು ಮುಂದಿನ ನಾಮದಲ್ಲಿ ತಿಳಿಸಿರುವ ೬೪ ಕಳೆಗಳಿಂದ ಶ್ರೀದೇವಿಯು ಪರಿವೃತಳಾಗಿ ಕಳಾಸ್ವರೂಪದಲ್ಲಿ ಸೇವೆಮಾಡಿಸಿಕ್ಕೊಳ್ಳುವ ತತ್ವವಾಗಿರುವುದು. ಅಂದರೆ ೧೬ ಸ್ವರಾಕ್ಷರಗಳ ಉದಾತ್ತಾದಿ ಭೇದಗಳಿಂದಾಗುವ ೬೪ ಕಲೆಗಳು ಕಳಾನಾಥಳಾದ ಶ್ರೀದೇವಿಗೆ ಸೇವೆಸಲ್ಲಿಸುವುದೇ ಚತುಷ್ಷಷ್ಟ್ಯುಪಚಾರಗಳ ತತ್ವವಾಗಿದೆ ಇದನ್ನೇ ಸ್ಥೂಲವಾಗಿ ಪೂಜಾಕ್ರಮದಲ್ಲಿ ಉಷಃಕಾಲದ ಪ್ರಬೋಧ ಸೂಚಿಕವಾದ ಮಂಗಳಗಾನ ಸೇವೆ ಮೊದಲುಗೊಂಡು ಶಯನೋತ್ಸವವವರಿಗೆ ೬೪ ವಿಧ ಉಪಚಾರ ರೂಪವಾದ ಅರ್ಚನೆಯಿಂದಲೂ ಶ್ರೀದೇವಿಯು ಪೂಜಿಸಲ್ಪಡುವಳು. ಇದರ ವಿವರವನ್ನು ಶ್ರೀ ಶಂಕರಾಚಾರ್ಯರವರಿಂದ ರಚಿತವಾದ ಚತುಷ್ಷಷ್ಟ್ಯುಪಚಾರ ಸ್ತೋತ್ರದ ಶ್ಲೋಕಗಳನ್ನು ಪಠಿಸಿ ತಿಳಿದುಕ್ಕೊಳ್ಳಬಹುದು.

**೨೩೬. ಚತುಷ್ಷಷ್ಟಿಕಲಾಮಯ್ಯೈನಮಃ—**

"ಸಸ್ವರಷ್ಷೋಡಶಾಕಾರ ಸ್ತೂದಾತ್ತಾದಿ ವಿಭೇದತಃ । ಮದುರ್ಧ್ವ ಮದಶ್ಚಾರಾಚ್ಚತುರಾಕಾರತೋ ಭವೇತ್." ಎಂಬ ಪ್ರಮಾಣದಂತೆ ೧೬ ಸ್ವರಾಕ್ಷರಗಳ ಶಕ್ತಿಗಳೆ ಉದಾತ್ತ, ಅನುದಾತ್ತ, ಸ್ವರಿತ, ಪ್ರಚಯವೆಂಬ ನಾಲಕ್ಕು ಭೇದಗಳಿಂದ ೬೪ ಕಳೆಗಳಾಗುವುವು. ಅಂದರೆ ನಾದಬಿಂದು ಕಳೆಗಳಾದ ನಾದ ಬ್ರಹ್ಮದಲ್ಲಿ ಈ ೬೪ ವಿಭಾಗದ ಕಳೆಗಳೇ ಸೃಷ್ಟಿಯಾದಿಯಲ್ಲಿ ಪ್ರಥಮದಲ್ಲುಂಟಾಗುವುವು. ಅನಂತರ ವ್ಯಂಜನ ಯೋಗವಾಹಾಕ್ಷರಗಳೊಡನೆ ಸ್ವರಾಕ್ಷರಗಳು ಕಲೆತು ನಾದಬ್ರಹ್ಮದ ಕೋಟ್ಯಾಂತರ ಕಲಾಶಕ್ತಿಗಳಾಗುವುವು. ಈ ಕಲಾರೂಪವಾದ

ಶಕ್ತಿಗಳಿಂದಲೆ ಮುಂದೆ ಓಂಕಾರ ನಾದೋತ್ಪತ್ತಿಯಾಗುವುದು. ಆದುದರಿಂದಲೇ ಕಲೆಯು ನಾದಕ್ಕಿಂತಲೂ ಶ್ರೇಷ್ಠವಾದುದು. ಅಲ್ಲದೆ ಅಕ್ಷರಗಳಲ್ಲೂ ಸ್ವರಾಕ್ಷರಗಳು "ಸ್ವತೋಽರಂಜಯತೀತಿಸ್ವರಃ" ಎಂಬ ಅರ್ಥದಂತೆ ಸ್ವಪ್ರಕಾಶವಾದವುಗಳಾಗಿಯೂ, ಅಕ್ಷರಗಳಿಗೆಲ್ಲಾ ಪ್ರಧಾನವಾಗಿಯೂ ಇರುವುದರಿಂದ ಶ್ರೆಷ್ಠವಾದ ಕಳಾಸ್ವರೂಪವೇ ಆಗಿದೆ. ಸ್ವರಾಕ್ಷರಗಳ ಉದಾತ್ತಾದಿ ಭೇದಗಳಿಂದ ಉಂಟಾಗುವ ೬೪ ಕಲೆಗಳೇ ಮಂತ್ರಗಳಲ್ಲಿರುವ ಸ್ವರಶಕ್ತಿಗಳಾಗಿರುವುದರಿಂದ ವೇದಗೀತೆ ಎನಿಸಿಕೊಳ್ಳುವುದು. ಸಂಗೀತಶಾಸ್ತ್ರದಲ್ಲೂ ಅಕ್ಷರಗಳಲ್ಲಿರುವ ಕೊಂಬು, ದೀರ್ಘ, ಏತ್ವ ಮುಂತಾದ ಸ್ವರಾಕ್ಷರಗಳು ಆರೋಹಿ ಮುಂತಾದ ನಾಲಕ್ಕು ಭೇದಗಳಿಂದಲೇ ಗೀತಾರೂಪವಾದ ಗಾನವಾಗಿರುವುದು. ಆದುದರಿಂದ ಸೃಷ್ಟಿಯಾದಿಯಲ್ಲಿ ನಾದಬ್ರಹ್ಮದಲ್ಲಿನ ಸ್ವರಾಕ್ಷರಗಳ ಉದಾತ್ತಾದಿ ಭೇದಗಳಿಂದಾಗುವ ೬೪ ಕಲೆಗಳೇ ಚತುಷ್ಷಷ್ಟಿ ಕಲೆಗಳೆನಿಸುವುವು.

ಬರೆಯುವದು, ಓದುವದು, ಕಳ್ಳತನ, ಅಡಿಗೆ, ಅಂಗಸಾಧನೆ, ನರ್ತನ, ವಜ್ರಪರೀಕ್ಷೆ, ಕುದುರೆ ಆನೆಗಳನ್ನು ಪಳಗಿಸುವಿಕೆ ಮುಂತಾದ ೬೪ನ್ನು ೬೪ಕಲೆಗಳೆಂದು ಕೆಲವು ಗ್ರಂಥಗಳಲ್ಲಿ ಬರೆದಿರುತ್ತಾರೆ. ಬ್ರಂಹ್ಮಾಂಡಕ್ಕೆ ಜನನಿಯಾದ ಶ್ರೀದೇವಿಯು ಜಗತ್ತನ್ನು ಸೃಷ್ಟಿಸುವಾಗ ಪ್ರಥಮದಲ್ಲಿ ಅಕ್ಷರಗಳಲ್ಲೂ ಸ್ವತಃ ಪ್ರಕಾಶಗಳಾದ ೧೬ ಸ್ವರಾಕ್ಷರಗಳನ್ನು ಸೃಜಿಸಿದಳು. ಈ ಸ್ವರಗಳು ಉದಾತ್ತಾದಿ ೪ ಭೇದಗಳನ್ನು ಅನುಸರಿಸಿ ೬೪ ಕಲೆಗಳಾಗಿ ಅನಂತರ ಕೋಟ್ಯಾಂತರ ಕಲೆಗಳಾಗುವುವು. ಇದರ ವಿಚಾರವನ್ನು ೫೮೭ರಿಂದ ೫೯೦ನೇ ನಾಮದವರಿಗೆ ಬರೆದಿರುವ ನಾಮಗಳ ಅರ್ಥಗಳನ್ನು ಪಠಿಸಿದರೆ ಇದರ ಸಂಶಯವು ಪರಿಹರವಾಗುವುದು. ಆದುದರಿಂದ ಅವಿದ್ಯಾಕಾರ್ಯರೂಪವಾದ ಅಡಿಗೆ, ಕಳ್ಳತನ, ಮುಂತಾದವುಗಳು ಶ್ರೀದೇವಿಯ ೬೪ ಕಲೆಗಳಾಗಲಾರವು ಮತ್ತು ಭಾಸ್ಕರರಾಯರು ತಮ್ಮ ವ್ಯಾಖ್ಯಾನದಲ್ಲಿ ಬರೆದಿರುವಂತೆ ವಾಮಕೇಶ್ವರಾದಿ ೬೪ ತನ್ತ್ರಗಳೂ ಆಗಲಾರವು.

**೨೩೭. ಮಹಾಚತುಷ್ಷಷ್ಟಿ ಕೋಟಿಯೋಗಿನೀ ಗಣಸೇವಿತಾಯೈನಮಃ—**

ಮೇಲಿನ ನಾಮದಲ್ಲಿ ತಿಳಿಸಿರುವಂತೆ ೧೬ ಸ್ವರಾಕ್ಷರಗಳ ವಿಭಾಗವಾದ ೬೪ ಕಳೆಗಳೇ, ವ್ಯಂಜನ ಯೋಗವಾಹಗಳೊಡನೆ ಕಲೆತು ೬೪ ಕೋಟಿಶಕ್ತಿಗಳಾಗಿ ವಿಭಾಗವಾಗಿರುವವು. ಈ ವಿಭಾಗವಾಗಿರುವುವೇ ಗಣಶಕ್ತಿಯೆನಿಸಿ ಕಳಾಸ್ವರೂಪದಲ್ಲಿ ಶ್ರೀದೇವಿಗೆ ಪರಿವಾರದ ಶಕ್ತಿಗಳಾಗಿವೆ. ಇಂತಹ ಪರಿವಾರದ ಶಕ್ತಿಗಳಿಂದ ಸೇವೆ ಮಾಡಿಸಿಕ್ಕೊಳ್ಳುವವಳು. ಈ ಗಣಶಕ್ತಿಗಳಿಗೆ ಯೋಗಿನಿ ಎಂದು ಹೇಳಿರುವದರ ತತ್ವವೇನೆಂದರೆ ಯೋಗ ಎಂದರೆ ಯುಜ್ ಧಾತುವಿನ ಅರ್ಥದ ಮೇಲೆ

ಈ ಗಣಶಕ್ತಿಗಳು ಕಳಾರೂಪದಲ್ಲಿದ್ದುಕೊಂಡು ಬ್ರಹ್ಮಾಂಡಕ್ಕೆ ಸಂಯೋಗವಾಗಿ ಬ್ರಹ್ಮಾಂಡವನ್ನು ಧರಿಸುವವುಗಳಾದ್ದರಿಂದ ಯೋಗಿನೀಗಣವೆಂದು ಹೆಸರು ಬಂದಿರುವುದು. ಈ ನಾಮದ ಅರ್ಥದ ವಿಚಾರಕ್ಕೆ ೫೮೭ ೫೮೮, ೫೮೯ ನೇ ನಾಮಗಳ ವಿವರಣೆಯನ್ನು ಓದಿಕೊಳ್ಳಬೇಕು.

**೨೩೮. ಮನುವಿದ್ಯಾಯೈನಮಃ—**

ಮನು ಎಂದರೆ "ಮನ-ಜ್ಞಾನೆ" ಎಂಬ ಅರ್ಥದಂತೆ ಜ್ಞಾನಮಾರ್ಗದ ವಿದ್ಯಾಸ್ವರೂಪಿಣಿಯು. ಮನುವೆಂದರೆ ಮಹಾಮಂತ್ರಗಳೆಂದೂ ಅರ್ಥವಿದೆ. ಆದುದರಿಂದ ಮಹಾಮನ್ತ್ರಗಳ ರೂಪವಾದ ವಿದ್ಯಾಸ್ವರೂಪಿಣಿಯು.

**೨೩೯. ಚನ್ದ್ರವಿದ್ಯಾಯೈನಮಃ—**

ಚನ್ದ್ರವಿದ್ಯೆಯೆಂದರೆ ಅಮೃತವಿದ್ಯೆಯು. ಅಂದರೆ ಸಹಸ್ರಾರ ಕಮಲದ ಚಂದ್ರಮಂಡಲದಿಂದ ಸ್ರವಿಸುವ ಅಮೃತಧಾರೆಯನ್ನು ಪಾನಮಾಡುವ ಮತ್ತು ಸಹಸ್ರಾರ ಕಮಲದಲ್ಲಿರುವ ಅಮೃತರೂಪಿಣಿಯಾದ ಶ್ರೀದೇವಿಯ ಸಾಯುಜ್ಯವನ್ನು ಪಡೆಯುವ ವಿದ್ಯೆಯು ಚನ್ದ್ರವಿದ್ಯೆಯಾಗಿರುವುದು. ಈ ತತ್ವಕ್ಕೆ

"ನಭಸ್ಥಸ್ಸೂರ್ಯರೂಪೋಗ್ನಿರ್ನಾಭಿ ಮಂಡಲಮಾಶ್ರಿತಃ ।
ವಿಷಂವರ್ಷತಿಸೂರ್ಯೋಸೌ ಸ್ರವತ್ಯಮೃತಮುನ್ಮುಖಃ ॥
ಸುಷುಮ್ನಾಯೈ ಕುಂಡಿಲಿನ್ಯೈ ಸುಧಾಯೈ ಚನ್ದ್ರಮಂಡಲಾತ್ ।
ಮನೋನ್ಮನ್ಯೈ ನಮಸ್ತುಭ್ಯಂ ಮಹಾಶಕ್ತ್ಯೈ ಚಿದಾತ್ಮನೇ ॥"

ಅಂದರೆ ನಮ್ಮಲ್ಲಿ ಚನ್ದ್ರನಿಂದ ಸ್ರವಿಸಲ್ಪಡುವ ಅಮೃತವನ್ನು ನಾಭಿಯಲ್ಲಿರುವ ಸೂರ್ಯನ ದಹನಶಕ್ತಿಯು ಪಾನಮಾಡುವುದು. ಈ ಸೂರ್ಯನ ದಹನರೂಪ ಜ್ವಾಲೆಯು ಮೇಲ್ಮುಖವಾದಲ್ಲಿ ಅದು ಚನ್ದ್ರಮನ್ಡಲವನ್ನು ಸೇರಿ ಅಮೃತವರ್ಷವನ್ನು ಕರೆಯುವದು. ಸುಷುಮ್ನಾನಾಡಿಗೂ, ಕುಂಡಲಿನೀ ಶಕ್ತಿಗೂ, ಚನ್ದ್ರಮಣ್ಡಲದಿಂದುಂಟಾಗುವ ಅಮೃತಧಾರೆಗೂ, ಮನೋನ್ಮನಿಗೂ ಚಿಚ್ಛಕ್ತಿಯಾದ ಪರಬ್ರಹ್ಮಸ್ವರೂಪಿಣಿಗೂ ನಮಸ್ಕಾರಗಳು ಎಂದು ಶ್ರುತ್ಯಾಧಾರವಿರುವುದು. ಅಲ್ಲದೆ ಶ್ರೀಶಂಕರಭಗವತ್ಪಾದರವರು ಕೂಡ ಯೋಗತಾರಾವಳಿಯಲ್ಲಿ "ಸನ್ತಾಪಿತಾಚ್ಚನ್ದ್ರಮಸಸ್ಸ್ರವಂತೀಂ । ಪೀಯೂಷಧಾರಾಂ ಪಿಬತೀಹಧನ್ಯಃ" ಅಂದರೆ ದೇಹದಲ್ಲಿರುವ ಸೂರ್ಯನಜ್ವಾಲೆಯು ಮೇಲ್ಮುಖವಾಗಿ ಇದರಿಂದ ಚನ್ದ್ರಮಣ್ಡಲದಿಂದ ಕರಗಿ ಸ್ರವಿಸುವ ಅಮೃತಧಾರೆಯನ್ನು ಪಾನಮಾಡುವಂತಹ ಮಹಾತ್ಮನು ಧನ್ಯನು ಎಂದು ಹೇಳಿರುತ್ತಾರೆ. ಆದುದರಿಂದ ಚನ್ದ್ರವಿದ್ಯೆಯೆಂದರೆ ಅಮೃತವಿದ್ಯೆಯು. ಅಲ್ಲದೆ ಚನ್ದ್ರವಿದ್ಯೆಯೆಂದರೆ ಪ್ರಪಂಚದ ರಕ್ಷಣಾವಿದ್ಯೆಯಾದ ಧರ್ಮಮಾರ್ಗದ

ವಿದ್ಯೆಯು. ರವಿಯು ರಸವನ್ನು ಹೀರುತ್ತಾನೆ. ಚನ್ದ್ರನು ಅಮೃತಕಿರಣಗಳಿಂದ ಜಗತ್ತನ್ನು ಪೋಷಿಸಿ ರಕ್ಷಿಸುತ್ತಾನೆ. ಅಧರ್ಮ ಮಾರ್ಗದ ವಿದ್ಯೆಯು ಪ್ರಪಂಚದ ರಕ್ಷಣಾವಿದ್ಯೆಯಾಗಲಾರದು. ಮೋಕ್ಷಕ್ಕೆ ಅನುಸಾರವಾದ ನಡೆವಳಿಕೆಗಳುಳ್ಳ ಧರ್ಮಮಾರ್ಗದ ವಿದ್ಯೆಯೇ ರಕ್ಷಣಾವಿದ್ಯೆಯು.

ಆದುದರಿಂದ ಚನ್ದ್ರವಿದ್ಯೆಯೆಂದರೆ ಪ್ರಪಂಚದ ಧರ್ಮಮಾರ್ಗದ ಮತ್ತು ಮೋಕ್ಷಸ್ವರೂಪವಾದ ಅಮೃತವಿದ್ಯೆಗಳೆರಡೂ ಆಗಿರುವುವು. ಚನ್ದ್ರವಿದ್ಯೆಯೂ ೫೮೫ನೇ ನಾಮದಲ್ಲಿ ತಿಳಿಸಿರುವ ಶ್ರೀವಿದ್ಯೆಯೂ ಒಂದೇ ಆಗಿರುವುದು. ಈ ಎರಡು ವಿದ್ಯೆಯಲ್ಲೂ ಶ್ರೀಮಾತೆಯೇ ಪ್ರಧಾನ ದೇವತೆಯಾಗಿರುವಳು.

**೨೪೦. ಚನ್ದ್ರಮಣ್ಡಲಮಧ್ಯಗಾಯೈನಮಃ—**

ಅಮೃತರೂಪಿಣಿಯಾದ ಶ್ರೀದೇವಿಯ ಅಭಿವ್ಯಕ್ತಿಸ್ಥಾನವು ಚನ್ದ್ರನಲ್ಲಾದುದರಿಂದ ಚನ್ದ್ರನಲ್ಲಂತರ್ಗತವಾಗಿರುವವಳು. ಮೇಲಿನ ನಾಮದಲ್ಲಿ ತಿಳಿಸಿರುವ ಚನ್ದ್ರವಿದ್ಯೆಯನ್ನು ಈ ನಾಮವು ಧೃಡೀಕರಿಸುವುದು

**೨೪೧. ಚಾರುರೂಪಾಯೈನಮಃ**—ಮನೋಹರವಾದ ರೂಪವುಳ್ಳವಳು.

**೨೪೨. ಚಾರುಹಾಸಾಯೈನಮಃ**—ಮನೋಹರವಾದ ನಗುಮುಖವುಳ್ಳವಳು.

**೨೪೩. ಚಾರುಚನ್ದ್ರಕಲಾಧರಾಯೈನಮಃ—**

ಕೃತಕವಲ್ಲದ ಮನೋಹರ ಮತ್ತು ನಾಶರಹಿತವಾದ ಚನ್ದ್ರನಕಲೆಗಳನ್ನು ಧರಿಸಿರುವವಳು.

**೨೪೪. ಚರಾಚರಜಗನ್ನಾಥಾಯೈನಮಃ—**

ಸಂಚರಿಸಬಲ್ಲ ಸಕಲಪ್ರಾಣಿಗಳ, ಸಂಚರಿಸಲಾರದ ಸಕಲವಸ್ತುಗಳ ಸ್ವರೂಪವಾಗಿರುವ ಜಗತ್ತಿಗೆಲ್ಲಾ ಪ್ರಭುವಾಗಿರುವವಳು.

**೨೪೫. ಚಕ್ರರಾಜನಿಕೇತನಾಯೈನಮಃ—**

ಶಕ್ತಿರೂಪದಲ್ಲಿ ದೇಹದಲ್ಲಿ ಅನೇಕ ಚಕ್ರಗಳವೆ. ಇವುಗಳಲ್ಲಿ ಮೂಲಾಧಾರಾದಿ ಆರು ಚಕ್ರಗಳು ಪ್ರಧಾನವಾದವುಗಳು. ಈ ಪ್ರಧಾನವಾದ ಆರು ಚಕ್ರಗಳಿಗೂ ಮತ್ತು ಇತರ ಚಕ್ರಗಳಿಗೂ ರಾಜನಂತಿರುವುದೇ ಶಿರಸ್ಸಿನಲ್ಲಿರುವ ಸಹಸ್ರಾರಕಮಲವು. ಚಕ್ರರಾಜವೆನಿಸುವ ಇಂತಹ ಸಹಸ್ರಾರ ಕಮಲದಲ್ಲಿ ಅಮೃತಸ್ವರೂಪಿಣಿಯಾದ ಶ್ರೀದೇವಿಯು ವಾಸವಾಗಿರುವಳು.

೨೩೫ನೇ ನಾಮದಿಂದ ಇದುವರೆಗೆ ಚನ್ದ್ರವಿದ್ಯೆಯಿಂದ ಹೊಂದಲ್ಪಡುವ ಅಮೃತರೂಪಿಣಿಯಾದ ಶ್ರೀದೇವಿಯ ಚನ್ದ್ರಕಳಾಮಹಿಮೆಯನ್ನು ತಿಳಿಸುವುದು.

**೨೪೬. ಪಾರ್ವತ್ಯೈನಮಃ**—ಪರ್ವತರಾಜನ ಪುತ್ರಿಯು.

**೨೪೭. ಪದ್ಮನಯನಾಯೈನಮಃ**—ಕಮಲದಂತೆ ನೇತ್ರವುಳ್ಳವಳು.

**೨೪೮. ಪದ್ಮರಾಗಸಮಪ್ರಭಾಯೈನಮಃ**—

ಕೆಂಪು ರತ್ನದಂತೆ ಹೊಳೆಯುತ್ತಿರುವ ಪ್ರಕಾಶವುಳ್ಳವಳು.

**೨೪೯. ಪಂಚಪ್ರೇತಾಸನಾಸೀನಾಯೈನಮಃ**—

ಪಂಚಪ್ರೇತಗಳಲ್ಲಿ ನೆಲೆಸಿರುವವಳೆಂದು ಅರ್ಥ. ಪ್ರೇತವೆಂದರೆ "ಪ್ರಿಯತೇಸ್ಮ ಪ್ರೇತಃ" ಮರಣಹೊಂದಿದ್ದು ಎಂದು ಅಮರದ ವ್ಯಾಖ್ಯಾನದಲ್ಲಿ ಅರ್ಥವಿದೆ. ಮರಣಹೊಂದುವುದು ಪಂಚಭೂತಾತ್ಮಕನಾದ ದೇಹವೇ ಹೊರತು ಜೀವನಲ್ಲ. ಜೀವನಿಗೆ ಮರಣವಿಲ್ಲ ಪರಿಣಾಮ ಭೇದವಿಲ್ಲ. ಇದಕ್ಕೆ ಭಗವದ್ಗೀತಾ ೨ನೇ ಅಧ್ಯಾಯವನ್ನು ನೋಡುವುದು. ಆದುದರಿಂದ ಪಂಚಪ್ರೇತಗಳೆಂದರೆ ಪಂಚಭೂತಗಳೇ ಆಗಿರುತ್ತವೆ. ಪ್ರೇತಶಬ್ದಕ್ಕೆ "ಪ್ರಕೃಷ್ಟಾಂದಶಾಂ ಇತಃಪ್ರೇತಃ" ಅಂತಿಮಾವಸ್ಥೆಯನ್ನು ಪಡೆಯುವದೆಂಬ ಅರ್ಥವೂ ಇರುವುದು. ಅಂದರೆ ಪಂಚಭೂತಗಳು ಪರಿಣಾಮಭೇದವಾಗುವ ಅಂತಿಮಾವಸ್ಥೆಯನ್ನು ಪಡೆಯುವದರಿಂದ ಪಂಚಭೂತಗಳೇ ಪಂಚಪ್ರೇತಗಳು. ಜೀವನು ಪರಿಣಾಮಭೇದರಹಿತನೂ ಆಗಿರುವನು. ಆದುದರಿಂದ ಪಂಚಭೂತಗಳೇ ಪಂಚಪ್ರೇತಗಳು. ಈಶ್ವರೀ ಸ್ವರೂಪಿಣಿಯಾದ ಶ್ರೀದೇವಿಯು ಪಂಚಭೂತಗಳನ್ನು ಸೃಷ್ಟಿಸಿ "ತತ್ಸೃಷ್ಟ್ವಾ ತದೇವಾನುಪ್ರಾವಿಶತ್" ಎಂಬ ಶ್ರುತ್ಯಾಧಾರದಂತೆ ಪಂಚಭೂತಗಳಲ್ಲೂ ಕಾರ್ಯ ಪ್ರಕಾಶಕಳಾಗಿ ನೆಲೆಸಿರುವವಳಾದುದರಿಂದ ಪಂಚಪ್ರೇತಾಸನಾಸೀನಳೆನಿಸಿಕೊಂಡಿರುವಳು. ತಮಃಪ್ರಧಾನ ಪ್ರಕೃತಿಯಾದ ಪಂಚಭೂತಗಳಿಗೆ ಸ್ವತಃಪ್ರಕಾಶವಿಲ್ಲ. ಈಶ್ವರೀ ಸ್ವರೂಪಿಣಿಯಾದ ಶ್ರೀದೇವಿಯು ಪಂಚಭೂತಗಳಲ್ಲೂ ನೆಲೆಸುವುದರಿಂದ ಪಂಚಭೂತಗಳು ಸಜೀವವಾಗಿರುತ್ತವೆ. ಲಯಕಾಲದಲ್ಲಿ ಶ್ರೀದೇವಿಯು ಪಂಚಭೂತಗಳ ಸಂಪರ್ಕವನ್ನು ತ್ಯಜಿಸುವುದರಿಂದ ಪರಿಣಾಮ ಬೇದವುಂಟಾಗಿ ಪಂಚಭೂತಗಳು ಲಯವಾಗುವುದರಿಂದ ಪ್ರೇತಗಳೆನಿಸುವುವು.

ಚತುರ್ಮುಖಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವ, ಈ ಐವರೂ ಪ್ರೇತಗಳೆಂದೂ ಇಂತಹ ಪ್ರೇತಗಳನ್ನು ಪೀಠವಾಗಿ ಮಾಡಿಕೊಂಡು ಶ್ರೀದೇವಿಯು

ಕುಳಿತಿರುವಳೆಂದೂ ತಂತ್ರಗ್ರಂಥಗಳ ಆಧಾರದೊಡನೆ ಭಾಸ್ಕರಾಚಾರ್ಯರ ವ್ಯಾಖ್ಯಾನ ದಲ್ಲಿ ಬರೆದಿರುವುದು. ಸದಾಶಿವ, ಈಶ್ವರ, ರುದ್ರ, ವಿಷ್ಣು, ಚತುರ್ಮುಖರು ಪ್ರೇತಗಳೆನಿಸುವದಿಲ್ಲ. ಜೀವನಿಗೆ ಹೇಗೆ ಮರಣವು ಪರಿಣಾಮ ಭೇದವು ಇರುವುದಿಲ್ಲವೊ ಹಾಗೆಯೆ ಚೈತನ್ಯರೆನಿಸುವ ವಿಷ್ಣು, ರುದ್ರಾದಿಗಳಿಗೂ ಇರುವು ದಿಲ್ಲ. ಅಲ್ಲದೆ ಶಕ್ತಿ ಶಕ್ತರಿಗೆ ಅಂದರೆ ಶಕ್ತಿ ಮತ್ತು ಪ್ರತಿಫಲಿತ ಚೈತನ್ಯಕ್ಕೆ ಅವಿನಾಭಾವವಿದ್ದೇ ಇರುವುದರಿಂದ ಶಕ್ತಿ ಮತ್ತು ಶಕ್ತಗಳೆಂಬುದನ್ನು ಪ್ರತ್ಯೇಕ ಮಾಡುವದಕ್ಕಾಗುವುದೇ ಇಲ್ಲ. ಮಲಿನ ಪ್ರಕೃತಿ ಸ್ವರೂಪವಾದ ಪಂಚಭೂತಗಳಿಗೆ ಪರಿಣಾಮ ಭೇದವಿರುವುದರಿಂದಲೇ ಪ್ರೇತಗಳೆನಿಸುವುವು. ದೇವತಾತ್ಮಕವಾದ ಶುದ್ಧ ಸತ್ವಗುಣಕ್ಕೇ ಪರಿಣಾಮ ಭೇದವಿಲ್ಲದಿರುವಾಗ ಬ್ರಹ್ಮ, ವಿಷ್ಣು, ರುದ್ರರು ಪ್ರೇತಗಳಾಗುವುದೇ ಇಲ್ಲ. ಆದುದರಿಂದ ಪಂಚಭೂತಗಳೇ ಪಂಚಪ್ರೇತಗಳು.

ಈ ನಾಮದಲ್ಲಿ ಶ್ರೀದೇವಿಯು ಈಶ್ವರೀ ಸ್ವರೂಪದಿಂದ ಪಂಚಭೂತಗಳಲ್ಲಿ ಕಾರ್ಯಪ್ರಕಾಶಕಳಾಗಿ ನೆಲೆಸಿರುವಿಕೆಯನ್ನು ತಿಳಿಸುವುದು. ೯೪೭ ನೇ ನಾಮವಾದ ಪಂಚಪ್ರೇತಮಂಚಾಧಿಶಾಯಿನಿ ಎಂಬುದರಲ್ಲಿ ಶ್ರೀದೇವಿಯು ಪರಬ್ರಹ್ಮಸ್ವರೂಪ ದಿಂದ ಪಂಚಭೂತಗಳಲ್ಲೂ ವ್ಯಾಪಿಸಿ ನಿರ್ಲಿಪ್ತತೆಯಿಂದ ಇರುವ ತತ್ವವನ್ನು ತಿಳಿಸುವುದು.

**೨೫೦. ಪಞ್ಚಬ್ರಹ್ಮಸ್ವರೂಪಿಣ್ಯೈನಮಃ—**

ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವ, ಈ ಐವರೂ ಈಶಾನ, ತತ್ಪುರುಷ, ಅಘೋರ, ವಾಮದೇವ, ಸದ್ಯೋಜಾತ, ಈ ಐವರೂ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ, ನಾರಾಯಣ, ಈ ಐವರೂ ಪಂಚ ಬ್ರಹ್ಮರೆಂದು ಹೇಳಲ್ಪಡುವರು. ಈ ಪಂಚಬ್ರಹ್ಮರ ಸ್ವರೂಪಿಣಿಯು.

೫೮ ನೆಯ ನಾಮದ ಅರ್ಥವನ್ನು ಇದಕ್ಕೆ ಅನ್ವಯಿಸಿಕೊಳ್ಳುವುದು.

**೨೫೧. ಚಿನ್ಮಯ್ಯೈನಮಃ—**

ಚಿತ್ ಸ್ವರೂಪವಾದ ಪರಬ್ರಹ್ಮ ಸ್ವರೂಪಿಣಿಯು. ಸ್ವಯಂಪ್ರಕಾಶ ಸ್ವರೂಪಳು.

**೨೫೨. ಪರಮಾನಂದಾಯೈನಮಃ—**ಬ್ರಹ್ಮಾನಂದ ಸ್ವರೂಪಿಣಿಯು.

**೨೫೩. ವಿಜ್ಞಾನಘನರೂಪಿಣ್ಯೈನಮಃ—**

ವಿಜ್ಞಾನವೆಂದರೆ ವಿಷಯಜ್ಞಾನಕ್ಕೆ ಸಾಧನವಾದಜೀವ. ವಿಜ್ಞಾನ ಘನ ವೆಂದರೆ ಸರ್ವಜೀವರಾಶಿಗಳ ಸಮಷ್ಟಿರೂಪವಾದ ಹಿರಣ್ಯಗರ್ಭ. ಇಂತಹ ಹಿರಣ್ಯ ಗರ್ಭಸ್ವರೂಪಿಣಿಯು.

೨೫೪. ಧ್ಯಾನ ಧ್ಯಾತೃ ಧ್ಯೇಯರೂಪಾಯೈನಮಃ—

ಧ್ಯಾನಮಾಡುವಿಕೆ, ಧ್ಯಾನಮಾಡುವವನು, ಧ್ಯಾನಕ್ಕೆಗುರಿಯಾಗಿರುವ ವಸ್ತು ಈ ಮೂರುಸ್ವರೂಪವೂ ಆಗಿರುವವಳು. ಇದೇ ತ್ರಿಪುಟಿ ಸ್ವರೂಪವು.

೨೫೫. ಧರ್ಮಾಧರ್ಮವಿವರ್ಜಿತಾಯೈನಮಃ—

ಧರ್ಮ ಅಧರ್ಮಗಳೆರಡರ ಫಲದ ಭೋಕ್ತೃಳಲ್ಲದ ಸಾಕ್ಷಾತ್ ಚಿದ್ವಸ್ತು ವಾಗಿರುವವಳು.

೨೫೬. ವಿಶ್ವರೂಪಾಯೈನಮಃ—

ಜಾಗ್ರತ್ಕಾಲದಲ್ಲಿ ವ್ಯವಹಾರಮಾಡತಕ್ಕ ಜೀವನಿಗೆ ವಿಶ್ವನೆಂದು ಹೆಸರು. ಇಂತಹ ಜೀವಚೈತನ್ಯವು ಶ್ರೀದೇವಿಯೇ. (೨) ಸಕಲ ಪ್ರಪಂಚ ಸ್ವರೂಪಿಣಿಯು. (೩) ಓಂಕಾರದಲ್ಲಿ ಅಕಾರ ಸ್ವರೂಪಳು.

೨೫೭. ಜಾಗರಿಣ್ಯೈನಮಃ— ಜಾಗ್ರತ್ (ಹಗಲು) ಕಾಲವೂ ಶ್ರೀದೇವಿಯೇ.

೨೫೮. ಸ್ವಪನ್ತ್ಯೈನಮಃ—

ನಿದ್ರಾವಸ್ಥೆಯೊಳಗೆ ಇಂದ್ರಿಯ ವ್ಯಾಪಾರವಿಲ್ಲದೆ ವಿಷಯಗಳು ಮನೋ ಭಾವನಾ ರೂಪದಲ್ಲಿಯೇ ಇರುವ ಸ್ಥಿತಿಯಾದ ಸ್ವಪ್ನಸ್ವರೂಪವೂ ಶ್ರೀದೇವಿಯೇ.

೨೫೯. ತೈಜಸಾತ್ಮಿಕಾಯೈನಮಃ—

ಸ್ವಪ್ನದಲ್ಲಿ ವಿಷಯ ಪ್ರಕಾಶವಾಗಿರುವ ಜೀವಚೈತನ್ಯವೂ ಶ್ರೀದೇವಿಯೇ. (೨) ಓಂಕಾರದಲ್ಲಿನ ಉಕಾರಸ್ವರೂಪಳು.

೨೬೦. ಸುಪ್ತಾಯೈನಮಃ—

ಇಂದ್ರಿಯ ವ್ಯಾಪಾರಗಳಿಲ್ಲದ ಸುಷುಪ್ತ್ಯವಸ್ಥೆಯೂ ಶ್ರೀದೇವಿಯೇ.

೨೬೧. ಪ್ರಾಜ್ಞಾತ್ಮಿಕಾಯೈನಮಃ—

ನಿದ್ರೆಯಲ್ಲಿ ಜೀವಚೈತನ್ಯನು ವಿಷಯಪ್ರಕಾಶಕನಾಗಿ ಇಂದ್ರಿಯಗಳ ಮೂಲಕ ಹೋಗದೆ ತಟಸ್ಥ ಸ್ವಭಾವದವನಾಗಿರುವುದರಿಂದ ಪ್ರಾಜ್ಞನೆಂದು ಕರೆಯಲ್ಪಡುವನು. ಇಂತಹ ಪ್ರಾಜ್ಞನೆನಿಸುವ ಜೀವಚೈತನ್ಯನೂ ಶ್ರೀದೇವಿಯೇ. ಓಂಕಾರದಲ್ಲಿನ ಮಕಾರಸ್ವರೂಪಳು

**೨೬೨. ತುರ್ಯಾಯೈನಮಃ—**

ಜಾಗ್ರತ್ ಸ್ವಪ್ನ ಸುಷುಪ್ತಿಗಳಿಲ್ಲದೆ ಜೀವಂತನಾಗಿರುವಾಗಲೆ ಬುದ್ಧಿಯು ಧ್ಯಾನಾಭ್ಯಾಸದಿಂದ ಪರಬ್ರಹ್ಮನಲ್ಲಿ ಲೀನವಾಗಿ ಜೀವಚೈತನ್ಯವು ಪರಬ್ರಹ್ಮತ್ವವನ್ನು ಪಡೆಯುವ ಸ್ಥಿತಿಯೇ ತುರೀಯವೆನ್ನಲ್ಪಡುವುದು. ಅಂದರೆ ಜೀವನ್ಮುಕ್ತಿ ಸ್ಥಿತಿ ಅಥವಾ ನಿರ್ವಿಕಲ್ಪಸಮಾಧಿ ಸ್ಥಿತಿಯು ಶ್ರೀದೇವಿಯೇ.

**೨೬೩. ಸರ್ವಾವಸ್ಥಾವಿವರ್ಜಿತಾಯೈನಮಃ—**

ಜಾಗ್ರತ್, ಸ್ವಪ್ನ, ಸುಷುಪ್ತಿ, ತುರೀಯ ಮುಂತಾದ ಎಲ್ಲಾ ಅವಸ್ಥೆಗಳನ್ನೂ ಬಿಟ್ಟಿರುವವಳು. ಅಂದರೆ ಜಾಗ್ರತ್ಸ್ವಪ್ನ ಸುಷುಪ್ತಿ ತುರೀಯ ಮುಂತಾದ ಎಲ್ಲಾ ಅವಸ್ಥೆಗಳು ಜೀವಂತನಾಗಿದ್ದು ಪಡೆಯಲ್ಪಡುವುವು. ದೇಹಪತನವಾಗುವ ವಿದೇಹ ಮುಕ್ತಿಯಲ್ಲಿ ಪುನರ್ಜನ್ಮವಿಲ್ಲದಿರುವುದರಿಂದ ಎಲ್ಲಾ ಅವಸ್ಥೆಗಳಿಂದಲೂ ಬಿಡಲ್ಪಟ್ಟ ಸರ್ವವ್ಯಾಪಕವಾದ ಪರಬ್ರಹ್ಮಸ್ವರೂಪವೇ ಆಗುವುದು. ಈ ರೀತಿ ಉಂಟಾಗುವಿಕೆಯೇ ಸರ್ವಾವಸ್ಥಾ ವಿವರ್ಜಿತವು.

೨೫೬ನೇ ನಾಮದಿಂದ ಇದುವರಿಗೆ ಜಾಗ್ರತ್, ಸ್ವಪ್ನ, ಸುಷುಪ್ತಿ, ತುರೀಯ ಮತ್ತು ನಿರ್ಯಾಣಗಳ ಕ್ರಮಸೋಪಾನಗಳನ್ನು ತಿಳಿಸಿತು. ಜಾಗ್ರತ್ಸ್ವಪ್ನ ಸುಷುಪ್ತ್ಯವಸ್ಥೆಗಳು ನಮ್ಮಗಳಲ್ಲಿ ಸ್ವಾಭಾವಿಕವಾಗಿವೆ. ನಾವು ತುರೀಯ (ಮೋಕ್ಷ)ದ ಸ್ಥಿತಿಯನ್ನು ಪಡೆಯಲು ಪ್ರಯತ್ನಿಸಬೇಕೆಂಬ ತತ್ವಸೂಚನೆಯಾಗಿದೆ. ಮೇಲಿನ ವಿಚಾರಗಳು ಮಾಂಡೂಕ್ಯೋಪನಿಷತ್ತಿನಲ್ಲಿ ತಿಳಿಸಿರುವ ತತ್ವಗಳೇ ಆಗಿವೆ.

**೨೬೪. ಸೃಷ್ಟಿಕರ್ತ್ರ್ಯೈನಮಃ—**ಬ್ರಂಹ್ಮಾಂಡವನ್ನೆಲ್ಲಾ ಸೃಷ್ಟಿಮಾಡುವವಳು.

**೨೬೫. ಬ್ರಹ್ಮರೂಪಾಯೈನಮಃ—**

ಸೃಷ್ಟಿಮಾಡುವ ಚತುರ್ಮುಖ ಬ್ರಹ್ಮನಾಗಿರುವವಳು.

**೨೬೬. ಗೋಪ್ತ್ರ್ಯೈನಮಃ—**

ಸೃಷ್ಟಿಸಿದ ಪ್ರಪಂಚವನ್ನು ಸಂರಕ್ಷಿಸಿ ವ್ಯಾಪಾರಮಾಡಿಸುವವಳು.

**೨೬೭. ಗೋವಿನ್ದರೂಪಿಣ್ಯೈನಮಃ—**

ಪ್ರಪಂಚವನ್ನು ಕಾಪಾಡಿ ವ್ಯಾಪಾರಮಾಡಿಸುವ ವಿಷ್ಣುಸ್ವರೂಪಿಯಾಗಿರುವವಳು.

೨೬೮. ಸಂಹಾರಿಣ್ಯೈನಮಃ—ಪ್ರಪಂಚವನ್ನು ಲಯಮಾಡಿಕೊಳ್ಳುವವಳು.

೨೬೯. ರುದ್ರರೂಪಾಯೈನಮಃ—

ಪ್ರಪಂಚವನ್ನು ಲಯಮಾಡುವ ರುದ್ರರೂಪಿಣಿಯು.

೨೭೦. ತಿರೋಧಾನಕರ್ಯೈನಮಃ—

ಪ್ರಪಂಚದ ಲಯವೆಂದರೆ ನಾಶವಲ್ಲ. ಪಂಚಭೂತಗಳು ಮೊದಲು ಗೊಂಡು ಸಕಲವನ್ನೂ ಸೂಕ್ಷ್ಮಾತ್ ಸೂಕ್ಷ್ಮರೂಪವಾದ ಶಕ್ತಿರೂಪಕ್ಕೆ ಉಪ ಸಂಹಾರ ಮಾಡಿಕೊಳ್ಳುವುದಕ್ಕೆ ತಿರೋಧಾನವೆಂದು ಹೆಸರು. ಇಂತಹ ಉಪ ಸಂಹಾರದ ಸ್ವರೂಪಿಣಿಯು.

೨೭೧. ಈಶ್ವರ್ಯೈನಮಃ—

ಜಗತ್ತು ಉಪಸಂಹಾರ ಕ್ರಮದಿಂದ ಲಯವಾದಾಗ ಅಂದರೆ ಬ್ರಹ್ಮ ವಿಷ್ಣು ರುದ್ರರು ಇಲ್ಲದಿರುವಾಗ ಉಳಿಯುವುದು ಕಳಾ ಅಂದರೆ ಈಶ್ವರ ಸ್ವರೂಪಿಣಿಯಾದ ಶ್ರೀದೇವಿಯು. ಆದುದರಿಂದ ಇಲ್ಲಿ ಈಶ್ವರೀ ಎಂದಿದೆ.

೨೭೨. ಸದಾಶಿವಾಯೈನಮಃ—

ಈಶ್ವರತ್ವ (ಕಳಾ)ವೂ ಉಪಸಂಹಾರವಾಗಿ ಪರಬ್ರಹ್ಮಮಾತ್ರ ಉಳಿಯು ವಿಕೆಯೇ ಮಹಾಪ್ರಳಯವೆನಿಸುವುದು. ಆಗ ಶ್ರೀದೇವಿಯು ಸದಾಶಿವ ಸ್ವರೂಪಿಣಿ ಎನಿಸಿಕೊಳ್ಳುತ್ತಾಳೆ.

೨೫೬ನೇ ನಾಮದಿಂದ ಇದುವರೆಗೆ ಮನುಷ್ಯನ ಅವಸ್ಥಾತ್ರಯ ಮತ್ತು ಮೋಕ್ಷದ ವಿಚಾರವೂ ಬ್ರಹ್ಮಾಂಡದ ಸೃಷ್ಟಿಸ್ಥಿತಿ ಲಯಗಳ ವಿಚಾರಗಳೂ ಕ್ರಮ ವಾಗಿ ಬಂದಿವೆ.

೨೭೩. ಅನುಗ್ರಹದಾಯೈನಮಃ—ಅನುಗ್ರಹಿಸುವವಳು,

೨೭೪. ಪಞ್ಚಕೃತ್ಯ ಪರಾಯಣಾಯೈನಮಃ—

ಪ್ರಪಂಚವನ್ನು ಸೃಷ್ಟಿಸುವುದು, ವ್ಯಾಪಾರಮಾಡಿಸುವುದು, ಲಯಮಾಡು ವುದು, ಉಪಸಂಹಾರಮಾಡುವುದು, ಅನುಗ್ರಹಿಸುವುದು ಎಂಬ ಐದುಕಾರ್ಯಗಳಲ್ಲಿ ನಿರತಳಾದವಳು,

**೨೭೫. ಭಾನುಮಣ್ಡಲಮಧ್ಯಸ್ಥಾಯೈನಮಃ—**

ಸೂರ್ಯಾಂತರ್ಗತವಾಗಿರುವವಳು. ಇದಕ್ಕೆ "ಯ ಏಷೋಂತರಾದಿತ್ಯೆ ಹಿರಣ್ಮಯಃ ಪುರುಷಃ" ಎಂಬ ಶ್ರುತ್ಯಾಧಾರವಿದೆ.

**೨೭೬. ಭೈರವ್ಯೈನಮಃ—**

ಪ್ರಪಂಚ ಸಂಹಾರಕಾಲದಲ್ಲಿ ಈಶ್ವರನು ಭೈರವಾವತಾರವನ್ನೆತ್ತುವನು. ಇವನ ರಾಣಿಯಾದ್ದರಿಂದ ಭೈರವಿಯು.

**೨೭೭. ಭಗಮಾಲಿನ್ಯೈನಮಃ—**

ಪ್ರಪಂಚಸೃಷ್ಟಿ ಎಂಬ ಗರ್ಭವನ್ನು ಧರಿಸುವವಳು. ಗರ್ಭಧಾರಣಾ ಶಕ್ತಿಯನ್ನು ಅನುಗ್ರಹಿಸಿರುವವಳು. ಭಗವೆಂದರೆ ನಕ್ಷತ್ರ, ನಕ್ಷತ್ರಗಳನ್ನು ಮಾಲಿಕೆಯಂತೆ ಧರಿಸಿರುವವಳು. ಷಡ್ಗುಣೈಶ್ವರ್ಯ ಸಂಪನ್ನಳು.

**೨೭೮. ಪದ್ಮಾಸನಾಯೈನಮಃ—**

ಸಹಸ್ರಾರ (ಪದ್ಮ) ಕಮಲದಲ್ಲಿ ಇರುವವಳು, (೨) ಪದ್ಮಾಸನದಲ್ಲಿ ಕುಳಿತಿರುವವಳು.

**೨೭೯. ಭಗವತ್ಯೈನಮಃ—**

ಪ್ರಪಂಚಕ್ಕೆ ನಾಥಳು. ಅಭ್ಯುದಯದಾತಳು. ಉತ್ಪತ್ತಿಯನ್ನೂ, ಪ್ರಳಯವನ್ನೂ, ಭೂತಗಳ ಗತಿಗಳನ್ನೂ, ಅವಿದ್ಯೆಯನ್ನೂ, ವಿದ್ಯೆಯನ್ನೂ ತಿಳಿದವಳಾದ್ದರಿಂದ ಭಗವತಿಯು.

**೨೮೦. ಪದ್ಮನಾಭಸಹೋದರ್ಯೈನಮಃ—**

ಸೃಷ್ಟಿಯಾದಿಯಲ್ಲಿ ಪರಬಹ್ಮನಿಂದ ಉದಯಿಸಿದ ಚಿಚ್ಛಕ್ತಿಯು ಮಹಾಲಕ್ಷ್ಮೀ, ಮಹಾಕಾಳೀ, ಮಹಾಸರಸ್ವತೀ ಸ್ವರೂಪವಾದುದು. ಬ್ರಹ್ಮಾಂಡದ ಸೃಷ್ಟಿಸ್ಥಿತಿ ಮಾಡಲು ತ್ರಿಮೂರ್ತಿಗಳನ್ನೂ ತ್ರಿಮೂರ್ತಿಗಳ ಪತ್ನಿಗಳನ್ನೂ, ಮಹಾಲಕ್ಷ್ಮಿ, ಮಹಾಕಾಳಿ, ಮಹಾಸರಸ್ವತಿಯರು ಸೃಷ್ಟಿಸಿದರು. ಆದಿಯಾದ ಮಹಾಲಕ್ಷ್ಮಿಯು ಲಕ್ಷ್ಮಿಯನ್ನೂ, ಚತುರ್ಮುಖ ಬ್ರಹ್ಮನನ್ನೂ ಜೊಳಿಯಾಗಿ ಸೃಷ್ಟಿಸಿದಳು. ಮಹಾಕಾಳಿಯು ರುದ್ರನನ್ನೂ ಸರಸ್ವತಿಯನ್ನೂ ಜೊಳಿಯಾಗಿ ಸೃಷ್ಟಿಸಿದಳು. ಮಹಾಸರಸ್ವತಿಯು ಗೌರಿಯನ್ನೂ ವಿಷ್ಣುವನ್ನೂ ಜೊಳಿಯಾಗಿ ಸೃಷ್ಟಿಸಿದಳು. ಪ್ರಪಂಚದ ಸೃಷ್ಟಿಸ್ಥಿತಿಗಳ ಕಾರ್ಯಗಳಿಗೋಸ್ಕರ ಚತುರ್ಮುಖನು

ಸರಸ್ವತಿಯನ್ನೂ, ವಿಷ್ಣುವು ಲಕ್ಷ್ಮಿಯನ್ನೂ ರುದ್ರನು ಗೌರಿಯನ್ನೂ ಪಾಣಿಗ್ರಹಣ ಮಾಡಿಕೊಂಡರು. ಆದುದರಿಂದ ಗೌರಿಯು ವಿಷ್ಣುವಿನ ಸಹೋದರಿಯು ಈ ವಿಚಾರವು ಮಾರ್ಕಂಡೇಯ ಪುರಾಣಾಂತರ್ಗತವಾದ ದೇವೀ ಮಹಾತ್ಮ್ಯೆಯ ಪ್ರಾಧಾನಿಕರಹಸ್ಯದಲ್ಲಿದೆ. ಚಿಚ್ಛಕ್ತಿಯಿಂದಾಗುವ ಮೇಲಿನ ತ್ರಿಮೂರ್ತಿಗಳ ಮತ್ತು ತ್ರಿಮೂರ್ತಿಗಳ ಪತ್ನಿಯರ ಸೃಷ್ಟಿಕ್ರಮವು ವೇದಾಂತದ ತತ್ವಕ್ಕೂ ಅನ್ವಯವಾಗುವುದು, ಅಲ್ಲದೆ ಶ್ರೀ ಕೃಷ್ಣನ ಸಹೋದರಿಯಾಗಿ ದುರ್ಗಾವತಾರವಾಡಿರುವುದರಿಂದ ಪದ್ಮನಾಭ ಸಹೋದರಿಯಾಗಿರುವವಳು.

**೨೮೧. ಉನ್ಮೇಷ ನಿಮಿಷೋತ್ಪನ್ನವಿಪನ್ನಭುವನಾವಳ್ಯೈನಮಃ—**

ಶ್ರೀದೇವಿಯು ಒಂದಾವರ್ತಿ ರೆಪ್ಪೆಹಾಕುವದರೊಳಗೆ ಅಂದರೆ ಒಂದಾವರ್ತಿ ಕಣ್ತೆರದು ಮುಚ್ಚುವಕಾಲದೊಳಗೆ ಅನೇಕ ಪ್ರಪಂಚಗಳು ಸೃಷ್ಟಿಯಾಗಿ ಲಯವಾಗುತ್ತಿರುವುವು.

**೨೮೨. ಸಹಸ್ರಶೀರ್ಷವದನಾಯೈನಮಃ**—ಅನೇಕಾನೇಕ ಮುಖವುಳ್ಳವಳು.

**೨೮೩. ಸಹಸ್ರಾಕ್ಷ್ಯೈನಮಃ**—ಅನೇಕಾನೇಕ ನೇತ್ರಗಳುಳ್ಳವಳು.

**೨೮೪. ಸಹಸ್ರಪದೇನಮಃ**—ಅನೇಕಾನೇಕ ಪಾದಗಳುಳ್ಳವಳು.

೨೮೨, ೨೮೩, ೨೮೪ ನೇ ನಾಮಗಳು ಶ್ರೀದೇವಿಯೇ ಬ್ರಹ್ಮಾಂಡದಲ್ಲಿರುವ ಸಕಲಪ್ರಾಣಿಗಳ ಸ್ವರೂಪವಾಗಿ ವಿರಾಟ್‌ಸ್ವರೂಪಿಣಿಯಾಗಿರುವವಳೆಂದು ಪ್ರತಿಪಾದಿಸುತ್ತವೆ. ಇದಕ್ಕೆ **"ಸಹಸ್ರಶೀರುಷಾಪುರುಷಸ್ಸಹಸ್ರಾಕ್ಷ ಸಹಸ್ರಪಾತ್"** ಎಂಬ ಶ್ರುತ್ಯಾಧಾರವೂ ಇದೆ.

**೨೮೫. ಆಬ್ರಹ್ಮಕೀಟಜನನ್ಯೈನಮಃ—**

ಚತುರ್ಮುಖ ಬ್ರಹ್ಮನೇ ಮೊದಲುಗೊಂಡು ಸಣ್ಣಹುಳುಗಳೇ ಅಂತ್ಯವಾಗುಳ್ಳ ಸಕಲ ಪ್ರಾಣಿಗಳಿಗೂ ತಾಯಿಯಾಗಿರುವವಳು.

**೨೮೬. ವರ್ಣಾಶ್ರಮವಿಧಾಯಿನ್ಯೈನಮಃ—**

ನಾಲಕ್ಕು ವೇದಗಳ ತತ್ವಗಳಿಗನುಸಾರವಾಗಿ ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ವರ್ಣವಿಭಾಗವನ್ನೂ, ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸನ್ಯಾಸಗಳೆಂಬ ಆಶ್ರಮಗಳನ್ನೂ ವಿಧಾಯಕಮಾಡಿರುವವಳು. (ಈ ನಾಲಕ್ಕು ವರ್ಣ ಮತ್ತು ಆಶ್ರಮಗಳು ನಾಲಕ್ಕು ವೇದಗಳ ತತ್ವಗಳಿಗನುಸಾರವಾಗಿ ಇರುತ್ತವೆ.)

**೨೮೭. ನಿಜಾಜ್ಞಾರೂಪ ನಿಗಮಾಯೈನಮಃ—**

ನಾಲ್ಕುವೇದಗಳೂ ಶ್ರೀದೇವಿಯ ಆಜ್ಞಾರೂಪಗಳಾಗಿರುತ್ತವೆ.

**೨೮೮. ಪುಣ್ಯಾಪುಣ್ಯಫಲಪ್ರದಾಯೈನಮಃ—**

ಪ್ರಾಣಿಗಳ ಪುಣ್ಯಪಾಪ ಕರ್ಮಗಳಿಗೆ ಅನುಸಾರವಾದ ಫಲಗಳನ್ನು ಕೊಡತಕ್ಕವಳು.

**೨೮೯. ಶ್ರುತಿಸೀಮನ್ತ ಸಿನ್ದೂರೀಕೃತ ಪಾದಾಬ್ಜ ಧೂಳಿಕಾಯೈನಮಃ—**

ಶ್ರುತಿಸೀಮನ್ತನಿಯರೆಂದರೆ ವೇದಾಭಿಮಾನಿ ದೇವತೆಯರು ಶ್ರೀದೇವಿಯ ಪಾದದ ಧೂಳಿಯನ್ನು ಸೀಮಂತ ಪ್ರದೇಶದಲ್ಲಿ ಅಂದರೆ ಬೈತಲೆಯಲ್ಲಿ ಸಿಂದೂರ (ಚಂದ್ರದ) ತಿಲಕದಂತೆ ಶೃಂಗಾರಮಾಡಿಕ್ಕೊಳ್ಳುತ್ತಾರೆ. ಶ್ರೀದೇವಿಯ ಪಾದದ ಧೂಳು ಅಂತಹ ಮಹಿಮಾತಿಶಯವುಳ್ಳದ್ದೆಂಬ ತತ್ವವಾಗಿದೆ.

**೨೯೦. ಸಕಲಾಗಮಸಂದೋಹ ಶುಕ್ತಿ ಸಂಪುಟಮೌಕ್ತಿಕಾಯೈನಮಃ—**

ಮುತ್ತು ಚಿಪ್ಪಿನ ಒಳಗೆ ಹೇಗೆ ಸಾರವಾಗಿಯೂ ಪ್ರಧಾನವಾಗಿಯೂ ಇರುವುದೊ ಹಾಗೆ ಸಕಲ ವೇದಗಳ ಸಮುದಾಯವೆಂಬ ಚಿಪ್ಪಿನ ಒಳಗಡೆ ಪರಮಾರ್ಥಸಾರ ರೂಪಿಣಿಯಾಗಿ ಶ್ರೀದೇವಿಯು ಇರುತ್ತಾಳೆಂಬ ಅರ್ಥ. ಅಂದರೆ ವೇದಸಾರ ಸ್ವರೂಪಿಣಿಯು.

**೨೯೧. ಪುರುಷಾರ್ಥಪ್ರದಾಯೈನಮಃ—**

ಪುರುಷ ಅಂದರೆ ಜೀವ, ಅರ್ಥ ಅಂದರೆ ಸಂಪಾದನೆ, ಜೀವನ ಸಂಪಾದನೆಯೇ ಮೋಕ್ಷ. ಅಂದರೆ ಮೇಲಿನ ನಾಮದಲ್ಲಿ ತಿಳಿಸಿರುವ ವೇದಗಳ ಸಾರಭೂತವಾಗಿರುವ ಶ್ರೀದೇವಿಯ ಸಾಯುಜ್ಯ ಪದವಿಯನ್ನು ಪಡೆಯುವದೇ ಮೋಕ್ಷವೆನಿಸುವುದು. ಇಂತಹ ಮೋಕ್ಷವನ್ನು ಕೊಡುವವಳು. ಮೋಕ್ಷಕ್ಕೆ ಸಾಧನವಾದುದು ಧರ್ಮ, ಅರ್ಥ, ಕಾಮ, ಆದ್ದರಿಂದ ಧರ್ಮ, ಅರ್ಥ, ಕಾಮ ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳನ್ನೂ ಅನುಗ್ರಹಿಸುವವಳು.

**೨೯೨. ಪೂರ್ಣಾಯೈನಮಃ—**

ದೇಶ, ಕಾಲ, ವರ್ತಮಾನಗಳಿಗೆ ಒಳಗಾಗದೆ ಎಲ್ಲೆಲ್ಲಿಯೂ ಯಾವಾಗಲೂ ಪೂರ್ಣವಾಗಿ ಇರುವವಳು.

**೨೯೩. ಭೋಗಿನ್ಯೈನಮಃ—**

ಭೋಕ್ತೃಸ್ವರೂಪಳು. ತನಗೋಸ್ಕರ ಪ್ರಪಂಚವಿರುವುದೆಂದು ತಿಳಿಯ ತಕ್ಕವಳು.

**೨೯೪. ಭುವನೇಶ್ವರ್ಯೈನಮಃ**—ಬ್ರಹ್ಮಾಂಡವನ್ನು ಆಳುವವಳು.

**೨೯೫. ಅಮ್ಬಿಕಾಯೈನಮಃ**—ಜಗತ್ತಿಗೆ ಜನನಿಯು, ಶ್ರೀಸರಸ್ವತೀದೇವಿಯು.

**೨೯೬. ಅನಾದಿನಿಧನಾಯೈನಮಃ—**

ಆದ್ಯಂತಗಳೆರಡೂ ಇಲ್ಲದವಳು. ಅಚ್ಯುತ ರೂಪಿಣಿಯು.

**೨೯೭. ಹರಿಬ್ರಹ್ಮೇನ್ದ್ರಸೇವಿತಾಯೈನಮಃ—**

ವಿಷ್ಣುವಿನಿಂದಲೂ, ಬ್ರಹ್ಮನಿಂದಲೂ, ಇಂದ್ರನಿಂದಲೂ ಸೇವಿಸಲ್ಪಡುವವಳು.

**೨೯೮. ನಾರಾಯಣ್ಯೈನಮಃ—**

ಜ್ಞಾನಮಾರ್ಗ ಪ್ರದಾತಳು. ವೈಷ್ಣವೀ ಶಕ್ತಿಯು. ಸಕಲ ಜೀವರುಗಳಿಗೆ ಜೀವನವಾಗಿರುವ ಸತ್ಯಜ್ಞಾನಾನಂದ ಸ್ವರೂಪಳು. ನಾರ-ಜಲ, ಅಯನ-ಸ್ಥಾನ= ನಾರಾಯಣ, ಅಂದರೆ ಮಹಾಜಲ ಮಧ್ಯದಲ್ಲಿ ವಟಪತ್ರಶಾಯಿಯಾದ ವಿಷ್ಣು. ಆತನ ಪತ್ನಿ ಅಥವಾ ತಂಗಿ.

**೨೯೯. ನಾದರೂಪಾಯೈನಮಃ**—ಶಬ್ದಬ್ರಹ್ಮಸ್ವರೂಪಳು. ಓಂಕಾರರೂಪಳು.

**೩೦೦. ನಾಮರೂಪವಿವರ್ಜಿತಾಯೈನಮಃ—**

ನಾಮ ಮತ್ತು ರೂಪಗಳಿಲ್ಲದವಳು. ಪರಬ್ರಹ್ಮ ಸ್ವರೂಪಿಣಿಯು.

"ಅಸ್ತಿಭಾತಿಪ್ರಿಯಂ ರೂಪಂನಾಮಚೇತ್ಯಂಶ ಪಂಚಕಂ |
ಆದ್ಯತ್ರಯಂ ಬ್ರಹ್ಮರೂಪಂ ಜಗದ್ರೂಪಂ ತತೋದ್ವಯಂ ||"

ಎಂಬ ಶ್ರುತ್ಯಾಧಾರವನ್ನು ಅನುಸರಿಸಿ ಮಾಯಾಕಲ್ಪಿತಗಳಾದ ನಾಮರೂಪ ರಹಿತಳು, ಅರ್ಥಾತ್ ಸಚ್ಚಿದಾನಂದ ಸ್ವರೂಪಿಣಿಯು.

**೩೦೧. ಹ್ರೀಂಕಾರ್ಯೈನಮಃ—**

ಹ್ರೀಂ ಎಂಬ ಏಕಾಕ್ಷರ ಸ್ವರೂಪಿಣಿಯು. ಸಚ್ಚಿದಾನಂದ ಸ್ವರೂಪಳು.

**೩೦೨. ಹ್ರೀಂಮತ್ಯೈನಮಃ—**

ಹ್ರೀಂ ಎಂಬ ತತ್ವವನ್ನು ಹೊಂದಿರುವವಳು. ಹ್ರೀಂಕಾರದ ವಿಚಾರವು ಮಂತ್ರದರಹಸ್ಯದಲ್ಲಿ ವಿವರವಾಗಿ ಬರೆದಿರುವುದನ್ನು ಪರಿಸಿತಿಳಿದುಕ್ಕೊಳ್ಳಬಹುದು.

**೩೦೩. ಹೃದ್ಯಾಯೈನಮಃ—**

ಹೃದಯುವೆಂದರೆ ಹೃದಯಕೋಶವಲ್ಲ. ಪಂಚಕೋಶ ಸ್ವರೂಪವಾದ ದೇಹ ದಲ್ಲಿ ಎಲ್ಲಾದುದಕ್ಕಿಂತಲೂ ಒಳಗಡೆ ಇರುವ ಸಹಸ್ರಾರ ಕಮಲದಲ್ಲಿರುವವಳು. ಆಹ್ಲಾದಸ್ವರೂಪಿಣಿ.

**೩೦೪. ಹೇಯೋಪಾದೇಯುವರ್ಜಿತಾಯೈನಮಃ—**

ಸುಖದುಃಖಗಳಿಲ್ಲದೆ ನಿರ್ಲಿಪ್ತಳಾಗಿರುವವಳು. ಪ್ರವೃತ್ತಿ ನಿವೃತ್ತಿಗಳಿಲ್ಲದೆ ಸಾಕ್ಷಿಮಾತ್ರವಾಗಿರುವವಳು. ಬಿಡುವುದು ತೆಗೆದುಕ್ಕೊಳ್ಳುವುದು ಇಲ್ಲದಿರುವವಳು.

**೩೦೫. ರಾಜರಾಜಾರ್ಚಿತಾಯೈನಮಃ—**

ರಾಜಾಧಿರಾಜರುಗಳಿಂದ ಪೂಜಿಸಲ್ಪಡುವವಳು. ಮನುಚಕ್ರವರ್ತಿ ಮತ್ತು ಕುಬೇರನಿಗೆ ರಾಜರಾಜ ಎಂದು ಹೆಸರಾದ್ದರಿಂದ ಇವರಿಂದಲೂ ಅರ್ಚಿಸಲ್ಪಡು ವವಳು. ಈಶ್ವರನಿಂದ ಪೂಜಿಸಲ್ಪಡುವವಳು- ಹದಿನಾಲ್ಕು ಮಂದಿ ಮನ್ವಂತ ರಾಧಿಪರೂ ಶ್ರೀದೇವಿಯ ಉಪಾಸಕರೆಂದು ಮಾರ್ಕಂಡೇಯ ಪುರಾಣದಲ್ಲಿ ಹೇಳಿರುವುದು.

**೩೦೬. ರಾಜ್ಞ್ಯೈನಮಃ**—ಮಹಾರಾಣಿಯು.

**೩೦೭. ರಮ್ಯಾಯೈನಮಃ**—ರಮಣೀಯವಾಗಿರುವವಳು.

**೩೦೮. ರಾಜೀವಲೋಚನಾಯೈನಮಃ—**

ಹುಲ್ಲೆಯ ಕಣ್ಣುಗಳಂತೆ ಕಣ್ಣುಗಳುಳ್ಳವಳು. ಕಮಲದಂತೆ ನೇತ್ರ ವುಳ್ಳವಳು.

**೩೦೯. ರಂಜನ್ಯೈನಮಃ**—ರಮಣೀಯತ್ವವನ್ನುಂಟುಮಾಡುವವಳು.

**೩೧೦. ರಮಣ್ಯೈನಮಃ—**

ಸಂತೋಷಭರಿತಳಾಗಿರುವವಳು. ಬಹುಸುಲಲಿತದಿಂದಿರುವವಳು.

**೩೧೧. ರಸ್ಯಾಯೈನಮಃ—**

ಬಹುಸ್ವಾರಸ್ಯವಾದ ಅಭಿರುಚಿಯುಳ್ಳವಳು. ಮಧುರಸ್ವರೂಪಳು.

**೩೧೨. ರಣತ್ಕಿಂಕಿಣಿ ಮೇಖಲಾಯೈನಮಃ—**

ಶಬ್ದಮಾಡುವ ಕಿರುಘಂಟೆಗಳಿಂದ ಕೂಡಿದ ಒಡ್ಯಾಣ (ಡಾಬು) ವುಳ್ಳವಳು.

**೩೧೩. ರಮಾಯೈನಮಃ—**

ಆನಂದಸ್ವರೂಪಳು. ಶ್ರೀಲಕ್ಷ್ಮೀಸ್ವರೂಪಳು. ವಿನೋದದಿಂದ ಲೀಲೆ ಯಾಡುವವಳು.

**೩೧೪. ರಾಕೇನ್ದುವದನಾಯೈನಮಃ—**

ಪೂರ್ಣಚನ್ದ್ರನಂತೆ ಮುಖವುಳ್ಳವಳು. ರಾತ್ರಿಕಾಲದಲ್ಲಿ ಪೂರ್ಣಿಮಾ ತಿಥಿಯು ಇರುವ ದಿವಸಕ್ಕೆ ರಾಕಾ ಎಂದು ಹೆಸರು.

**೩೧೫. ರತಿರೂಪಾಯೈನಮಃ—**

ಮನ್ಮಥನ ಹೆಂಡತಿಯಾದ ರತಿರೂಪಿಣಿಯು. ವಿಹಾರಸ್ವರೂಪಳು. ಕಾಮಕಳಾರೂಪಳು.

**೩೧೬. ರತಿಪ್ರಿಯಾಯೈನಮಃ—**

ವಿಹಾರ ಪ್ರಿಯಳು. ಮನ್ಮಥನ ಹೆಂಡತಿ ರತಿಗೆ ಪ್ರಿಯಳಾದವಳು. ಕಾಮಕಳಾಪ್ರಿಯಳು.

**೩೧೭. ರಕ್ಷಾಕರ್ಯೈನಮಃ—**ರಕ್ಷಿಸುವವಳು.

**೩೧೮. ರಾಕ್ಷಸಘ್ನ್ಯೈನಮಃ—**

ರಾಕ್ಷಸರನ್ನು ನಾಶಮಾಡುವವಳು. ಅಜ್ಞಾನವನ್ನು ಹೋಗಲಾಡಿಸುವವಳು.

**೩೧೯. ರಾಮಾಯೈನಮಃ—**

ಶ್ರೀರಾಮಚನ್ದ್ರಸ್ವರೂಪಿಣಿಯು. ಯೋಗಿಗಳು ತಮ್ಮಲ್ಲಿ ತಾವೇ ಯಾವ ವಸ್ತುವನ್ನು ಧ್ಯಾನಿಸಿ ಆನಂದಪಡುವರೋ ಅಂತಹ ಪರಬ್ರಹ್ಮಸ್ವರೂಪಿಣಿಯು.

**೩೨೦. ರಮಣಲಮ್ಪಟಾಯೈನಮಃ—**

ಸ್ತ್ರೀಯರಿಗೆ ಪತಿವ್ರತಾ ಧರ್ಮವನ್ನು ಅನುಗ್ರಹಿಸುವವಳು. ಪಾತಿವ್ರತ್ಯ ಧರ್ಮಸ್ವರೂಪಿಣಿಯು. ಈಶ್ವರನೊಡನೆ ವಿನೋದದಿಂದ ಯಾವಾಗಲೂ ಇರುವವಳು. ಆಟಪಾಟಗಳಲ್ಲಿ ಅತ್ಯಾಸಕ್ತಿಯುಳ್ಳವಳು.

**೩೨೧. ಕಾಮ್ಯಾಯೈನಮಃ—**

ಅಪೇಕ್ಷಣೀಯವಾದ ವಸ್ತುವಾಗಿರುವವಳು. (೨) ಮೋಕ್ಷಕಾಮಿಗಳಿಂದ ಅಪೇಕ್ಷಿಸಲ್ಪಡುವವಳು.

**೩೨೨. ಕಾಮಕಲಾರೂಪಾಯೈನಮಃ—**

ಕಾಮವಿದ್ಯಾಸ್ವರೂಪಿಣಿಯು. ಸಂಕಲ್ಪಸ್ವರೂಪದವಳು.

**೩೨೩. ಕದಮ್ಬಕುಸುಮಪ್ರಿಯಾಯೈನಮಃ—**

ಕದಮ್ಬಪುಷ್ಪಪ್ರಿಯಳು. ಕದಮ್ಬ ಎಂಬುದಕ್ಕೆ ಹಿಂದೆಯೇ ಅರ್ಥ ತಿಳಿಸಿದೆ. ೩೩೦ನೇ ನಾಮದ ಅರ್ಥವನ್ನು ಅನ್ವಯಿಸಿಕೊಳ್ಳುವದು.

**೩೨೪. ಕಲ್ಯಾಣ್ಯೈನಮಃ—**

ಮಂಗಳಸ್ವರೂಪಳು. ಪ್ರಿಯವಚನವನ್ನು ನುಡಿಯುವವಳು.

**೩೨೫. ಜಗತೀಕನ್ದಾಯೈನಮಃ—**

ಜಗತ್ತೆಂಬ ಬಳ್ಳಿಗೆ ಬುಡದ ಗೆಡ್ಡೆಯಂತಿರುವವಳು. ಅಂದರೆ ಬಳ್ಳಿಗೆ ಬುಡದಗೆಡ್ಡೆಯು ಹೇಗೆ ಆಧಾರವಾಗಿರುವುದೋ ಅದರಂತೆ ಜಗತ್ತಿನ ಸ್ವರೂಪವಾದ ಬಳ್ಳಿಗೆ ಆಧಾರವಾಗಿ ಭೂಮಂಡಲವು ಕನ್ದವೆಂದರೆ ಗೆಡ್ಡೆಯಂತಿರುವುದು. ಇದರಂತೆ ಪಿಂಡಾಂಡವಾದ ನಮ್ಮ ದೇಹವೆಂಬ ಬಳ್ಳಿಗೆ ಆಧಾರವಾಗಿ ಬುಡದ ಗೆಡ್ಡೆಯಂತೆ ನಾಭಿಗೂ ಲಿಂಗಪ್ರದೇಶಕ್ಕೂ ಮಧ್ಯದಲ್ಲಿ ಕಂದವಿರುವುದು. ಕಂದದಲ್ಲಿ ನಮ್ಮ ದೇಹದಲ್ಲಿರುವ ಎಪ್ಪತ್ತೆರಡು ಸಾವಿರ ನಾಡಿಗಳೂ ಸಮುತ್ಪನ್ನವಾಗಿರುವುವು. ಈ ತತ್ವಸಮರ್ಥನೆಗೆ

"ಊರ್ಧ್ವಂಮೇಢ್ರಾದಧೋನಾಭೇಃಕನ್ದಯೋಸ್ತಿಖಗಾಣ್ಡವತ್ ||
ತತ್ರನಾಡ್ಯಸ್ಸಮುತ್ಪನ್ನಾಸ್ಸಹಸ್ರಾಣಿದ್ವಿಸಪ್ತತಿ ||"

ಎಂಬ ಶ್ರುತ್ಯಾಧಾರವೂ ಇರುವುದು. ಈ ಕಂದದ ಕೆಳಭಾಗದಲ್ಲಿ ಶ್ರೀಕುಂಡಲಿನೀ ಇರುತ್ತಾಳೆ. ಇಂತಹ ಕನ್ದಸ್ವರೂಪಿಣಿಯು ಶ್ರೀದೇವಿಯೇ ಆಗಿರುತ್ತಾಳೆ.

**೩೨೬. ಕರುಣಾರಸಸಾಗರಾಯೈನಮಃ—**

ಕರುಣಾರಸದ ಸಮುದ್ರಸ್ವರೂಪವೇ ಆಗಿರುವವಳು.

**೩೨೭. ಕಲಾವತ್ಯೈನಮಃ—**

ಸಕಲ ವಿದ್ಯಾಸ್ವರೂಪಿಣಿಯು. ಸಕಲ ಚಮತ್ಕಾರ ವಸ್ತುವಿನಲ್ಲಿರುವ ರಮ್ಯಸ್ವರೂಪಳು.

**೩೨೮. ಕಲಾಲಾಪಾಯೈನಮಃ—**

ವಿದ್ಯಾನಂದ ಸ್ವರೂಪಿಣಿಯು. ನಾದಕ್ಕೂ ಮೂಲವಾದ ಕಳೆಯಿಂದಲೇ ಆಲಾಪನೆ ರೂಪವಾದ ಗಾನಮಾಡುವವಳು. ವೇದಗೀತೆ ಸ್ವರೂಪಿಣಿಯು. ದೇವತಾ ಸಂಗೀತಸ್ವರೂಪಳು. ಇಂಪಾದ ಕಂಠಧ್ವನಿಯುಳ್ಳವಳು

**೩೨೯. ಕಾನ್ತಾಯೈನಮಃ—**

ಸೌಂದರ್ಯವತಿಯು, ಮತ್ತು ಮನೋಹರವಾದ ರೂಪವುಳ್ಳವಳು.

**೩೩೦. ಕಾದಮ್ಬರೀಪ್ರಿಯಾಯೈನಮಃ—**

ಕದಮ್ಬವೆಂದರೆ ದೇವಲೋಕದಲ್ಲಿ ದೇವಯೋಗ್ಯವಾದ ನಮ್ಮ ಈಚಲುಗಿಡ ದಂತಿರುವ ಒಂದು ವಿಧವಾದ ನೀಪವೃಕ್ಷವೆಂದು ಹಿಂದೆ ೨೧ನೇ ನಾಮದಲ್ಲೇ ತಿಳಿಸಿದೆ. ಇದರಲ್ಲಿ ಉತ್ಪನ್ನವಾಗುವ ರಸವು ಅಮೃತರೂಪವಾಗಿ ಆನಂದವನ್ನು ಕೊಡುವುದು ಮತ್ತು ನಾಡೀ ಚೈತನ್ಯಗಳ ದೋಷವನ್ನು ಹಾಳುಮಾಡುವುದು. ಇದಕ್ಕೆ ಸರಿಯಾಗಿ ಕದಂಬ ಎಂಬ ಶಬ್ದಕ್ಕೂ "ಕಾದಂಬರೀ ಉತ್ತಮಾ ರುದಿರಾ ಪ್ರಿಯಾಯಸ್ಯಾಃ ಸಾ" ಮತ್ತು "ಕಂ ವಾತಂದಮಯತೀತಿಕದಂಬಃ" ನಾಡಿಗಳಲ್ಲಿ ರುವ ದೋಷಗಳನ್ನು ಹಾಳುಮಾಡಿ ಪುಷ್ಟಿಯನ್ನು ಕೊಡುವುದು. ಇದೇ ಸುಧಾರಸವು. ಈ ತತ್ವಸಮರ್ಥನೆಗೆ ಸರಿಯಾಗಿ ಅಮೃತರೂಪವಾದ ಬೆಳ ದಿಂಗಳಿಗೆ ಕಾದಂಬರಿ ಎಂದು ಅರ್ಥವಿರುವುದು. ಈ ಕದಂಬವೃಕ್ಷದ ತತ್ವವು ನಮ್ಮ ಶಿರಸ್ಸಿನಲ್ಲಿ ಸಹಸ್ರಾರ ಕಮಲದಲ್ಲಿ ಇರುವುದು. ಇದರಿಂದ ಅಮೃತ ವೆಂದರೆ ಸುಧಾರಸವು ಉತ್ಪತ್ತಿಯಾಗಿ ದೇಹಗಳಲ್ಲಿರುವ ನಾಡಿಗಳಿಗೆ ಪ್ರವಹಿಸಿ ನಾಡಿಗಳ ದೋಷಗಳನ್ನು ಪರಿಹರಿಸಿ ಪುಷ್ಟಿಯನ್ನು ಕೊಡುವುದು. ಇದರ ವಿಚಾರವು ಬಹುಗಹನವಾದುದು. ಅನೇಕ ಶ್ರುತಿಗಳಲ್ಲಿದೆ. ಶ್ರೀಶಂಕರಾಚಾರ್ಯ ರವರು ಯೋಗತಾರಾವಳಿಯಲ್ಲೂ ಮತ್ತು ಸೌಂದರ್ಯಲಹರಿಯಲ್ಲಿ "ಸುಧಾಧಾರಾ ಸಾರೈಃ" ಎಂಬ ಶ್ಲೋಕದಲ್ಲೂ ಹೇಳಿರುವುದನ್ನು ಪಠಿಸಿದರೆ ಇದರ ತತ್ವವು

ಚೆನ್ನಾಗಿ ಗೊತ್ತಾಗುವುದು. ಆದುದರಿಂದ ಹೆಂಡದಲ್ಲಿ ಶ್ರೀದೇವಿಗೆ ಪ್ರೀತಿಯೆಂದು ಈ ನಾಮಕ್ಕೆ ಅರ್ಥಮಾಡಿಕೊಂಡು ಭ್ರಾಂತರಾಗಬಾರದು. ಸುಧಾರಸದಲ್ಲಿ ಪ್ರೀತಿಯುಳ್ಳವಳೆಂದು ತಿಳಿದುಕೊಳ್ಳಬೇಕು.

**೩೩೧. ವರದಾಯೈನಮಃ—**

ಇಷ್ಟಾರ್ಥಗಳನ್ನು ಕೊಡುವವಳು. ಮೋಕ್ಷವನ್ನು ಅನುಗ್ರಹಿಸುವವಳು.

**೩೩೨. ವಾಮನಯನಾಯೈನಮಃ—**

ಸುಂದರವಾದ ಕಣ್ಣುಗಳುಳ್ಳವಳು. ಕರ್ಮಕ್ಕೆ ತಕ್ಕ ಫಲಗಳನ್ನು ಅನುಗ್ರಹಿಸುವವಳು.

**೩೩೩. ವಾರುಣೀ ಮದವಿಹ್ವಲಾಯೈನಮಃ—**

ಖರ್ಜೂರ ಮತ್ತು ಈಚಲಗಿಡದ ಹೆಂಡಕ್ಕೆ ವಾರುಣೀ ಎಂದು ಸಾಧಾರಣವಾದ ಅರ್ಥ. ಇಲ್ಲಿ ಆ ಅರ್ಥವಲ್ಲ. ವಾರುಣೀ ಎಂದರೆ ಸುಧಾ ಅಥವಾ ಅಮೃತ. ಸಮುದ್ರಮಥನ ಕಾಲದಲ್ಲಿ ಅಮೃತೋತ್ಪತ್ತಿಯಾಯಿತು. ಇದಕ್ಕೆ ವಾರುಣೀ ಎಂದು ಪುರಾಣದಲ್ಲಿ ಹೇಳಿದೆ. ಈ ಸುಧಾರಸವು ನಮ್ಮ ಸಹಸ್ರಾರ ಕಮಲದಿಂದ ಸುಷುಮ್ನಾನಾಡಿಯಲ್ಲಿ ಸ್ರವಿಸುವುದು. ಸುಷುಮ್ನಾ ನಾಡಿಗೆ ವಾರುಣೀನಾಡಿ ಎಂದು ಹೆಸರು. ಅಲ್ಲದೆ ತೈತ್ತಿರೀಯ ಶ್ರುತಿಯಲ್ಲಿ "ಸೈಷಾವಾರುಣೀ ವಿದ್ಯಾ" ಎಂಬ ಆಧಾರವೂ ಇರುವುದು. ಅಂದರೆ ಧ್ಯಾನಾಭ್ಯಾಸದಿಂದ ಸಮಾಧಿಯಲ್ಲಿ ಪರಿಪಕ್ವಾವಸ್ಥೆಯನ್ನು ಪಡೆದವರು ಸುಧಾರಸಪಾನದಿಂದ ಬಹಿರ್ವ್ಯಾಪಾರವನ್ನು ಮರೆತು ಬ್ರಹ್ಮಾನಂದದಲ್ಲಿ ಲೀನರಾಗಿರುವರು. ಆದುದರಿಂದ ಜೀವನ್ಮುಕ್ತ ಸ್ಥಿತಿಯೇ ವಾರುಣೀಮದ ವಿಹ್ವಲವಾಗಿರುವುದು. ಶ್ರೀದೇವಿಯು ಇಂತಹ ಸ್ಥಿತಿಯ ಸ್ವರೂಪಿಣಿಯು.

**೩೩೪. ವಿಶ್ವಾಧಿಕಾಯೈನಮಃ**—ಬ್ರಹ್ಮಾಂಡಕ್ಕೆ ದೊಡ್ಡವಸ್ತುವಾಗಿರುವವಳು.

**೩೩೫. ವೇದವೇದ್ಯಾಯೈನಮಃ—**

ವೇದಗಳಿಂದಲೇ ತಿಳಿಯಲ್ಪಡತಕ್ಕವಳು. ಅಂದರೆ ಜ್ಞಾನಮಾರ್ಗದಿಂದಲೇ ಹೊಂದಲ್ಪಡುವವಳು.

**೩೩೬. ವಿನ್ಧ್ಯಾಚಲನಿವಾಸಿನ್ಯೈನಮಃ—**

ಶುಂಭನಿಶುಂಭರನ್ನು ವಧಿಸಿ ದೇವತೆಗಳನ್ನು ಕಾಪಾಡಲು ವಿಂಧ್ಯಪರ್ವತದಲ್ಲಿ ವಾಸವಾಗಿದ್ದು ನಂದಗೋಪನವಂಶದ ಯಶೋದೆಯಲ್ಲಿ ದುರ್ಗೆಯಾಗಿ ಅವತರಿಸಿ

ದುದರಿಂದ ವಿಂಧ್ಯಪರ್ವತವಾಸಿನೀ ಎಂದು ಮಾರ್ಕಂಡೇಯ ಪುರಾಣ, ಹರಿವಂಶ ಮತ್ತು ದೇವೀಭಾಗವತಗಳಲ್ಲಿ ಹೇಳಿದೆ. ವಿಂಧ್ಯಪರ್ವತದಲ್ಲಿ ವಾಸವಾಗಿರುವ ಅಗಸ್ತ್ಯಋಷಿಗಳ ಪತ್ನಿಯಾದ ಲೋಪಾಮುದ್ರೆಗೆ ಅನುಗ್ರಹಿಸಲು ಶ್ರೀದೇವಿಯು ವಿಂಧ್ಯಪರ್ವತದಲ್ಲಿ ನೆಲೆಸಿದಳೆಂದು ಹೇಳಬಹುದು. ಅಲ್ಲದೆ ಓಂಕಾರದಲ್ಲಿನ ಅಕಾರವು ಉಕಾರಕ್ಕೆ ಸೇರಿ ದೇಹ ವ್ಯಾಪಾರನಡೆಯಲು ಮಕಾರಕ್ಕೆ ಸಂಬಂಧಿಸದೆ ಓಕಾರವಾಗಿ ನಿಂತಿರುವುದೆಂದರೆ ಸಕಲಪ್ರಾಣ ಶಕ್ತಿರೂಪಳಾಗಿ ನೆಲೆಸಿರುವವಳು, ಎಂಬ ಅಂತರ್ಯವಾದ ಅರ್ಥವೂ ಇರುವುದು. ಇದರ ವಿಚಾರವು ರಾಮಾಯಣದ ಅಂತರಾರ್ಥ ಗ್ರಂಥದಲ್ಲಿ ಅಗಸ್ತ್ಯಾಶ್ರಮ ಪ್ರಕರಣದ ತತ್ವದಲ್ಲಿ ವಿವರಮಾಡಿದೆ.

**೩೩೭. ವಿಧಾತ್ರ್ಯೈನಮಃ—**

ಜಗತ್ತನ್ನು ಆಹಾರದಿಂದ ರಕ್ಷಿಸುವವಳು. ಮಾತೆಯು ಶಿಶುವನ್ನು ಹೇಗೆ ಪೋಷಿಸುವಳೋ ಅದರಂತೆ ಜಗತ್ತನ್ನು ಪೋಷಿಸುವವಳು.

**೩೩೮. ವೇದಜನನ್ಯೈನಮಃ—**

ನಾಲ್ಕುವೇದಗಳಿಗೂ ಮಾತೆಯು. ಜ್ಞಾನ, ಕ್ರಿಯಾ, ಇಚ್ಛಾಶಕ್ತಿಗಳಿಗೂ ತಾಯಿಯಾಗಿರುವಳು.

**೩೩೯. ವಿಷ್ಣುಮಾಯಾಯೈನಮಃ—**

ಸರ್ವವ್ಯಾಪಿಯಾದ ವಿಷ್ಣುವಿನ ಶಕ್ತಿಯಾಗಿರುವವಳು. ಪಾಲನಾಶಕ್ತಿಯಾಗಿರುವವಳು. ಮೂಲಪ್ರಕೃತಿ ಸ್ವರೂಪಿಣಿಯು.

**೩೪೦. ವಿಲಾಸಿನ್ಯೈನಮಃ—**

ಇಚ್ಛಾಮಾತ್ರದಿಂದಲೇ ಲೀಲಾಕಾರ್ಯ ಮಾಡುವವಳು.

**೩೪೧. ಕ್ಷೇತ್ರಸ್ವರೂಪಾಯೈನಮಃ—**

ಪಂಚಭೂತಾತ್ಮಕವಾದ ದೇಹದ ಸ್ವರೂಪದವಳು.

**೩೪೨. ಕ್ಷೇತ್ರೇಶ್ಯೈನಮಃ—**

ಪಂಚಭೂತಾತ್ಮಕವಾದ ದೇಹಕ್ಕೆ ಯಜಮಾನನಾದ ಜೀವಸ್ವರೂಪಿಣಿಯು.

**೩೪೩. ಕ್ಷೇತ್ರಕ್ಷೇತ್ರಜ್ಞಪಾಲಿನ್ಯೈನಮಃ—**

ಪಂಚಭೂತಾತ್ಮಕವಾದ ದೇಹವನ್ನೂ ದೇಹಕ್ಕೆ ಯಜಮಾನನಾದ ಜೀವನನ್ನೂ ಕಾಪಾಡತಕ್ಕ ಜಗದೀಶ್ವರಿಯ ಸ್ವರೂಪಿಣಿಯು.

**೩೪೪. ಕ್ಷಯವೃದ್ಧಿವಿನಿರ್ಮುಕ್ತಾಯೈನಮಃ—**

ಕ್ಷಯಿಸುವಿಕೆ, ವೃದ್ಧಿಹೊಂದುವಿಕೆಗಳಿಲ್ಲದವಳು. ದೇಹಸ್ವರೂಪವಾದರೂ ದೇಹಸ್ವರೂಪವಲ್ಲದವಳು. ದೇಹ ಸ್ವರೂಪವಾದ ಮಲಿನ ಮಾಯೆಗೂ ನಿಯಂತೃವಾಗಿ ಶುದ್ಧ ಸತ್ವಪ್ರಧಾನ ಮಾಯಾ ಸ್ವರೂಪದವಳು ಷಡ್ಭಾವ ವಿಕಾರ ಶೂನ್ಯಳು.

**೩೪೫. ಕ್ಷೇತ್ರಪಾಲ ಸಮರ್ಚಿತಾಯೈನಮಃ—**

ಶ್ರೀದೇವಿಯು ದಾರುಕನೆಂಬ ರಾಕ್ಷಸನನ್ನು ನಿಗ್ರಹಿಸಲು ಶ್ರೀಕಾಳಿಯ ಅವತಾರಮಾಡಿ ರಾಕ್ಷಸನನ್ನು ನಿಗ್ರಹಿಸಿದಳು. ರಾಕ್ಷಸನು ನಿಗ್ರಹವಾದರೂ ಶ್ರೀಕಾಳಿಯ ಕೋಪಾಗ್ನಿಯು ಶಾಂತವಾಗದಿರಲು ಈಶ್ವರನು ಅಳುತ್ತಿರುವ ಎಳೇ ಮಗುವಿನ ಅವತಾರಮಾಡಿ ಶ್ರೀಕಾಳಿಯ ಹತ್ತಿರ ಹೋಗಲು ಶ್ರೀಕಾಳಿಯು ಮಗುವಿಗೆ ಸ್ತನ್ಯಪಾನದ ನೆಪದಿಂದ ಶ್ರೀಕಾಳಿಯಲ್ಲಿದ್ದ ಕೋಪಾಗ್ನಿಯನ್ನು ಪಾನ ಮಾಡಿದುದರಿಂದ ಈ ಮಗುವಿಗೆ ಕ್ಷೇತ್ರಪಾಲನೆಂದು ಹೆಸರು ಬಂತೆಂದು ಲಿಂಗ ಪುರಾಣದಲ್ಲಿರುವುದು. ಇಂತಹ ಕ್ಷೇತ್ರಪಾಲನಿಂದ ಆರಾಧಿಸಿಕ್ಕೊಂಡವಳು. ಪಂಚ ಭೂತಾತ್ಮಕವಾದ ದೇಹಕ್ಕೆ ಪಾಲಕನಾದ ಜೀವನಿಂದಲೂ ಆರಾಧಿಸಲ್ಪಡುವವಳು.

**೩೪೬. ವಿಜಯಾಯೈನಮಃ—** ಯಾವಾಗಲೂ ಜಯವನ್ನೇ ಪಡೆಯುವವಳು.

**೩೪೭. ವಿಮಲಾಯೈನಮಃ—**

ಲೇಶಮಾತ್ರವಾದರೂ ಅಜ್ಞಾನವಿಲ್ಲದವಳು ಪರಿಶುದ್ಧವಾದವಳು.

**೩೪೮. ವನ್ದ್ಯಾಯೈನಮಃ—**

ನಮಸ್ಕಾರಯೋಗ್ಯಳು. ಪೂಜಿಸಲ್ಪಡಲು ಮತ್ತು ಉಪಾಸಿಸಲು ಯೋಗ್ಯವಾದವಳು.

**೩೪೯. ವನ್ದಾರುಜನವತ್ಸಲಾಯೈನಮಃ—**

ಅನವರತವೂ ಪೂಜಿಸುವ ಮತ್ತು ಉಪಾಸನೆ ಮಾಡತಕ್ಕವರಲ್ಲಿ ಪ್ರೀತಿಯನ್ನಿಡುವವಳು. (ಭಕ್ತರಲ್ಲಿ ಯಾವಾಗಲೂ ವಾತ್ಸಲ್ಯವುಳ್ಳವಳು).

**೩೫೦. ವಾಗ್ವಾದಿನ್ಯೈನಮಃ—**

ಪ್ರಪಂಚದಲ್ಲಿರುವ ಸಕಲ ಪ್ರಾಣಿಗಳು ಮಾತನಾಡುವ ವಾಕ್‌ಸ್ವರೂಪದವಳು. (೨) ಸಿದ್ಧಾಂತಸ್ವರೂಪಳು.

**೩೫೧. ವಾಮಕೇಶ್ಯೈನಮಃ —**

ಸೊಗಸಾದ ತಲೇಕೂದಲುಳ್ಳವಳು. ಮನಷ್ಯರಿಗೆ ನಾಥಳು.

**೩೫೨. ವಹ್ನಿಮಣ್ಡಲವಾಸಿನ್ಯೈನಮಃ—**

ಅಗ್ನಿಯಲ್ಲಿ ಅಂತರ್ಗತವಾಗಿರುವವಳು. ಪರಮಾಕಾಶ ಸ್ವರೂಪಳು. ಮೂಲಾಧಾರದಲ್ಲಿ ನೆಲೆಸಿರುವವಳು.

**೩೫೩. ಭಕ್ತಿಮತ್ಕಲ್ಪ ಲತಿಕಾಯೈನಮಃ—**

ಸಕಲ ಇಷ್ಟವಾದ ಫಲಗಳನ್ನು ಕೊಡತಕ್ಕದ್ದು ಕಲ್ಪವೃಕ್ಷವು. ಭಕ್ತರುಗಳಿಗೆ ಕಲ್ಪವೃಕ್ಷದೋಪಾದಿಯಲ್ಲಿ ಸಕಲ ಇಷ್ಟಾರ್ಥಗಳನ್ನು ಕೊಡುವವಳು.

**೩೫೪. ಪಶುಪಾಶವಿಮೋಚಿನ್ಯೈನಮಃ—**

ಅಜ್ಞಾನದ ಬಂಧನದಿಂದ ಬಿಡಿಸಿ ಉದ್ಧರಿಸುವವಳು. ನಿತ್ಯವಾದ ಪರಮಾತ್ಮನ ಜ್ಞಾನವಿಲ್ಲದೆ ಅನಿತ್ಯವಾದ ಪ್ರಪಂಚವ್ಯವಹಾರದಲ್ಲಿಯೇ ಅಜ್ಞಾನದಿಂದ ಬಂಧಿತವಾಗಿರುವದಕ್ಕೆ ಪಶುಪಾಶವೆಂದು ಹೆಸರು. ಈ ಅನಿತ್ಯವಾದ ಪ್ರಪಂಚ ಬಂಧವನ್ನು ಪರಿಹರಿಸಿ ನಿತ್ಯವಾದ ಪರಬ್ರಹ್ಮತ್ವವನ್ನು ಅನುಗ್ರಹಿಸುವವಳು.

**೩೫೫. ಸಂಹೃತಾಶೇಷ ಪಾಷಣ್ಡಾಯೈನಮಃ—**

ವೇದವಿಹಿತವಲ್ಲದ ಸ್ವೇಚ್ಛೆಯಿಂದ ಕಲ್ಪಿಸಿಕೊಂಡಿರುವ ಸಂಪ್ರದಾಯಗಳ ಮತಕ್ಕೆ ಪಾಷಂಡಿ ಮತಗಳೆಂದು ಹೆಸರು. ಇಂತಹ ಪಾಷಂಡತ್ವವನ್ನು ನಿರ್ಮೂಲವಾಗಿ ಧ್ವಂಸಮಾಡುವವಳು.

**೩೫೬. ಸದಾಚಾರಪ್ರವರ್ತಿಕಾಯೈನಮಃ—**

ವೇದದಲ್ಲಿ ನಿರೂಪಿಸಲ್ಪಟ್ಟಿರುವಂತಹ ಸದಾಚಾರವೆಂದರೆ ಸತ್ ಪ್ರತಿಪಾದ್ಯವಾದ ಪರಮಾತ್ಮನನ್ನು ಹೊಂದುವ ಮಾರ್ಗವಾದ ಧರ್ಮಮಾರ್ಗದಲ್ಲಿಯೂ ಮೋಕ್ಷಮಾರ್ಗದಲ್ಲಿಯೂ ಇರತಕ್ಕವರಿಗೆ ಸದಾಚಾರ ಪ್ರವರ್ತಕರೆಂದು ಹೆಸರು. ಇಂತಹ ಸದಾಚಾರ ಪ್ರವರ್ತಕರ ಸ್ವರೂಪಿಣಿಯಾಗಿರುವವಳು.

**೩೫೭. ತಾಪತ್ರಯಾಗ್ನಿಸಂತಪ್ತ ಸಮಾಹ್ಲಾದನ ಚನ್ದ್ರಿಕಾಯೈನಮಃ—**

ಆಧ್ಯಾತ್ಮಿಕ, ಆಧಿದೈವಿಕ, ಆದಿಭೌತಿಕಗಳಿಂದ ಉಂಟಾದ ಅಂದರೆ ಮನಸ್ಸಿಗೆ ಮತ್ತು ದೇಹಕ್ಕೆ ಉಂಟಾಗುವ ರೋಗಾದಿಗಳು, ದೈವಿಕವಾದ ಭೂಕಂಪನ ಮುಂತಾದ ತೊಂದರೆ, ಪಂಚಭೂತಗಳಿಂದುಂಟಾಗುವ ಕ್ಷಾಮ, ಅತಿಪ್ರವಾಹ ಮುಂತಾದ ಈ ಮೂರೂ ಮನುಷ್ಯನಿಗಿರುವ ೩ ವಿಧವಾದ ಚಿಂತೆಗಳು. ಇಂತಹ ಮೂರು ವಿಧವಾದ ಚಿಂತಾಗ್ನಿಗಳಿಂದ ಕೂಡಿದ ಜನಗಳ ಮನಸ್ಸಿಗೆ ಆಹ್ಲಾದವನ್ನುಂಟು ಮಾಡುವುದರಲ್ಲಿ ಪೂರ್ಣಿಮಾ ಬೆಳದಿಂಗಳಂತೆ ಇರುವವಳು.

**೩೫೮. ತರುಣ್ಯೈನಮಃ—**

ಯಾವಾಗಲೂ ವೃದ್ಧಾಪ್ಯವೆಂಬುದಿಲ್ಲದೆ ಯುವತಿಯಾಗಿರುವವಳು. ಇದಕ್ಕೆ "ಅಜರೋ ವ್ಮೃತ" ಎಂಬ ಶ್ರುತ್ಯಾಧಾರವಿರುವುದು.

**೩೫೯. ತಾಪಸಾರಾಧ್ಯಾಯೈನಮಃ**—ತಪಸ್ವಿಗಳಿಂದ ಆರಾಧಿಸಲ್ಪಡುವವಳು.

**೩೬೦. ತನುಮಧ್ಯಾಯೈನಮಃ—**

ದೇಹಕ್ಕೆ ಮಧ್ಯಪ್ರದೇಶವಾದ ಸುಷುಮ್ನಾನಾಡಿಯಲ್ಲಿ ನೆಲಸಿರುವವಳು. ತೆಳುವಾದ ಸೊಂಟವುಳ್ಳವಳು.

**೩೬೧. ತಮೋಪಹಾಯೈನಮಃ—**

ಅಂಧಕಾರವನ್ನು ಹೋಗಲಾಡಿಸುವವಳು. ತಮೋಗುಣ ಸ್ವರೂಪವಾದ ಅಸತ್ವಾವರಣ ಮತ್ತು ಅಭಾನಾವರಣಗಳನ್ನು ಪರಿಹರಿಸುವವಳು.

**೩೬೨. ಚಿತ್ಯೈನಮಃ**—ಸ್ವಯಂಪ್ರಕಾಶಸ್ವರೂಪಿಣಿಯು. ಶುದ್ಧಜ್ಞಾನರೂಪಳು.

**೩೬೩. ತತ್ಪದಲಕ್ಷ್ಯಾರ್ಥಾಯೈನಮಃ—**

ತತ್ ಎಂದರೆ ಅದು. ಅದು ಎಂದರೆ ಪರಬ್ರಹ್ಮವಸ್ತುವು. ಲಕ್ಷ್ಯಾರ್ಥವೆಂದರೆ ಅನುಭವದಿಂದ ತತ್ ಎಂಬ ಪದದಿಂದ ಪ್ರತಿಪಾದ್ಯವಾದ ಯಾವ ಪರಬ್ರಹ್ಮವು ಹೊಂದಲ್ಪಡುವುದೋ ಆ ತತ್‌ಪದ ಪ್ರತಿಪಾದ್ಯವಾದ ಪರಬ್ರಹ್ಮಸ್ವರೂಪಿಣಿಯು.

**೩೬೪. ಚಿದೇಕ ರಸರೂಪಿಣ್ಯೈನಮಃ—**

ಸ್ವಯಂ ಪ್ರಕಾಶ ಮಾತ್ರವೇ ರೂಪವಾಗಿರುವವಳು. ಶುದ್ಧಜ್ಞಾನ ಮಾತ್ರ ಸ್ವರೂಪವಾಗಿ ಇರುವವಳು.

**೩೬೫. ಸ್ವಾತ್ಮಾನನ್ದಲವೀಭೂತ ಬ್ರಹ್ಮಾದ್ಯಾನನ್ದಸಂತತ್ಯೈನಮಃ—**

ಆನಂದದಲ್ಲಿ ಮಾನುಷ್ಯಾನಂದ, ಮನುಷ್ಯಗಂಧರ್ವ, ದೇವಗಂಧರ್ವ, ಕರ್ಮದೇವ, ದೇವ, ಇಂದ್ರ, ಬೃಹಸ್ಪತಿ, ಚತುರ್ಮುಖ ಬ್ರಹ್ಮ, ಇವರ ಆನಂದ ಗಳು ಕ್ರಮವಾಗಿ ಒಂದಕ್ಕಿಂತಲೂ ಒಂದು ನೂರುಪಾಲು ಹೆಚ್ಚು. ಇಂತಹ ಆನಂದಗಳೆಲ್ಲವೂ ಭಗವತಿಯ ಸಾಕ್ಷಾತ್ಕಾರದಿಂದ ಉಂಟಾಗುವ ಆನಂದದಲ್ಲಿ ಲವವೆಂದರೆ ಅಣುವಿನಲ್ಲಿ ಅಣು ಸ್ವರೂಪವಾಗಿರುವುದು. ಮನುಷ್ಯನು ವಿಷಯಾನುಭವಗಳಲ್ಲಿ ಹೊಂದುವ ಸಕಲವಿಧವಾದ ಆನಂದವೂ ಮಾನುಷ್ಯಾ ನಂದಕ್ಕೆ ಸೇರಿದುದು. ಈ ಮಾನುಷಾನಂದಕ್ಕಿಂತಲೂ ಮನುಷ್ಯನು ದೇವತಾ ಉಪಾಸನಾರೂಪವಾದ ನಾದಬ್ರಹ್ಮದಲ್ಲಿ ಹೊಂದುವ ಆನಂದವು ನೂರುಪಾಲು ಹೆಚ್ಚಿನದು. ಹೀಗೆಯೇ ಚತುರ್ಮುಖ ಬಹ್ಮನ ಆನಂದದವರೆಗೂ ತಾರತಮ್ಯ ಗಳಿವೆ. ಬಹು ಹೆಚ್ಚಿನದಾದ ಚತುರ್ಮುಖ ಬ್ರಹ್ಮನ ಆನಂದವೂ ಕೂಡ ನಿಜಾನಂದ ಸ್ವರೂಪಳಾದ ಭಗವತಿಯ ಆನಂದದಲ್ಲಿ ಅಣುವಿಗೆ ಅಣುಸ್ವರೂಪವಾಗಿರುವುದು.

**೩೬೬. ಪರಾಯೈನಮಃ—**

ಅನಾಹತ ಸ್ವರೂಪವಾಗಿಯೂ ಆನಂದಮಯವಾಗಿಯೂ ಆಕಾಶಾಂತರ್ಗತ ವಾಗಿರುವ ನಾದಬ್ರಹ್ಮದ ಕಳಾಸ್ವರೂಪಕ್ಕೆ ಪರಾ ಎಂದು ಹೆಸರು. ಶುದ್ಧ ಸತ್ವಕ್ಕೆ ಪರಾ ಎಂದು ಹೆಸರು ಅಂದರೆ ಈಶ್ವರ ಸೋಪಾನ. ಶ್ರೀದೇವಿಯು ಇಂತಹ ಪರಾತತ್ವದವಳು.

**೩೬೭. ಪ್ರತ್ಯಕ್ಚಿತೀರೂಪಾಯೈನಮಃ—**

ಮೇಲಿನ ನಾಮದಲ್ಲಿ ಹೇಳಿದ ಪರಾ ರೂಪವು ಒಳಗಡೆ ಇರುವ ಅಂದರೆ ಆಕಾಶಾಂತರ್ಗತವಾಗಿರುವ (ಪ್ರತ್ಯಕ್) ನಮ್ಮ ತಿಳುವಳಿಕೆಗೆ ನಿಲುಕದ ಜ್ಞಾನದ ರೂಪವಾಗಿಯೂ ಆನಂದ ಸ್ವರೂಪವಾಗಿಯೂ, ಕಳಾಸ್ವರೂಪವಾಗಿಯೂ ಇರುವ ಸ್ಥಿತಿ. ಇದಕ್ಕೆ ಪ್ರತ್ಯಕ್ಚಿತ್ ರೂಪವೆಂದು ಹೆಸರು.

**೩೬೮. ಪಶ್ಯನ್ತ್ಯೈನಮಃ—**

ಪಶ್ಯಂತಿಯು ಪರಾಸೋಪಾನಕ್ಕೆ ಕೆಳಗಿನದು. ಸ್ವಪ್ನಗಳಲ್ಲಿ ಇಂದ್ರಿಯಗಳ ವ್ಯಾಪಾರವಿಲ್ಲದೆ ತೇಜಸ್ಸಿನಲ್ಲಿ ಭಾವನಾಮಾತ್ರ ವ್ಯಾಪಾರವಿರುವಂತೆ ನಾವು ಉಪಾಸಿಸುವ ದೇವತಾ ಭಾವನೆಯನ್ನು ತೇಜಸ್ಸಿನಲ್ಲಿ ಧರಿಸಿಕೊಂಡು ನಿಲ್ಲುವ ಸ್ಥಿತಿಗೆ ಪಶ್ಯಂತೀ ಎಂದು ಹೆಸರು. ದೇವತಾಸ್ವರೂಪವು ಇಂತಹುದೆಂದು ವರ್ಣನೆ ಇರುವುದಷ್ಟೆ. ವರ್ಣಿಸಲ್ಪಟ್ಟಿರುವದರ ಅರ್ಥದಂತೆ ದೇವತಾ ಭಾವನಾ

ರೂಪವನ್ನು ತೇಜಸ್ಸಿನಲ್ಲಿ ಧರಿಸಿಕೊಂಡು ಧ್ಯಾನಮಾಡುವುದು ಪಶ್ಯಂತಿಯು. ಶ್ರೀದೇವಿಯು ಪಶ್ಯಂತೀ ಸ್ವರೂಪಿಣಿಯು. ಶಬ್ದದ ಅರ್ಥದ ಭಾವನಾಮಾತ್ರ ರೂಪಕ್ಕೆ ಪಶ್ಯಂತೀ ಎಂದು ಹೆಸರು.

**೩೭೯. ಪರದೇವತಾಯೈನಮಃ—**

ಪಶ್ಯಂತೀ ಸ್ಥಿತಿಯಲ್ಲಿ ಅಂತರ್ಮುಖದ ತೇಜಸ್ಸಿನಲ್ಲಿ ಗೋಚರವಾಗುವ ದೇವತಾಕಾರವು ಸಗುಣದಲ್ಲಿನ ಶ್ರೇಷ್ಠವಾದ ದೇವತಾ ಸ್ವರೂಪವಾಗಿರುವುದು. ಇದೇ ಪರದೇವತಾ ಸ್ವರೂಪಿಣಿಯಾದ ಶ್ರೀದೇವಿಯು ಪುಣ್ಯಪರಿಪಾಕ ಕಾಲ ದಲ್ಲಿ ಉಪಾಸಕನಿಗೆ ಉಪಾಸನಾದೇವತೆಯು ತಾನಾಗಿಯೇ ಸಗುಣವಾದ ತೇಜೋ ರೂಪಿನಲ್ಲಿ ದರ್ಶನಕೊಡುವುದು. ಈ ಸೋಪಾನದಲ್ಲಾದುದರಿಂದ ಪಶ್ಯಂತೀ ಸ್ವರೂಪವು ಪರದೇವತಾಸ್ವರೂಪವಾಗಿರುವುದು.

**೩೮೦. ಮಧ್ಯಮಾಯೈನಮಃ—**

ಉಪಾಸನಾ ದೇವತಾಮಂತ್ರವನ್ನು ಹೊರಗಿನವರಿಗೆ ಶಬ್ದೋಚ್ಚಾರಣೆಯು ಕೇಳದಂತೆ ತುಟಿಯು ಅಳ್ಳಾಡುವಷ್ಟು ಮಾತ್ರ ಗೋಚರವಾಗಿ ಒಳಗಡೆಯೇ ನಾವೇ ಕೇಳುವಂತಿರುವಂತೆ ಮಂತ್ರೋಚ್ಚಾರಣೆಮಾಡಿ ಆಗಾಗ್ಯೆ ದೇವತಾ ಭಾವನೆಯನ್ನು ಧರಿಸಿಕೊಂಡು ಜಪಮಾಡುವುದು ಮಧ್ಯಮವೆನಿಸುವುದು. "ಮಧ್ಯಮಾ ಶ್ರುತಿಗೋಚರಾಃ" ಎಂಬ ಶ್ರುತ್ಯಾಧಾರದಂತೆ ನಮ್ಮ ಕಿವಿಗೆ ಮಾತ್ರ ಕೇಳುವಂತೆ ಒಳಗಡೆ ಉಚ್ಚಾರ ಮಾಡುವುದು ಮಧ್ಯಮದ ಸ್ವರೂಪವು. ಶ್ರೀದೇವಿಯು ಮಧ್ಯಮದ ಸ್ವರೂಪವಾಗಿಯೂ ಇರುವಳು.

**೩೮೧. ವೈಖರೀರೂಪಾಯೈನಮಃ—**

"ವೈಖರೀ ಶಬ್ದನಿಷ್ಪತ್ತಿಃ" ಎಂಬ ಶ್ರುತ್ಯಾಧಾರದಂತೆ ನಾವು ಉಚ್ಚರಿಸುವ ಶಬ್ದವು ಹೊರಗಿನವರಿಗೆ ಕೇಳುವಂತಿರುವುದು ವೈಖರಿಯೆನಿಸುವುದು. ಇಂತಹ ವೈಖರೀ ಸ್ವರೂಪವಾದ ಶಬ್ದವೂ ಶ್ರೀದೇವಿಯೇ. ಹಿಂದಿನ ೬ ನಾಮಗಳಿಂದ ತಿಳಿಸಿಕೊಂಡು ಬಂದ ವೈಖರೀ, ಮಧ್ಯಮಾ, ಪಶ್ಯಂತೀ, ಪರಾ, ಈ ನಾಲಕ್ಕೂ ನಾದಬ್ರಹ್ಮದ ಭೇದಗಳು. ವೈಖರೀ ಸ್ವರೂಪವಾದ ಸ್ಥೂಲ ಶಬ್ದದಿಂದ ಬಹು ಸೂಕ್ಷ್ಮಾತ್ ಸೂಕ್ಷ್ಮತರವಾದ ಪರಾ ಎಂದರೆ ಕಳಾಸ್ಥಿತಿಯವರೆಗೂ ನಾದಬ್ರಹ್ಮ ವಾಗಿರುವುದು. ಸೃಷ್ಟಿಕ್ರಮದಲ್ಲಿ ಓಂಕಾರವು ಪರಾದಿಂದ ಪ್ರಾರಂಭವಾಗಿ ವೈಖ ರೀಗೆ ಬಂದು ನಿಲ್ಲುವುದು. ಲಯಕ್ರಮದಲ್ಲಿ ವೈಖರಿಯಿಂದ ಪ್ರಾರಂಭವಾಗಿ ಪರಾಸ್ಥಿತಿಗೆ ಹೋಗಿ ನಿಲ್ಲುವುದು.

ಮೇಲೆ ಬರೆದಿರುವ ಪಾರಾ, ಪಶ್ಯಂತೀ, ಮಾಧ್ಯಮಾ, ವೈಖರೀ ವಿಚಾರಗಳ ತತ್ವಗಳನ್ನು ಕೆಳಗಿನ ಶ್ರುತಿವಾಕ್ಯವು ದೃಢೀಕರಿಸುವುದು.

ವೈಖರೀಶಕ್ತಿನಿಷ್ಪತ್ತಿಃ ಮಧ್ಯಮಾಶ್ರುತಿಗೋಚರಾ |
ದ್ಯೋತಿತಾರ್ಥಾತುಪಶ್ಯಂತೀಸೂಕ್ಷ್ಮಾವಾಗನಪಾಯನೀ ||

ಅಂದರೆ ನಾಶರಹಿತವಾದ ಅವ್ಯಕ್ತವಾದ ಪರಾಶಕ್ತಿಯು ತೇಜೋರೂಪಿನಲ್ಲಿ ವ್ಯಕ್ತವಾದ ಅರ್ಥವುಳ್ಳ ಪಶ್ಯಂತೀ ಸ್ಥಿತಿಯನ್ನು ಹೊಂದಿ ಶ್ರುತಿಗೋಚರವಾದ ನಮ್ಮ ಒಳಗಿನ ಶಬ್ದರೂಪವಾದ ಮಧ್ಯಮ ಸ್ಥಿತಿಯನ್ನು ಹೊಂದಿ ಅನಂತರ ಹೊರಗಡೆ ಕೇಳಿಬರುವ ಸ್ಥೂಲಶಬ್ದರೂಪವಾದ ವೈಖರೀಸ್ಥಿತಿಯನ್ನು ಹೊಂದುವುದು. ಲಯಕ್ರಮದಲ್ಲಿ ಸ್ಥೂಲಶಬ್ದದಿಂದ ಕ್ರಮವಾಗಿ ಪರಾಸ್ಥಿತಿಗೆ ಹೋಗುವುದು.

**೩೭೨. ಭಕ್ತಮಾನಸ ಹಂಸಿಕಾಯ್ಯೈನಮಃ—**

ಭಕ್ತರ ಮನಸ್ಸಿನ ಸ್ವರೂಪವಾದ ಮಾನಸಸರೋವರದಲ್ಲಿ ಹಂಸಪಕ್ಷಿಯು ಸ್ವರೂಪವಾಗಿರುವವಳು ಅಂದರೆ ತ್ರಿಪುಟಿರಹಿತವಾಗದೆ ಶ್ರೀದೇವಿಯ ಭಾವನಾ ರೂಪದ ಮನನದ ಆನಂದದ ಸ್ಥಿತಿಯಾಗಿರುವುದೆಂಬ ತತ್ವ.

**೩೭೩. ಕಾಮೇಶ್ವರ ಪ್ರಾಣನಾಡ್ಯೈನಮಃ—**

ಪರಮೇಶ್ವರನ ಪ್ರಾಣಶಕ್ತಿಯಾಗಿರುವವಳು. ಬ್ರಹ್ಮ, ವಿಷ್ಣು, ಈಶ್ವರರಿಗೆ ಶಕ್ತಿಯು ಇಲ್ಲದಿದ್ದರೆ ಅಶಕ್ತರೆನಿಸಿಕೊಳ್ಳುತ್ತಾರೆ. ಆದುದರಿಂದ ಬ್ರಹ್ಮ, ವಿಷ್ಣು, ಈಶ್ವರರಿಗೂ ಪ್ರಾಣರೂಪವಾಗಿಯೇ ಶ್ರೀದೇವಿಯು ಇರುತ್ತಾಳೆ.

**೩೭೪. ಕೃತಜ್ಞಾಯ್ಯೈನಮಃ—**

ಮಾಡಲ್ಪಟ್ಟ ಸತ್ಕಾರ್ಯ ದುಷ್ಕಾರ್ಯಗಳನ್ನು ತಿಳಿಯತಕ್ಕವಳು. ಭಕ್ತರು ಮಾಡಿದ ಪ್ರಾರ್ಥನೆಗೆ ವಿಶ್ವಾಸದಿಂದ ತಕ್ಕಫಲವನ್ನು ಕೊಡುವವಳು.

**೩೭೫. ಕಾಮಪೂಜಿತಾಯ್ಯೈನಮಃ—**

ಮನ್ಮಥನಿಂದ ಪೂಜಿಸಲ್ಪಡುವವಳು. ಪ್ರವೃತ್ತಿಮಾರ್ಗದಲ್ಲಿರುವ ಭೋಗಾಪೇಕ್ಷೆಗಳಿಂದ ಪೂಜಿಸಲ್ಪಡತಕ್ಕವಳು.

**೩೭೬. ಶೃಂಗಾರರಸ ಸಂಪೂರ್ಣಾಯ್ಯೈನಮಃ—**

ಅಲಂಕಾರದ ಸಂಪೂರ್ಣ ಕಳಾಸ್ವರೂಪದಿಂದ ಪ್ರಕಾಶಿಸುವವಳು.

### ೩೭೭. ಜಯಾಯೈನಮಃ—

ಸೋಲೆಂಬುದೇ ಇಲ್ಲದವಳು. ಜಯಸ್ವರೂಪಿಣಿಯು.

### ೩೭೮. ಜಾಲನ್ಧರಸ್ಥಿತಾಯೈನಮಃ—

ಜಾಲನ್ಧರವೆಂದರೆ ಸಮೂಹವನ್ನು ಧರಿಸಿ ಕಾಪಾಡುವವಳೆಂದು ಸಾಧಾರಣವಾದ ಅರ್ಥ. ಮುಂದಿನ ಎರಡು ನಾಮಗಳ ಅರ್ಥದಿಂದಲೂ ಇದರ ತತ್ವಾರ್ಥವೇ ಬೇರೆಯಾದುದು. ಪದ್ಮಾಸನದಲ್ಲಿ ಕುಳಿತು ಗಡ್ಡವನ್ನು ಕತ್ತಿನ ಕೆಳಭಾಗಕ್ಕೆ ಅದುಮಿಕೊಂಡು ಭ್ರೂಮಧ್ಯದಲ್ಲಿ ದೃಷ್ಟಿಯನ್ನಿಟ್ಟು ಧ್ಯಾನಮಾಡುವುದಕ್ಕೆ ಜಾಲನ್ಧರ ಮುದ್ರೆಯೆಂದು ಹೆಸರು. ಇದಕ್ಕೆ ಅನೇಕ ಶ್ರುತಿಪ್ರಮಾಣಗಳಿವೆ. ಜಾಲಂಧರ ಮುದ್ರಾಸ್ಥಿತಿಯೂ ಶ್ರೀದೇವಿಯ ಸ್ವರೂಪವು.

### ೩೭೯. ಓಡ್ಯಾಣಪೀಠನಿಲಯಾಯೈನಮಃ—

ಜಾಲಂಧರ ಮುದ್ರೆಯಂತೆ ಒಡ್ಯಾಣವೆಂಬುದೂ ಒಂದು ಮುದ್ರೆ. ಓಡ್ಯಾಣವೆಂದರೆ ಸೊಂಟ. ಧ್ಯಾನಕಾಲದಲ್ಲಿ ಹೊಟ್ಟೆಯನ್ನು ಆಕಳಿಸಿ ಸೊಂಟದಿಂದ ಮೇಲಕ್ಕೆ ಎದೆಯ ಸಮೀಪದವರೆಗೆ ಹೊಟ್ಟೆಯನ್ನು ತರುವುದಕ್ಕೆ ಓಡ್ಯಾಣ ಮುದ್ರೆಯೆಂದು ಹೆಸರು. ಈ ಓಡ್ಯಾಣ ಮುದ್ರೆಯನ್ನು ಅಭ್ಯಾಸಮಾಡುವುದರಿಂದ ಓಡ್ಯಾಣ ಪೀಠವಾಗಿರುವ ಅಂದರೆ ಸೊಂಟದ ಕೆಳಭಾಗದ ಮೂಲಾಧಾರ ಚಕ್ರದಲ್ಲಿರುವ ಶ್ರೀಕುಂಡಲಿನೀ ಶಕ್ತಿಯು ಬ್ರಹ್ಮರಂಧ್ರದಲ್ಲಿ ಮೇಲಕ್ಕೆ ಮೇಲಕ್ಕೆ (ಉತ್-ಡಿ-ಯಾಣ) ಹೋಗಲನುಕೂಲವಾಗುವುದರಿಂದ ಇದಕ್ಕೆ ಉಡ್ಯಾಣ ಮುದ್ರೆಯೆಂದು ಹೆಸರು. ಇಂತಹ ಓಡ್ಯಾಣಕ್ಕೆ ಪೀಠವಾದ ಮೂಲಾಧಾರ ಚಕ್ರವು ಶ್ರೀಕುಂಡಲಿನೀ ಶಕ್ತಿಸ್ವರೂಪಳಾದ ಶ್ರೀದೇವಿಗೆ ಮೂಲಸ್ಥಾನವಾಗಿದೆ.

### ೩೮೦. ಬಿನ್ದುಮಣ್ಡಲವಾಸಿನ್ಯೈನಮಃ—

ಜಾಲನ್ಧರ ಮತ್ತು ಉಡ್ಯಾಣ ಮುದ್ರೆಗಳೊಡನೆ ಭ್ರೂಮಧ್ಯದಲ್ಲಿ ದೃಷ್ಟಿಯನ್ನಿಟ್ಟು ಧ್ಯಾನಮಾಡುವಾಗ ಅಂತರ್ಮುಖದ ತೇಜಸ್ಸು ಥಳಥಳಾಯಮಾನವಾದ ಸೂರ್ಯಬಿಂಬದಂತೆ ಗುಂಡಾಗಿ ಕಾಣುವುದು. ಇದೇ ಬಿಂದು. ಈ ಬಿಂದು ಮಣ್ಡಲದಲ್ಲಿ ಅಂತರ್ಗತವಾಗಿರುವವಳೇ ಶ್ರೀದೇವಿಯು. ಈ ತತ್ವಸಮರ್ಥನೆಗೆ "ಓಂಕಾರಂ ಬಿಂದುಸಂಯುಕ್ತಂ ನಿತ್ಯಂ ಧ್ಯಾಯಂತಿ ಯೋಗಿನಃ। ಕಾಮದಂ ಮೋಕ್ಷದಂ ತಸ್ಮಾದೋಂಕಾರಾಯ ನಮೋನಮಃ॥" ಎಂದು ಶ್ರೀಶಂಕರಭಗವತ್ಪಾದರವರು ಅಪ್ಪಣೆಕೊಡಿಸಿರುತ್ತಾರೆ. ಅಂದರೆ ಓಂಕಾರೋಪಾಸನೆಯಿಂದ ಅಂತರ್ಮುಖದ ತೇಜೋಬಿಂದುವನ್ನು ಧರಿಸಿ ಧ್ಯಾನಮಾಡುವವರು ಸಕಲೇಷ್ಟವನ್ನು

ಮೋಕ್ಷವನ್ನು ಹೊಂದುತ್ತಾರೆಂಬ ತಾತ್ಪರ್ಯ. ಅಲ್ಲದೆ "ಶಿವಸ್ಯಬಿಂದುರೂಪಸ್ಯ" ಎಂಬದಾಗಿ ವರಾಹೋಪನಿಷತ್ತಿನಲ್ಲೂ "ಮೂಲಾಧಾರಗತಾಶಕ್ತಿಃ ಸ್ವಾಧಾರಾ ಬಿಂದುರೂಪಿಣೀ" ಎಂಬದಾಗಿ ಯೋಗಶಿಖೋಪನಿಷತ್ತಿನಲ್ಲೂ ಹೇಳಿರುವುದು. ಆದುದರಿಂದ ಮೂಲಾಧಾರದಲ್ಲಿರುವ ಪರಾಶಕ್ತಿಯಾದ ಶ್ರೀಕುಂಡಲಿನಿಯೆ ತೇಜೋ ಬಿಂದುರೂಪವಾಗಿಯೂ ಇರುವಳು.

**೩೮೧. ರಹೋಯಾಗ ಕ್ರಮಾರಾಧ್ಯಾಯೈನಮಃ**

ರಹಃ ಎಂದರೆ ಗುಟ್ಟು ಮತ್ತು ಅಂತರ್ಯವೆಂದು ಅರ್ಥ. ರಹೋಯಾಗ ವೆಂದರೆ ಅಂತರ್ಯವಾಗಿ ಒಳಗಡೆಯೇ ಮಾಡುವ ಯಾಗ ಅಥವಾ ಯಜ್ಞ. ನಮ್ಮಲ್ಲಿ ಮೂಲಾಧಾರದಲ್ಲಿ ಗಾರ್ಹಪತ್ಯಾಗ್ನಿಯೂ, ಅನಾಹತ ಚಕ್ರದಲ್ಲಿ ದಕ್ಷಿಣಾಗ್ನಿಯೂ, ಭ್ರೂಮಧ್ಯವೆಂದರೆ ಆಜ್ಞಾಚಕ್ರದಲ್ಲಿ ಆಹವನೀಯಾಗ್ನಿಯೂ ಇರುವುವು. ಈ ಮೂರು ಅಗ್ನಿಗಳನ್ನೂ ಶ್ರೌತಾಗ್ನಿಹೋತ್ರಿಗಳು ಬಾಹ್ಯದಲ್ಲಿ ಆರಾಧಿಸುವಂತೆ ನಮ್ಮಲ್ಲಿಯೇ ಇರುವ ಈ ಮೂರು ಅಗ್ನಿಗಳನ್ನು ಧ್ಯಾನಾಭ್ಯಾಸ ದಿಂದ ಪ್ರಜ್ವಲನೆ ಮಾಡುವುದೇ ಅಂತರ್ಯಾಗ ಅಥವಾ ಒಳಗೇ ಮಾಡುವ ಯಜ್ಞವಾಗಿರುವುದು. ಇಂತಹ ಅಂತರ್ಯಾಗದಿಂದ ಶಿರಸ್ಸಿನಲ್ಲಿ ಸಹಸ್ರಾರ ಕಮಲ ದಲ್ಲಿರುವ ಚಿದಾನಂದರೂಪಳಾದ ಶ್ರೀದೇವಿಯನ್ನು ಉಪಾಸನೆ ಮಾಡುವುದೇ ರಹೋಯಾಗವೆಂದು ಹೆಸರು. ಈ ತತ್ವ ಸಮರ್ಥನೆಗೆ ಪಾಶುಪತ ಬ್ರಹ್ಮೋಪ ನಿಷತ್ತಿನಲ್ಲಿ

> ತ್ರೇತಾಗ್ನ್ಯನುಸಂಧಾನೋ ಯಾಗಃ । ತ್ರೇತಾಗ್ನ್ಯಾತ್ಮಾಕೃತಿ ವರ್ಣೋಂ
> ಕಾರ ಹಂಸಾನು ಸಂಧಾನೋಂತರ್ಯಾಗಃ ॥

ಅಂದರೆ ಗಾರ್ಹಪತ್ಯ, ದಕ್ಷಿಣಾಗ್ನಿ, ಆಹವನೀಯಗಳಾದ ಮೂರು ಅಗ್ನಿಗಳನ್ನು ಬಾಹ್ಯದಲ್ಲಿ ಯಜ್ಞಕ್ರಮದಲ್ಲಿ ಆರಾಧಿಸುವುದೆ ಯಾಗವೆನಿಸಿಕೊಳ್ಳುವುದು. ಈ ಮೂರು ಅಗ್ನಿಗಳೂ ನಮ್ಮ ದೇಹದಲ್ಲಿ ಮೂಲಾಧಾರ, ಅನಾಹತ, ಆಜ್ಞಾಚಕ್ರ ಗಳಲ್ಲಿವೆ. ಈ ಸ್ಥಳಗಳಲ್ಲೇ ಓಂಕಾರದ ವಿವರಣೆಯಾದ ಅ, ಉ, ಮ ಎಂಬುವು ಗಳಿವೆ. ಈ ಮೂರು ಅಗ್ನಿಗಳೂ ಮೂರು ಅಕ್ಷರಗಳು ಏಕತತ್ವದ್ದಾಗಿವೆ. ಆದುದರಿಂದ ಮೂರು ಅಗ್ನಿಗಳ ಅನುಸಂಧಾನವೆಂದರೆ ಅ, ಉ, ಮ ಗಳು ಒಂದಕ್ಕೊಂದು ಕೂಡಿಕ್ಕೊಳ್ಳುವ ಓಂಕಾರೋಪಾಸನೆಯಿಂದ ಸಹಸ್ರಾರ ಕಮಲ ದಲ್ಲಿರುವ ಸಚ್ಚಿದಾನಂದ ಸ್ವರೂಪಿಣಿಯಾದ ಶ್ರೀದೇವಿಯನ್ನು ಸಾಕ್ಷಾತ್ಕರಿಸಿ ಕ್ಕೊಳ್ಳುವುದೇ ರಹೋಯಾಗಕ್ರಮದಿಂದ ಶ್ರೀದೇವಿಯನ್ನು ಆರಾಧಿಸಲ್ಪಡುವು ದಾಗಿದೆ.

ಕೆಳಗಿನ ಶ್ರೀ ಕೃಷ್ಣಪರಮಾತ್ಮನ ಭಗವದ್ಗೀತಾ ವಾಕ್ಯವು ಕೂಡ ರಹೋಯಾಗದ ತತ್ವಕ್ಕೆ ಆಧಾರವಾಗಿರುತ್ತದೆ.

ದೈವಮೇವಾಪರೆ ಯಜ್ಞಂ ಯೋಗಿನಃ ಪರ್ಯುಪಾಸತೇ ।
ಬ್ರಹ್ಮಾಗ್ನಾವಪರೇ ಯಜ್ಞಂ ಯಜ್ಞೇನೈವೋಪ ಜುಹ್ವತಿ ॥

ಅಂದರೆ ಕರ್ಮಯೋಗಿಗಳು ದೇವತೆಗಳ ಸಂಬಂಧವಾದ ಯಜ್ಞವನ್ನೇ ಯಾವಾಗಲೂ ಶ್ರದ್ಧೆಯಿಂದ ಮಾಡುವರು. ಜ್ಞಾನಯೋಗಿಗಳು ಪರಬ್ರಹ್ಮವೆಂಬ ಅಗ್ನಿಯಲ್ಲಿ ತಮ್ಮ ವ್ಯಾಪಾರವನ್ನೆಲ್ಲಾ ಯಜ್ಞಹೋಮದಂತೆ ಲೀನಮಾಡುವರು. ಜ್ಞಾನಯೋಗಿಗಳು ಅನುಷ್ಠಿಸುವ ಯಜ್ಞಕ್ರಮದ ತತ್ವವೇ ರಹೋಯಾಗಕ್ರಮದಿಂದ ಶ್ರೀದೇವಿಯನ್ನು ಆರಾಧಿಸುವುದಾಗಿದೆ.

## ೩೮೨. ರಹಸ್ತರ್ಪಣ ತರ್ಪಿತಾಯೈನಮಃ—

ರಹಸ್ಯವಾಗಿ ಕೊಡುವ ತರ್ಪಣದ ತತ್ವವೇನೆಂದರೆ ಧ್ಯಾನಾಭ್ಯಾಸದಿಂದ ನಮ್ಮಲ್ಲಿರುವ ಓಂಕಾರದ ಅಕಾರ ಉಕಾರ ಮಕಾರಗಳ ತತ್ವಗಳಾದ ಗಾರ್ಹಪತ್ಯ, ದಕ್ಷಿಣ, ಆಹವನೀಯಾಗ್ನಿಗಳು ಜಾಲಂಧರ ಓಡ್ಯಾಣ ಮುದ್ರೆಗಳೊಡನೆ ಮಾಡುವ ಓಂಕಾರೋಪಾಸನೆಯಿಂದ ಪ್ರಜ್ವಲನೆಯಾಗಿ ಅವುಗಳ ಶಾಖವು ಸಹಸ್ರಾರ ಕಮಲದವರೆಗೂ ವ್ಯಾಪಿಸಿ ಅಲ್ಲಿ ಮಂಜಿನಗೆಡ್ಡೆಯಂತಿರುವ ಅಮೃತವು ಕರಗಿ ದೇಹಕ್ಕೆ ಸ್ರವಿಸುವುದು. ಈ ಅಮೃತಧಾರಾರೂಪವಾದ ತರ್ಪಣದಿಂದ ಶ್ರೀಕುಂಡಲಿನೀ ದೇವಿಯು ಸಂತುಷ್ಟಳಾಗುತ್ತಾಳೆ. ಈ ತತ್ವವೇ ರಹಸ್ತರ್ಪಣವೆನಿಸುವುದು.

## ೩೮೩. ಸದ್ಯಃಪ್ರಸಾದಿನ್ಯೈನಮಃ—

೩೭೮ ನೇ ನಾಮದಿಂದ ಇದುವರೆಗೂ ತಿಳಿಸಿರುವ ಜಾಲನ್ಧರ, ಉಡ್ಯಾಣ ಮುದ್ರೆಗಳಿಂದ ಅಂತರ್ಯಾಗ ಕ್ರಮದ ಧ್ಯಾನಾಭ್ಯಾಸದಿಂದ ಬಹು ಜಾಗ್ರತೆಯಾಗಿ ತಕ್ಷಣವೇ ಅಧಿಕಾರಿಗೆ ಬ್ರಹ್ಮಸಾಕ್ಷಾತ್ಕಾರವಾಗುವ ಪ್ರಸಾದವನ್ನು ಶ್ರೀದೇವಿಯು ಅನುಗ್ರಹಿಸುವಳು. ಇದೇ ಸಧ್ಯದಲ್ಲೇ ಶ್ರೀದೇವಿಯು ಪ್ರಸನ್ನಳಾಗಿ ಫಲವನ್ನು ಕೊಡುವುದಾಗಿದೆ. ಜಾಲಂಧರ ಮತ್ತು ಓಡ್ಯಾಣ ಮುದ್ರೆಗಳ ಮಹತ್ತಿನ ವಿಚಾರದಲ್ಲಿ ಶ್ರೀ ಶಂಕರ ಭಗವತ್ಪಾದಾಚಾರ್ಯರವರು ಯೋಗತಾರಾವಳಿಯಲ್ಲಿ

ಜಾಲಂಧರೋಡ್ಯಾಣನ ಮೂಲಬಂಧೈರ್ । ಜಲ್ಪಂತಿಕಂಠೋದರ ಪಾಯುಮೂಲಾನ್ ॥ ಬಂಧತ್ರಯೇಽಸ್ಮಿನ್ಪರಿಚೀಯಮಾನೇ । ಬಂಧಃ ಕುತೋ ದಾರುಣ ಕಾಲಪಾಶಾತ್ ॥

ಅಂದರೆ ಕಂಠ, ಉದರ, ಪಾಯುಸ್ಥಾನಗಳಲ್ಲಿ ಜಾಲಂಧರ, ಉಡ್ಯಾಣ, ಮೂಲ ಬಂಧ ಮುದ್ರೆಗಳೊಡನೆ ಮಾಡುವ ಧ್ಯಾನಾಭ್ಯಾಸವು ಸ್ತ್ರಿಮಿತಕ್ಕೆ ಬಂದರೆ ಕ್ರೂರವಾದ ಯಮಪಾಶವಿಲ್ಲವೆಂದರೆ ಜನನ ಮರಣ ಪ್ರವಾಹರೂಪವಾದ ಬಂಧನ ವಿಲ್ಲದೆ ಮೋಕ್ಷವನ್ನು ಹೊಂದುವನೆಂಬುದನ್ನು ಸೂಚಿಸುತ್ತದೆ. ಈ ಮುದ್ರೆಗಳ ಅಭ್ಯಾಸದಿಂದ ಅಂತಹ ಮಹತ್ವವಿರುವುದರಿಂದಲೇ ಶ್ರೀದೇವಿಯ ಮಹಿಮಾ ವರ್ಣನೆಯಾಗಿ ಸಹಸ್ರನಾಮದಲ್ಲಿ ಬಂದಿರುತ್ತದೆ.

೩೮೪. ವಿಶ್ವಸಾಕ್ಷಿಣ್ಯೈನಮಃ—ಬ್ರಹ್ಮಾಂಡಕ್ಕೆ ಸಾಕ್ಷಿರೂಪದಲ್ಲಿರುವವಳು.

೩೮೫. ಸಾಕ್ಷಿವರ್ಜಿತಾಯೈನಮಃ—

ಶ್ರೀದೇವಿಯ ವ್ಯಾಪಾರಗಳನ್ನು ಸಾಕ್ಷಿರೂಪದಿಂದ ಇದ್ದು ನೋಡತಕ್ಕವರು ಮತ್ತೊಬ್ಬರಿಲ್ಲ. ಆದುದರಿಂದ ಶ್ರೀದೇವಿಗೆ ಸಾಕ್ಷಿವರ್ಜಿತೆ ಎಂದು ಹೆಸರು.

೩೮೬. ಷಡಙ್ಗದೇವತಾಯುಕ್ತಾಯೈನಮಃ—

ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ, ಕಲ್ಪ, ಇವು ನಾದ ಮತ್ತು ಜ್ಞಾನ ಭಂಡಾರವೆನಿಸುವ ವೇದದ ಅಂಗಗಳು. ಈ ವೇದಾಂಗಗಳೆಲ್ಲಾ ಅಭಿಮಾನದೇವತಾ ಶಕ್ತಿಗಳಿಂದ ಕೂಡಿವೆ. ಈ ಆರು ದೇವತಾಶಕ್ತಿಗಳೇ ಶ್ರೀದೇವಿಯ ಅಂಗಶಕ್ತಿಯಾಗಿರುತ್ತವೆ. ಸಹಸ್ರಾರ ಕಮಲಸ್ಥಿತ ಶ್ರೀದೇವಿಗೆ ಮೂಲಾಧಾರಾದಿ ಆರು ಚಕ್ರಗಳೂ ಷಡಂಗಗಳಾಗಿ ಈ ಆರು ಚಕ್ರಗಳಲ್ಲಿರುವ ಅಭಿಮಾನ ದೇವತಾಶಕ್ತಿಗಳು ಆರು ಅಂಗ ದೇವತೆಗಳಾಗಿವೆ.

೩೮೭. ಷಾಡ್ಗುಣ್ಯಪರಿಪೂರಿತಾಯೈನಮಃ—

ಸರ್ವಜ್ಞತ್ವ, ಸರ್ವಾಂತರ್ಯಾಮಿತ್ವ, ಸರ್ವನಿಯಾಮಕತ್ವ, ಸರ್ವಪ್ರೇರಕತ್ವ ಸರ್ವೇಶ್ವರತ್ವ, ಸರ್ವಸ್ರಷ್ಟೃತ್ವ ಈ ಆರು ಗುಣಗಳಿಂದ ಪರಿಪೂರ್ಣಳಾಗಿರುವವಳು ಈಶ್ವರಿಯಾದ ಶ್ರೀದೇವಿಯು. ಐಶ್ವರ್ಯ, ಧರ್ಮ, ಯಶಸ್ಸು, ತೇಜಸ್ಸು, ಜ್ಞಾನ, ವೈರಾಗ್ಯ ಈ ಆರನ್ನೂ ಷಡ್ಗುಣಗಳೆಂದು ಹೇಳುತ್ತಾರೆ.

೩೮೮. ನಿತ್ಯಕ್ಲಿನ್ನಾಯೈನಮಃ—

ಸರ್ವದಾ ಬಹು ಕರುಣಾಸ್ವಭಾವವುಳ್ಳವಳು. ಯಾವಾಗಲೂ ಅಮೃತ ವನ್ನು ಸ್ರವಿಸತಕ್ಕವಳು.

೩೮೯. ನಿರುಪಮಾಯೈನಮಃ—

ತನಗೆ ಸರಿಸಮಾನವಾದವರು ಯಾರೂ ಇಲ್ಲದೆ ತಾನೇ ಮೇಲೆನಿ ಸಿರುವವಳು.

**೩೯೦. ನಿರ್ವಾಣಸುಖದಾಯಿನ್ಯೈನಮಃ—**

ದೇಹವೇ ನಾನೆಂಬ ಬಂಧನದಿಂದ ಸಂಪೂರ್ಣವಾಗಿ ಬಿಡಿಸಿ ಸರ್ವವ್ಯಾಪಿಯಾದ ಪರಮಪದದಲ್ಲಿ ಸ್ಥಿರವಾಗಿರುವ ಕೈವಲ್ಯವನ್ನು ಅನುಗ್ರಹಿಸುವವಳು. ವಿದೇಹಮುಕ್ತಿಯನ್ನು ಕೊಡುವವಳು.

**೩೯೧. ನಿತ್ಯಾಷೋಡಶಿಕಾರೂಪಾಯೈನಮಃ—**

ನಾಶವಿಲ್ಲದ ೧೬ ಸ್ವರಾಕ್ಷರಗಳ ಅಂತರ್ಯವಾದ ಶಕ್ತಿರೂಪಳು. ಪಾಡ್ಯದಾರಭ್ಯ ಪೌರ್ಣಿಮಾದವರೆಗಿನ ೧೫ ದಿನಗಳ ಕಳೆಗಳಿಗೆ ನಿತ್ಯಗಳೆಂದು ಹೆಸರು. ಈ ನಿತ್ಯಕಳೆಗಳೂ ಶ್ರೀದೇವಿಯೂ ಸೇರಿ ೧೬ ನಾಶರಹಿತವಾದ ಶಕ್ತಿಸ್ವರೂಪಳು.

**೩೯೨. ಶ್ರೀಕಣ್ಠಾರ್ಧಶರೀರಿಣ್ಯೈನಮಃ—**

ಪ್ರಪಂಚವನ್ನು ರಕ್ಷಿಸುವದಕ್ಕೋಸ್ಕರ ಈಶ್ವರನು ಶ್ರೀ ಎಂದರೆ ಹಾಲಾಹಲವೆಂಬ ವಿಷವನ್ನು ಕಂಠದಲ್ಲಿ ಧರಿಸಿರುವುದರಿಂದ ಶ್ರೀಕಂಠನೆಂದು ಹೆಸರು ಬಂದಿತು. ಇಂತಹ ಈಶ್ವರನ ಅರ್ಧದೇಹವಾಗಿರುವವಳು. ಈಶ್ವರನ ದೇಹದ ಅರ್ಧವು ಶ್ರೀದೇವಿಯಾಗಿ ಇನ್ನರ್ಧವು ಶಿವನಾಗಿಯೂ ಇರುವುದರಿಂದ ಈಶ್ವರನಿಗೆ ಅರ್ಧನಾರೀಶ್ವರನೆಂದು ಹೆಸರು ಬಂದಿದೆ. ಪ್ರತಿಪ್ರಾಣಿಗಳ ದೇಹದಲ್ಲೂ ಅರ್ಧಭಾಗವು ಪ್ರಕೃತಿಯಾಗಿಯೂ ಅರ್ಧಭಾಗವು ಪುರುಷನಾಗಿಯೂ ಇದೆ.

**೩೯೩. ಪ್ರಭಾವತ್ಯೈನಮಃ—**

ಅಣಿಮಾದಿ ಆವರಣ ದೇವತೆಗಳಿಂದ ಪ್ರಕಾಶಮಾನವಾಗಿರುವವಳು.

**೩೯೪. ಪ್ರಭಾರೂಪಾಯೈನಮಃ—**

ಪ್ರಕಾಶಸ್ವರೂಪವೇ ತಾನಾಗಿರುವವಳು. ಸಕಲ ಪದಾರ್ಥಗಳಲ್ಲಿರುವ ದ್ಯೋತನಾ (ಬೆಳಗುವಿಕೆಯ) ಶಕ್ತಿಸ್ವರೂಪಳು.

**೩೯೫. ಪ್ರಸಿದ್ಧಾಯೈನಮಃ—**

ಪ್ರತಿಯೊಬ್ಬರಲ್ಲೂ "ನಾನು" ಎಂಬ ಶುದ್ಧ ಜ್ಞಾನಸ್ವರೂಪಳೇ ಶ್ರೀದೇವಿಯಾಗಿರುವುದರಿಂದ ಪ್ರತಿಯೊಬ್ಬರಿಗೂ ತಿಳಿದವಳೇ ಆಗಿರುವವಳು. ತಾಯಿ ಎಂಬ ವಸ್ತುವು ಸಕಲರಿಂದಲೂ ತಿಳಿದವಸ್ತುವೇ ಆದ್ದರಿಂದ ಶ್ರೀದೇವಿಯು ಪ್ರಸಿದ್ಧಳಾಗಿರುವಳು.

೩೯೬. ಪರಮೇಶ್ವರ್ಯೈನಮಃ—ಶ್ರೀರಾಜರಾಜೇಶ್ವರೀ ಚಕ್ರವರ್ತಿನಿಯು,

೩೯೭. ಮೂಲಪ್ರಕೃತ್ಯೈನಮಃ—

ಸತ್ವರಜಸ್ತಮೋಗುಣಗಳ ವಿಭಾಗವಿಲ್ಲದೆ ಬ್ರಹ್ಮಾಂಡದ ಸೃಷ್ಟಿಯಿಲ್ಲದೆ ಇರುವಕಾಲದಲ್ಲಿ ಪರಬ್ರಹ್ಮಸ್ವರೂಪದಿಂದ ಉದಯಿಸಿದ ಶಕ್ತಿಮಾತ್ರ ಸ್ವರೂಪ ವಾಗಿರುವುದಕ್ಕೆ ಮೂಲಪ್ರಕೃತಿ ಎಂದು ಹೆಸರು. ಇಂತಹ ಸ್ವರೂಪಿಣಿಯು. ಈ ಶಕ್ತಿಯನ್ನು ವರ್ಣಿಸಲು ಸಾಧ್ಯವಿಲ್ಲ.

೩೯೮. ಅವ್ಯಕ್ತಾಯೈನಮಃ—

ಮೇಲೆ ತಿಳಿಸಿದ ಮೂಲಪ್ರಕೃತಿಯು ವ್ಯಕ್ತವಾಗಿ ಗೋಚರವಾಗುವದಿಲ್ಲ ವಾದ್ದರಿಂದ ಅವ್ಯಕ್ತವೆನಿಸುವುದು.

೩೯೯. ವ್ಯಕ್ತಾವ್ಯಕ್ತಸ್ವರೂಪಿಣ್ಯೈನಮಃ—

ಗೋಚರವಾಗುವ ಸ್ಥೂಲ ಸ್ವರೂಪವೂ ಕಾಣಿಸದೇ ಇರುವ ಅವ್ಯಕ್ತ ಶಕ್ತಿಯೂ ಶ್ರೀದೇವಿಯಾಗಿರುತ್ತಾಳೆ.

೪೦೦. ವ್ಯಾಪಿನ್ಯೈನಮಃ—

ಎಲ್ಲಾ ಕಡೆಯಲ್ಲೂ ಅಂತರ್ಯಾಮಿಯಾಗಿ ವ್ಯಾಪಿಸಿರುವವಳು.

೪೦೧. ವಿವಿಧಾಕಾರಾಯೈನಮಃ—

ಬ್ರಹ್ಮಾಂಡದಲ್ಲಿರುವ ಸಕಲಸ್ವರೂಪವೂ ಶ್ರೀದೇವಿಯೇ.

೪೦೨. ವಿದ್ಯಾವಿದ್ಯಾಸ್ವರೂಪಿಣ್ಯೈನಮಃ—

ವಿದ್ಯೆಯೆಂದರೆ ಜ್ಞಾನ. ಅವಿದ್ಯೆಯೆಂದರೆ ಅಜ್ಞಾನ. ಮೋಕ್ಷಮಾರ್ಗಕ್ಕೆ ಸಾಧಕವಾದ ತಿಳುವಳಿಕೆಯನ್ನುಂಟುಮಾಡುವುದು ವಿದ್ಯೆಯೆನಿಸಿಕೊಳ್ಳುವುದು. ಪ್ರಾಪಂಚಿಕ ವ್ಯವಹಾರದ ತಿಳುವಳಿಕೆಯನ್ನುಂಟುಮಾಡುವುದು ಅವಿದ್ಯೆಯೆನಿಸಿ ಕೊಳ್ಳುವುದು. ವಿದ್ಯೆಯಲ್ಲಿ ಪರಾವಿದ್ಯೆಯೆಂದೂ ಅಪರಾವಿದ್ಯೆಯೆಂದೂ ಎರಡು ಭೇದ. ದೇವತಾರಾಧನ ರೂಪವಾದ ಕರ್ಮಕಾಂಡದ ತಿಳುವಳಿಕೆಯನ್ನುಂಟು ಮಾಡುವುದು ಅಪರವಿದ್ಯೆಯು. ಪರಬ್ರಹ್ಮ ಸಾಕ್ಷಾತ್ಕಾರಕ್ಕೆ ಸಾಧಕವಾದ ವಿದ್ಯೆಯು ಪರವಿದ್ಯೆಯು. ಆದುದರಿಂದ ಒಟ್ಟಿನಲ್ಲಿ ಕರ್ಮಜ್ಞಾನ ಸಾಧಕವಾದ ತಿಳುವಳಿಕೆಯನ್ನುಂಟು ಮಾಡುವುದು ವಿದ್ಯೆಯೆನಿಸಿಕೊಳ್ಳುವುದು. ಇದು ಸತ್ವ ಗುಣ ಪ್ರಧಾನವಾದುದು. ಪ್ರಾಪಂಚಿಕ ವ್ಯವಹಾರದ ತಿಳುವಳಿಕೆಯನ್ನುಂಟು

ಮಾಡುವುದು ಅವಿದ್ಯೆಯೆನಿಸುವುದು. ಅವಿದ್ಯೆಯು ರಜಸ್ತಮೋಗುಣ ಪ್ರಧಾನ ವಾದುದು. ಇಂತಹ ವಿದ್ಯಾ ಅವಿದ್ಯಾಸ್ವರೂಪಗಳೂ ಶ್ರೀದೇವಿಯೆ.

**೪೦೩. ಮಹಾಕಾಮೇಶನಯನ ಕುಮುದಾಹ್ಲಾದ ಕೌಮುದ್ಯೈನಮಃ—**

ನೀಲವರ್ಣವಾಗಿ ನೀರಿನಲ್ಲಿ ಬೆಳೆಯುವ ಕನ್ನೈದಿಲೆ ಪುಷ್ಪದಂತೆ ಇರುವ ಈಶ್ವರನ ನೇತ್ರಕ್ಕೆ ಶ್ರೀದೇವಿಯು ಪೂರ್ಣಚಂದ್ರಿಕೆಯಂತೆ ಆಹ್ಲಾದಕರಳಾಗಿರು ವಳು. ತಾವರೇ ಪುಷ್ಪಕ್ಕೆ ಸೂರ್ಯನನ್ನು ಕಂಡರೆ ಬಹು ಆಹ್ಲಾದ. ಕನ್ನೈದಿಲೆ ಪುಷ್ಪಕ್ಕೆ ಚಂದ್ರನನ್ನು ಕಂಡರೆ ಆಹ್ಲಾದ.

**೪೦೪. ಭಕ್ತಹಾರ್ದ ತಮೋಭೇದ ಭಾನುಮದ್ಭಾನುಸಂತತ್ಯೈನಮಃ—**

ಭಕ್ತರ ಹೃದಯದಲ್ಲಿ ವ್ಯಾಪಿಸಿರುವ ಅಂಧಕಾರಸ್ವರೂಪವಾದ ತಮಸ್ಸಿನ ಆವರಣವನ್ನು ಪರಿಹರಿಸಲು ಪ್ರಕಾಶಮಾನವಾದ ಸೂರ್ಯಕಿರಣದೋಪಾದಿ ಯಲ್ಲಿರುವವಳು. ಅಂದರೆ ಭಕ್ತರಲ್ಲಿರುವ ಅಜ್ಞಾನವನ್ನು ಹೋಗಲಾಡಿಸುವವಳು.

**೪೦೫. ಶಿವದೂತ್ಯೈನಮಃ—**

ಶುಂಭ ನಿಶುಂಭರನ್ನು ಕೊಲ್ಲಲು ಶ್ರೀದೇವಿಯು ಸೇನಾಸನ್ನದ್ಧಳಾಗಿ ಹಿಮ ವತ್ಪರ್ವತದ ತಪ್ಪಲಿನಲ್ಲಿ ಶುಂಭ ನಿಶುಂಭರ ಸೈನ್ಯವನ್ನು ಸಂಧಿಸಿದಾಗ ಶಿವನನ್ನು ರಾಯಭಾರಿಯನ್ನಾಗಿ ಕಳುಹಿಸಿದ ಕಾರಣ ಶಿವನು ಭಗವತಿಗೆ ದೂತನಾದನೆಂದು ಶ್ರೀ ದೇವೀಭಾಗವತ ಮತ್ತು ಮಾರ್ಕಂಡೇಯ ಪುರಾಣಗಳಲ್ಲಿ ಹೇಳಿದೆ. ಆದುದ ರಿಂದ ಶಿವನೇ ದೂತನಾಗುಳ್ಳವಳು.

**೪೦೬. ಶಿವಾರಾಧ್ಯಾಯೈನಮಃ—**

ಈಶ್ವರನಿಂದ ಅರ್ಚಿಸಲ್ಪಡುವವಳು. (ಪರಬ್ರಹ್ಮತ್ವೇನ ಈಶ್ವರನಿಗೆ ಶ್ರೀದೇವಿಯು ಪೂಜಾರ್ಹಳು. ಶ್ರೀದೇವಿಗೆ ಈಶ್ವರನು ಪೂಜಾರ್ಹನು).

**೪೦೭. ಶಿವಮೂರ್ತ್ಯೈನಮಃ—**

ಈಶ್ವರ ಸ್ವರೂಪಿಯಾಗಿರುವವಳು. (ಪರಬ್ರಹ್ಮವೇ ಈಶ್ವರನಾಗಿಯೂ ಶ್ರೀದೇವಿಯಾಗಿಯೂ ಇರುವುದು.) ಮಂಗಳಕರವಾದ ರೂಪವುಳ್ಳವಳು.

**೪೦೮. ಶಿವಙ್ಕರ್ಯೈನಮಃ—**ಸೌಖ್ಯವನ್ನುಂಟು ಮಾಡುವವಳು.

**೪೦೯. ಶಿವಪ್ರಿಯಾಯೈನಮಃ—**

ಈಶ್ವರನಿಂದ ಪ್ರೀತಿಸಲ್ಪಡುವವಳು ಮತ್ತು ಈಶ್ವರನನ್ನು ಪ್ರೀತಿಸುವವಳು.

**೪೧೦. ಶಿವಪರಾಯೈನಮಃ—**

ಈಶ್ವರನಿಗಿಂತ ಶ್ರೇಷ್ಠಳಾದವಳು. ಅಂದರೆ ಪರಬ್ರಹ್ಮ ಸ್ವರೂಪಿಣಿಯು. ಈಶ್ವರನಲ್ಲಿ ಸರ್ವದಾ ಆಸಕ್ತಿಯುಳ್ಳವಳು.

**೪೧೧. ಶಿಷ್ಟೇಷ್ಟಾಯೈನಮಃ—**

ಸದಾಚಾರ ಸಂಪನ್ನರೂ ಜ್ಞಾನಾವಲಂಬಿಗಳೂ ಸಾತ್ವಿಕರೂ ಆದ ಭಕ್ತರಿಂದ ಅಪೇಕ್ಷಿಸಲ್ಪಡುವವಳು.

**೪೧೨. ಶಿಷ್ಟಪೂಜಿತಾಯೈನಮಃ—**

ನಿಯಮವಂತರೂ ಜ್ಞಾನಾವಲಂಬಿಗಳೂ ಸಾತ್ವಿಕರೂ ಆದ ಭಕ್ತರಿಂದ ಪೂಜಿಸಲ್ಪಡುವವಳು. ಜ್ಞಾನಾವಲಂಬನವಿಲ್ಲದ ನಿಷ್ಠರಾದ ಕರ್ಮಮಾರ್ಗದಲ್ಲಿರುವವರಿಂದಲೂ ಪೂಜಿಸಲ್ಪಡುವವಳು.

**೪೧೩. ಅಪ್ರಮೇಯಾಯೈನಮಃ—**

ಕಾಲದೇಶಗಳ ಅಳತೆಗೆ ಒಳಪಡದೇ ಇರುವವಳು. ಸರ್ವರೂ ಯಾವುದನ್ನು ಹೊಂದಬೇಕೋ ಅದರಲ್ಲಿ ನೆಲಸಿರುವವಳು.

**೪೧೪. ಸ್ವಪ್ರಕಾಶಾಯೈನಮಃ—**

ಇತರ ಯಾವ ಬೆಳಕಿನಿಂದಲೂ ಪ್ರಕಾಶಪಡಿಸಿಕ್ಕೊಳ್ಳದೆ ತಾನೇ ಸ್ವಯಂ ಪ್ರಕಾಶಳಾಗಿರುವವಳು.

**೪೧೫. ಮನೋವಾಚಾಮಗೋಚರಾಯೈನಮಃ—**

ಮನಸ್ಸಿಗೂ ಮಾತಿಗೂ ಅಗೋಚರವಾಗಿರುವವಳು. "ಯತೋವಾಚೋ ನಿವರ್ತಂತೆ ಅಪ್ರಾಪ್ಯಮನಸಾಸಹ" ಎಂಬ ಶ್ರುತಿಪ್ರಮಾಣ.

**೪೧೬. ಚಿಚ್ಛಕ್ತ್ಯೈನಮಃ—**

ಜ್ಞಾನಶಕ್ತಿಸ್ವರೂಪಳು. ಪ್ರಕಾಶಕ್ಕೂ ಶಕ್ತಿಕೊಡುವ ಸ್ವರೂಪಳು.

**೪೧೭. ಚೇತನಾರೂಪಾಯೈನಮಃ—**

ಸಕಲ ಶಕ್ತಿಗಳಿಗೂ ಮೂಲವಾದ ಪರಬ್ರಹ್ಮಸ್ವರೂಪಿಣಿಯು. ಕ್ರಿಯಾಶಕ್ತಿ ಸ್ವರೂಪಳು.

**೪೧೮. ಜಡಶಕ್ತ್ಯೈನಮಃ—**

ಜಡಪದಾರ್ಥಗಳನ್ನುಂಟುಮಾಡುವ ತಮೋಗುಣದ ಶಕ್ತಿಸ್ವರೂಪಿಣಿಯು.

**೪೧೯. ಜಡಾತ್ಮಿಕಾಯೈನಮಃ**—ಜಡವಾದ ವಸ್ತುಸ್ವರೂಪಿಣಿಯು.

**೪೨೦. ಗಾಯತ್ರ್ಯೈನಮಃ—**

ವೇದಜನನಿಯಾಗಿಯೂ ೨೪ ಬೀಜಾಕ್ಷರಗಳ ತತ್ವಗಳುಳ್ಳ ಮಂತ್ರಸ್ವರೂಪ ಳಾಗಿಯೂ, ಪರಾ, ಪಶ್ಯಂತೀ, ಮಧ್ಯಮಾ, ವೈಖರೀ ಸ್ವರೂಪಗಳಿಂದಿರುವ ಓಂಕಾರಗಾನದಿಂದ ಉಪಾಸಿಸುವವರನ್ನು ಕಾಪಾಡತಕ್ಕವಳಾಗಿಯೂ ಇರುವ ಶ್ರೀ ಗಾಯತ್ರೀ ಸ್ವರೂಪವೂ ಶ್ರೀಲಲಿತಾ ದೇವಿಯಾಗಿರುತ್ತಾಳೆ. ಅಂದರೆ ಶ್ರೀ ಗಾಯತ್ರೀಗೂ ಶ್ರೀ ಲಲಿತೆಗೂ ಭೇದವಿಲ್ಲ.

**೪೨೧. ವ್ಯಾಹೃತ್ಯೈನಮಃ—**

ವ್ಯಾಹೃತಿಯೆಂದರೆ ಉಚ್ಚರಿಸು ಎಂದರ್ಥವಾಗಿ ನಾದಬ್ರಹ್ಮದ ಶಕ್ತಿಗಳಾಗಿ ಸಪ್ತವ್ಯಾಹೃತಿಗಳಾದ ಭೂಃ, ಭುವಃ, ಸುವಃ, ಮಹಃ, ಜನಃ, ತಪಃ ಸತ್ಯಂ ಎಂಬುವುಗಳಾಗಿವೆ, ಈ ಸಪ್ತ ವ್ಯಾಹೃತಿಗಳೂ ಶ್ರೀದೇವಿಯ ಅವತಾರಗಳಾದ ಬ್ರಾಹ್ಮಿ, ಮಾಹೇಶ್ವರಿ, ಕೌಮಾರಿ, ವೈಷ್ಣವಿ, ವಾರಾಹಿ, ಇಂದ್ರಾಣಿ, ಚಾಮುಂಡಾಂಬಾ ಅವತಾರಗಳ ಶಕ್ತಿಗಳಾಗಿವೆ. ಈ ಸಪ್ತ ವ್ಯಾಹೃತಿಗಳ ಶಕ್ತಿಗಳೇ ಪಂಚಭೂತಗಳ, ಸಪ್ತಲೋಕಗಳ, ಸಪ್ತಗಾನಸ್ವರಗಳ ಮತ್ತು ೫೦ ಅಕ್ಷರಗಳ ಶಕ್ತಿಗಳಾಗಿವೆ. ಇಂತಹ ಸಪ್ತವ್ಯಾಹೃತಿ ಸ್ವರೂಪವೂ ಶ್ರೀಲಲಿತಾ ದೇವಿಯಾಗಿರುತ್ತಾಳೆ.

**೪೨೨. ಸನ್ಧ್ಯಾಯೈನಮಃ—**

ಸೃಷ್ಟಿಸಿದ ಜಗತ್ತನ್ನು ಧರಿಸಿರುವ ಆದಿಶೇಷ ಶಕ್ತಿಯಾಗಿಯೂ, ನಮ್ಮ ದೇಹವನ್ನು ಧರಿಸಿರುವ ಕುಂಡಲಿನೀ ಶಕ್ತಿಯಾಗಿಯೂ ದೈನಂದಿನದಲ್ಲಿ ಸ್ವಾಭಾವಿಕ ವಾಗಿ ಶಾಂತವಾಗಿರುವ ಪ್ರಾತಃ ಸಾಯಂಕಾಲಗಳ ಮಧ್ಯಕಾಲಗಳಲ್ಲಿರುವ ಶುದ್ಧ ಸತ್ವಗುಣದ ಶಕ್ತಿಯಾಗಿಯೂ ಇರುವುದೇ ಸಂಧ್ಯಾಶಕ್ತಿಯಾಗಿರುವುದು. ಇಂತಹ ಸಂಧ್ಯಾಶಕ್ತಿ ಸ್ವರೂಪಿಣಿಯೂ ಶ್ರೀ ಲಲಿತಾದೇವಿಯಾಗಿರುತ್ತಾಳೆ.

ಗಾಯತ್ರಿ ವ್ಯಾಹೃತಿ ಸನ್ಧ್ಯಾತತ್ವಗಳು ಬಹುಗಹನವಾದ ವಿಚಾರಗಳು. ಸನ್ಧ್ಯಾಶಕ್ತಿಯೇ ಶ್ರೀ ಕುಂಡಲಿನೀ ಶಕ್ತಿ. ಇವುಗಳ ವಿವರವನ್ನು ಸನ್ಧ್ಯಾ ತತ್ವಾರ್ಥ, ಸರಸ್ವತೀ ಮಹಿಮಾಗ್ರಂಥಗಳನ್ನು ಪಠಿಸಿ ತಿಳಿದುಕೊಳ್ಳಬಹುದು.

೪೧೯ ನೇ ನಾಮದಿಂದ ೪೨೭ ನೇ ನಾಮದವರೆಗೂ ಶ್ರೀ ಗಾಯತ್ರೀ ಶ್ರೀ ಸಂಧ್ಯಾ ದೇವಿಯರ ಮಹಿಮೆಯನ್ನು ಪ್ರತಿಪಾದಿಸುವುದು.

**೪೨೩. ದ್ವಿಜಬೃನ್ದ ನಿಷೇವಿತಾಯೈನಮಃ—**

ಉಪನಯನ ಸಂಸ್ಕಾರದಿಂದ ಲಬ್ಧವಾದ ದ್ವಿಜತ್ವವುಳ್ಳ ಸಕಲರಿಂದಲೂ ಪೂಜಿಸಲ್ಪಡುವವಳು ಮತ್ತು ಉಪಾಸಿಸಲ್ಪಡುವವಳು.

**೪೨೪. ತತ್ತ್ವಾಸನಾಯೈನಮಃ—**

ತತ್ವಾಸನ ಎಂಬುದನ್ನು ಬಿಡಿಸಿದರೆ ತತ್ವ+ಆಸನ ಆಗುವುದು. ಅಂದರೆ ಪಂಚಭೂತಗಳಾದಿಯಾಗಿ ಬ್ರಹ್ಮಾಂಡದಲ್ಲಿರುವ ಸಕಲ ತತ್ವಗಳಲ್ಲೂ ನೆಲಸಿರುವವಳು. ತತ್ವ ಎಂದರೆ ನಿಶ್ಚಯಿಸಲ್ಪಟ್ಟ ಸಾರಭೂತವಾದುದಕ್ಕೆ ತತ್ವವೆಂದೂ ಅರ್ಥ. ಹೀಗೆ ಸಾರಭೂತವಾಗಿ ನಿಶ್ಚಯಿಸಲ್ಪಟ್ಟಿರುವುದೇ ತತ್‌ಪ್ರತಿಪಾದ್ಯವಾದ ಪರಬ್ರಹ್ಮವು. ಅಂದರೆ ಶ್ರೀ ಗಾಯತ್ರೀ ದೇವಿಯು ತತ್ ಪ್ರತಿಪಾದ್ಯವಾದ ಪರಬ್ರಹ್ಮ ಸ್ವರೂಪವೇ ಆಗಿ ಅಲ್ಲಿ ನೆಲೆಸಿರುವವಳೆಂದು ಅರ್ಥ. ಅಲ್ಲದೆ ಗಾಯತ್ರೀ ಮಂತ್ರದ ಮೊದಲನೇ ಪದವೇ ತತ್ ಎಂಬುದಾಗಿದೆ. ಇಂತಹ ತತ್ ಪದವೇ ಬೀಜವೆಂದರೆ ಆಸನವಾಗಿ ಇದರ ಆಧಾರದ ಮೇಲೆ ವೃಕ್ಷ ಸ್ವರೂಪವಾದ ಗಾಯತ್ರೀ ವಿರಾಟ್ ಸ್ವರೂಪವನ್ನು ಪ್ರತಿಪಾದಿಸುವ "ಸವಿತುಃ ವರೇಣಿಯಂ ಭರ್ಗಃ ದೇವಸ್ಯ ಧೀಮಹಿ ಧಿಯೋಯೋನಃ ಪ್ರಚೋದಯಾತ್" ಎಂಬುದು ಇರುವುದನ್ನು ಪ್ರತಿಪಾದಿಸುವುದು. ಇದೇ ತತ್ವಾಸನಾ ಎಂಬುದರ ತತ್ವ. ಶ್ರೀ ಲಲಿತಾದೇವಿಯೂ ಈ ಸ್ವರೂಪದವಳೇ ಆಗಿರುವವಳು.

**೪೨೫. ತಸ್ಮೈನಮಃ—**

ತತ್ + ನಮಃ=ತಸ್ಮೈನಮಃ ಎಂದಾಗುವುದು. ಅಂದರೆ ತತ್ = ಅದು ಎಂದು ವಸ್ತುವಾಚಕವಾದ ಸರ್ವನಾಮ ನಪುಂಸಕ ಲಿಂಗದಲ್ಲಿ ಪರಬ್ರಹ್ಮವೇ ಎಂದು ಕರೆದರೂ ಪರಬ್ರಹ್ಮ ಸ್ವರೂಪಿಣಿಯಾದ ಶ್ರೀ ಗಾಯತ್ರೀ ದೇವಿಯೇ ಆಗಿರುತ್ತಾಳೆ. ಇವಳೇ ಶ್ರೀ ಲಲಿತಾದೇವಿಯು.

**೪೨೬. ತುಭ್ಯಂನಮಃ—**

ತುಭ್ಯಂ - ನಿನಗೆ, ನಮಃ - ನಮಸ್ಕಾರವು. ಶ್ರೀ ಲಲಿತಾ ಸಹಸ್ರನಾಮ ಶ್ಲೋಕದಲ್ಲಿ ತ್ವಂ ಎಂಬ ಪದವಿದೆ. ಇದಕ್ಕೆ ನಮಃ ಸೇರಿಸಿದರೆ ತುಭ್ಯಂ ನಮಃ ಆಗುವುದು. ನಮಶ್ಶಬ್ದದ ಯೋಗವಿದ್ದಲ್ಲಿ ಚತುರ್ಥೀ ವಿಭಕ್ತಿಯ ಏಕವಚನದಲ್ಲಿ ತುಭ್ಯಂ ಎಂದು ರೂಪವಾಗುವುದು. ನಿನಗೆ ನಮಸ್ಕಾರವೆಂದು ಹೇಳಿದರೆ

ಪುರುಷನಿಗಾದರೂ ಆಗಬಹುದು. ಸ್ತ್ರೀಗಾದರೂ ಆಗಬಹುದು. ಅಂದರೆ ಸ್ತ್ರೀ ಲಿಂಗದಿಂದ ಪರಬ್ರಹ್ಮ ಸ್ವರೂಪಿಣಿ ಅಥವಾ ಪುಲ್ಲಿಂಗದಿಂದ ಪರಬ್ರಹ್ಮನೆ ಎಂದು ಸ್ತ್ರೀಲಿಂಗ ಪುಲ್ಲಿಂಗಗಳಿಂದ ಕರೆದರೂ ಪರಾತ್ಪರವಾದ ಒಂದು ವಸ್ತುವಿಗೆ ಅನ್ವಯವೇ ಹೊರತು ಎರಡಿಲ್ಲ. ಹಿಂದಿನ ನಾಮದಲ್ಲಿ ತತ್ ಎಂದರೆ ಅದು ಎಂದು ವಸ್ತುವಾಚಕವಾದ ಸರ್ವನಾಮ ನಪುಂಸಕ ಲಿಂಗದಲ್ಲಿ ಪರಬ್ರಹ್ಮವೆ ನಿನಗೆ ನಮಸ್ಕಾರ ಎಂದು ಹೇಳಲ್ಪಟ್ಟಿತು. ಈ ನಾಮದಲ್ಲಿ ಸ್ತ್ರೀಲಿಂಗ ಪುಲ್ಲಿಂಗ ಗಳಿಂದ ಹೇಳಲ್ಪಟ್ಟಿತು. ಮುಖ್ಯವಾಗಿ ಪರಬ್ರಹ್ಮವೆ ಎಂದು ನಪುಂಸಕಲಿಂಗದಲ್ಲಿ ಕರೆದರೂ ಪರಬ್ರಹ್ಮನೆ ಎಂದು ಪುಲ್ಲಿಂಗದಲ್ಲಿ ಕರೆದರೂ ಪರಬ್ರಹ್ಮ ಸ್ವರೂಪಿಣಿಯೇ ಎಂದು ಸ್ತ್ರೀಲಿಂಗದಲ್ಲಿ ಕರೆದರೂ ಎಲ್ಲವೂ ಒಂದಕ್ಕೇ ಅನ್ವಯವಾಗಿ ಇರುವುದು ಒಂದು ಪರಾತ್ಪರ ವಸ್ತುವೇ ಹೊರತು ಎರಡಿಲ್ಲವೆಂಬುದನ್ನು ಪ್ರತಿಪಾದಿಸುವುದು. ವ್ಯವಹಾರಕ್ಕೋಸ್ಕರ ಯಾವ ಲಿಂಗದಲ್ಲಿ ಕರೆದರೂ ಒಂದಕ್ಕೇ ಅನ್ವಯ ವಾಗುವುದು.

ಅಲ್ಲದೆ ಹಿಂದಿನ ಮತ್ತು ಈ ನಾಮಗಳೆರಡೂ ಸೇರಿ ಅಮೋಘವಾದ ಇನ್ನೊಂದು ತತ್ವವನ್ನು ಹೊರಸೂಸುವುದು. ಹಿಂದಿನ ತತ್ ನಾಮದ ಪ್ರಥಮ ಪುರುಷರೂಪವು ಈ ನಾಮದ ತುಭ್ಯಂ (ತ್ವಂ) ಎಂಬ ಮಧ್ಯಮ ಪುರುಷರೂಪವೂ ಶ್ರೀ ಭಗವತಿಯ ಚೈತನ್ಯವಿಶಿಷ್ಟಗಳಾದ ತತ್ ಯುಷ್ಮತ್ ಶಬ್ದ ಬೋಧಕ ಗಳಾಗಿರುತ್ತವೆ. ಈ ಎರಡು ನಾಮಗಳನ್ನು ಒಂದರ ಹಿಂದೆ ಇನ್ನೊಂದು ಬರುವ ರೀತಿಯಲ್ಲಿ ಶ್ರೀ ಮಹಾವಿಷ್ಣುವು ಅಗಸ್ತ್ಯರಿಗೆ ಉಪದೇಶಿಸಿದ ಉದ್ದೇಶವೇನಿರ ಬಹುದೆಂದು ಪರ್ಯಾಲೋಚಿಸಿದರೆ ತತ್ (ಪರಬ್ರಹ್ಮ), ತ್ವಂ (ಜೀವ) ಗಳಾದ ಜೀವಬ್ರಹ್ಮರಿಗೆ ಅಭೇದವನ್ನು ಬೋಧಿಸುವ ತತ್ವಮಸಿ ಮಹಾವಾಕ್ಯದ ಸಾರ ಬೋಧಕವೇ ಹೊರತು ಮತ್ತೆ ಬೇರೆಯಲ್ಲವೆಂಬುದು ಸ್ಥೂಲಾಕಾರವಾಗಿ ನೋಡ ತಕ್ಕವರಿಗೂ ಕೂಡ ಹೊಳೆಯದೇ ಇರಲಾರದು

**೪೨೭. ಅಯ್ಯೈನಮಃ—**

ಅಯೀ+ಐ+ನಮಃ= ಅಯ್ಯೈನಮಃ ಎಂದಾಗುವುದು. ಅಯೀ ಎನ್ನು ವದು ಸಂಬೋಧನೆಯ (ಎಲೋ) ಚಿಹ್ನೆಯನ್ನು ಸೂಚಿಸುತ್ತದೆ. ಅಂದರೆ ಮೇಲಿನ ಎರಡು ನಾಮಗಳಲ್ಲಿ ತಿಳಿಸಿರುವಂತೆ ಪರಬ್ರಹ್ಮವೆ ಎಂದು ನಪುಂಸಕ ಲಿಂಗದಲ್ಲಿ ಕರೆದರೂ ಪರಬ್ರಹ್ಮಸ್ವರೂಣಿಯೆ ಎಂದು ಸ್ತ್ರೀಲಿಂಗದಲ್ಲಿ ಕರೆದರೂ ಪರಬ್ರಹ್ಮನೇ ಎಂದು ಪುಲ್ಲಿಂಗದಲ್ಲಿ ಕರೆದರೂ ಇರುವುದು ಒಂದೇ ಕಣೋ ಎಂದು ಸಂಬೋಧಿಸಿ ಹೇಳುವುದನ್ನು ಪ್ರತಿಪಾದಿಸುವುದು. ಅಲ್ಲದೆ ತತ್‌ತ್ವಂ ಅದು ನೀನೇಕಣೋ ಎಂದು ಸಂಬೋಧಿಸಿ ಹೇಳುವುದಾಗಿದೆ. ಅಂದರೆ ಯಾವ ಲಿಂಗ

ದಲ್ಲಿ ಕರೆದರೂ ಪರಾತ್ಪರವಾದ ಒಂದಕ್ಕೇ ಅನ್ವಯವೆಂಬುದರಲ್ಲಿ ಸಂಶಯವೇ ಬೇಡ. ಅಲ್ಲದೇ ಆಪರಾತ್ಪರ ವಸ್ತುವೇ ನೀನೆಂಬುದರಲ್ಲೂ ಸಂಶಯವೇ ಬೇಡ ಎಂಬುದಾಗಿ ಸಂಶಯ ನಿವಾರಣೆಗೋಸ್ಕರ ಒತ್ತಿಹೇಳುವ ಸಂಬೋಧನಾ ರೂಪವಾಗಿರುವುದು ಈ ರೀತಿ ಸಂಶಯ ಪರಿಹಾರಕವಾಗಿ ಒತ್ತಿಹೇಳುವ ಸಂಬೋಧನಾ ಸ್ವರೂಪವೂ ಶ್ರೀದೇವಿಯಾಗಿರುತ್ತಾಳೆ.

**೪೨೮. ಪಂಚಕೋಶಾನ್ತರಸ್ಥಿತಾಯೈನಮಃ—**

ಪಂಚಕೋಶಗಳ ಒಳಗೆ ಇರುವವಳು. ಸ್ಥೂಲದೇಹವೇ ಅನ್ನಮಯ ಕೋಶ. ಇದರೊಳಗೆ ಪ್ರಾಣಮಯ ಕೋಶ. ಪ್ರಾಣಮಯ ಕೊಶಕ್ಕೂ ಒಳಗೆ ಮನೋಮಯಕೋಶ. ಮನೋಮಯ ಕೋಶದ ಒಳಗೆ ವಿಜ್ಞಾನಮಯ ಕೋಶ. ವಿಜ್ಞಾನದ ಒಳಗಡೆ ಆನಂದಮಯ ಕೋಶಗಳು ಒಂದು ಚೀಲದೊಳಗೆ ಮತ್ತೊಂದು ಚೀಲವಿರುವಂತೆ ಇವೆ. ಇದೇ ಹೃದಯ· ಈ ೫ ಕೋಶಗಳ ಒಳಗೆ ಇರುವ ಸಹಸ್ರಾರ ಕಮಲ ಅಥವಾ ದಹರಾಕಾಶದಲ್ಲಿ ಶ್ರೀದೇವಿಯು ಇರುವಳು.

**೪೨೯. ನಿಸ್ಸೀಮಮಹಿಮ್ನೇನಮಃ—**

ಅಪಾರವಾದ ಹೇಳಲು ಸಾಧ್ಯವಾಗದಷ್ಟು ಮಹಿಮೆಯುಳ್ಳವಳು.

**೪೩೦. ನಿತ್ಯಯೌವನಾಯೈನಮಃ—**

ಸದಾಕಾಲದಲ್ಲಿಯೂ ಶಾಶ್ವತವಾದ ಪ್ರಾಯಯುಕ್ತಳಾಗಿರುವವಳು.

**೪೩೧. ಮದಶಾಲಿನ್ಯೈನಮಃ—**

ಬಹುದರ್ಪ ಮತ್ತು ಪ್ರೌಢಿಮೆಯಿಂದಕೂಡಿದ ಕಾಂತಿಯುಳ್ಳವಳು. (ಮದವೆಂದರೆ ಉನ್ಮತ್ತಸ್ವಭಾವವಲ್ಲ).

**೪೩೨. ಮದಘೂರ್ಣಿತರಕ್ತಾಕ್ಷ್ಯೈನಮಃ—**

ದುಷ್ಟರಾದ ರಾಕ್ಷಸರ ನಿಗ್ರಹಕಾಲದಲ್ಲಿ ಬಹುದರ್ಪ ಮತ್ತು ಪ್ರೌಢಿಮೆಯ ಪ್ರಕಾಶದಿಂದ ತಿರುಗುತ್ತಿರುವ ಕೆಂಪಾದ ಕಣ್ಣುಗಳುಳ್ಳವಳು.

**೪೩೩. ಮದಪಾಟಲ ಗಣ್ಡಭುವೇನಮಃ—**

ಬಹುದರ್ಪ ಮತ್ತು ಪ್ರೌಢಿಮೆಯನ್ನು ಸೂಚಿಸುವ ಎಳೆಗೆಂಪು ವರ್ಣದ ಕಾಂತಿಯಿಂದ ಉಜ್ವಲಿಸುವ ಕೆನ್ನೆಗಳುಳ್ಳವಳು.

**೪೩೪. ಚನ್ದನದ್ರವ ದಿಗ್ಧಾಂಗ್ಯೈನಮಃ—**

ಶ್ರೀಗಂಧ ಮುಂತಾದ ಸುವಾಸನಾ ದ್ರವ್ಯಗಳಿಂದ ಲೇಪನಮಾಡಲ್ಪಟ್ಟ ದೇಹವುಳ್ಳವಳು.

**೪೩೫. ಚಾಮ್ಪೇಯ ಕುಸುಮಪ್ರಿಯಾಯೈನಮಃ—**

ಸಂಪಿಗೇ ಹುವ್ವಿನಲ್ಲಿ ಬಹುಪ್ರೀತಿಯುಳ್ಳವಳು. ನಾಗರಹಾವಿಗೆ ಸಂಪಿಗೆ ಹುವ್ವಿನ ವಾಸನೆಯು ಬಹು ಪ್ರೀತಿ. ಶ್ರೀಕುಂಡಲಿನೀ ಶಕ್ತಿಯು ನಾಗಮಾತೆ ಯಾಗಿರುವಳಾದ್ದರಿಂದ ಚಂಪಕಾಪುಷ್ಪದ ತತ್ವವಾದ ಓಂಕಾರನಾದಾನಂದ ದಲ್ಲಿ ಪ್ರೀತಿ.

**೪೩೬. ಕುಶಲಾಯೈನಮಃ—**

ಬಹು ಚಮತ್ಕಾರ ಸ್ವರೂಪಿಣಿಯು. ಸೃಷ್ಟಿ, ಸ್ಥಿತಿ, ಲಯಗಳನ್ನು ಬಹು ಚಮತ್ಕಾರದಿಂದ ಮಾಡುವವಳು.

**೪೩೭. ಕೋಮಲಾಕಾರಾಯೈನಮಃ—**

ಬಹು ಮೃದುವಾದ ಮನೋಹರವಾದ ಆಕಾರವುಳ್ಳವಳು.

**೪೩೮. ಕುರುಕುಳ್ಳಾಯೈನಮಃ—**

ಕುಲವೆಂದರೆ ಪ್ರಪಂಚ. ಪ್ರಪಂಚವುಳ್ಳವಳಿಗೆ ಕುಳ್ಳಾ ಎಂದು ಹೆಸರು. ಇಂತಹ ಪ್ರಪಂಚವುಳ್ಳವಳಾಗಿರುವುದನ್ನು ಕುರು ಎಂದರೆ ಮಾಡುವುದು ಸರ್ವವೂ ನಾನೆಂಬ ಸೃಷ್ಟಿಕ್ರಮದಲ್ಲಿನ ಮಹದಹಂಕಾರ. ಇಂತಹ ಮಹದಹಂಕಾರ ಸ್ವರೂ ಪಿಣಿಯು. ಕುರುಕುಳ್ಳಾ ಎಂಬುವಳು ಶ್ರೀದೇವಿಯ ಮಹದಹಂಕಾರವೆಂಬ ಆವರಣಕ್ಕೆ ಅಭಿಮಾನಿ ದೇವತೆಯಾಗಿರುವಳೆಂತ ಶ್ರೀಲಲಿತೋಪಾಖ್ಯಾನದಲ್ಲೂ ಹೇಳಿರುವುದು.

**೪೩೯. ಕುಲೇಶ್ವರ್ಯೈನಮಃ—**

ಪ್ರಪಂಚವನ್ನು ಆಳುವವಳು. ಕುಲ ಎಂದರೆ ಪ್ರಪಂಚವೆಂದು ೯೦ರಿಂದ ೯೬ನೇ ನಾಮಗಳಲ್ಲಿ ತಿಳಿಸಿಯೇ ಇದೆ. ಮುಂದಿನ ಎರಡು ನಾಮಗಳಿಗೂ ಇದು ಅನ್ವಯ.

**೪೪೦. ಕುಲಕುಣ್ಡಾಲಯಾಯೈನಮಃ—**

ಸೃಷ್ಟಿಸಿದ ಜಗತ್ತನ್ನು ಧರಿಸಲು ಆದಿಶೇಷ ಶಕ್ತಿಯಾಗಿ ವಾಸಿಸುವವಳು.

(೨) ಕುಲ ಎಂದರೆ ಪ್ರಪಂಚ ಮತ್ತು ನಮ್ಮ ದೇಹ. ಕುಂಡ ಎಂದರೆ ಮಡಿಕೆ. ೩೫೫ನೇ ನಾಮದಲ್ಲಿ ತಿಳಿಸಿರುವ ನಮ್ಮ ದೇಹದಲ್ಲಿರುವ ಕಂದವು ಕುಂಡರೂಪ ವಾಗಿರುವುದು. ಈ ಕಂದದ ಕೆಳಭಾಗದಲ್ಲಿರುವ ಬ್ರಹ್ಮರಂಧ್ರನಾಡಿಯ ಬಾಗಿಲನ್ನು ಮುಚ್ಚಿಕೊಂಡು ದೇಹಧಾರಣಿಯಾಗಿರಲು ಮೂಲಾಧಾರದಲ್ಲಿ ಕುಂಡಲಿನೀ ಶಕ್ತಿ ಯಾಗಿ ವಾಸಿಸುವಳು. ಇದಕ್ಕೆ "ಕುಂಡಲಿನೀ ನಾಮಪರಾಶಕ್ತಿಃ ಪ್ರತಿಷ್ಠಿತಾ" ಎಂಬ ಶ್ರುತ್ಯಾಧಾರ.

**೪೪೧. ಕೌಳಮಾರ್ಗತತ್ಪರಸೇವಿತಾಯೈನಮಃ—**

ಕುಲ ಎಂದರೆ ಪ್ರಪಂಚ. ಪ್ರಪಂಚಾನುವರ್ತಿಗಳಾಗಿರುವವರಿಂದ ಪ್ರಾಪಂಚಿಕ ವಿಷಯಾದಿಗಳ ಬಯಕೆಯಿಂದ ಆರಾಧಿಸಲ್ಪಡುವವಳು. ಮೋಕ್ಷ ಕಾಮನೆ ಇಲ್ಲದೆ ಧನ, ಧಾನ್ಯ, ಸಂಪತ್ತು ದುಃಖಪರಿಹಾರ, ಮುಂತಾದ ಪ್ರಪಂಚದ ಭೋಗಕ್ಕೋಸ್ಕರ ಬೇಕಾದ ಫಲಾಭಿಲಾಷಿಗಳಾಗಿ ಸಾತ್ವಿಕಮಾರ್ಗದಿಂದ ಶ್ರೀದೇವಿ ಯನ್ನು ಆರಾಧಿಸುವರು.

**೪೪೨. ಕುಮಾರಗಣನಾಥಾಮ್ಬಾಯೈನಮಃ—**

ಶ್ರೀಕುಮಾರಸ್ವಾಮಿಗೂ ಶ್ರೀಗಣನಾಥನಿಗೂ ಮಾತೆಯಾಗಿರುವವಳು.

**೪೪೩. ತುಷ್ಟ್ಯೈನಮಃ—**

ಸಂತುಷ್ಟ ಸ್ವರೂಪಿಣಿಯು. ಯಾವಾಗಲೂ ತೃಪ್ತಿಯಾಗಿಯೂ, ಸಂತೋಷ ವುಳ್ಳವಳಾಗಿಯೂ ಇರುವವಳು.

**೪೪೪. ಪುಷ್ಟ್ಯೈನಮಃ—**

ಪೋಷಕಳು. ಆರೋಗ್ಯ ಧೃಢಕಾಯವನ್ನುಂಟುಮಾಡುವವಳು. ಸರ್ವ ವ್ಯಾಪಕಳು.

**೪೪೫. ಮತ್ಯೈನಮಃ**—ವಿವೇಕಸ್ವರೂಪಳು. ಬಹು ಬುದ್ಧಿವಂತಳು.

**೪೪೬. ಧೃತ್ಯೈನಮಃ—**

ಅಸಮಾನವಾದ ತಾಳ್ಮೆಯುಳ್ಳವಳು. ತಾಳ್ಮೆಯ ಸ್ವರೂಪವಾಗಿರುವವಳು.

**೪೪೭. ಶಾಂತ್ಯೈನಮಃ**—ಶಾಂತಿಸ್ವರೂಪವೇ ಆಗಿರುವವಳು.

**೪೪೮. ಸ್ವಸ್ತಿಮತ್ಯೈನಮಃ—**

ಯಾವಾಗಲೂ ಸತ್ಯ ಮತ್ತು ಶುಭ ಸ್ವರೂಪಳೇ ಆಗಿರುವವಳು.

೪೪೯. **ಕಾನ್ತ್ಯೈನಮಃ**—ತೇಜಸ್ಸ್ವರೂಪವೇ ಆಗಿರುವವಳು.

೪೫೦. **ನನ್ದಿನ್ಯೈನಮಃ**—

ನನ್ದಗೋಪನಲ್ಲಿ ದುರ್ಗೆಯಾಗಿ ಅವತರಿಸಿರುವವಳು. (೨) ಗಂಗಾದೇವಿಯ ಸ್ವರೂಪಿಣಿಯು. (೩) ಆನಂದ ಸ್ವರೂಪಳು. (೪) ಕಾಮಧೇನು ಸ್ವರೂಪಳು.

೪೫೧. **ವಿಘ್ನನಾಶಿನ್ಯೈನಮಃ**—ಸಕಲ ವಿಘ್ನಗಳನ್ನೂ ಪರಿಹರಿಸುವವಳು.

೪೫೨. **ತೇಜೋವತ್ಯೈನಮಃ**—

ಸೂರ್ಯಚಂದ್ರಾದಿಗಳಿಗೆ ಪ್ರಕಾಶಕೊಡುವ ಜ್ಯೋತಿಸ್ವರೂಪಿಣಿಯು.

೪೫೩. **ತ್ರಿನಯನಾಯೈನಮಃ**—

ಸೂರ್ಯ, ಚಂದ್ರ, ಅಗ್ನಿ ಸ್ವರೂಪಗಳಾದ ಮೂರು ಕಣ್ಣುಗಳುಳ್ಳವಳು. ಇಡಾ, ಪಿಂಗಳಾ, ಸುಷುಮ್ನಾ ಎಂಬ ಮೂರು ಮಾರ್ಗಗಳುಳ್ಳವಳು. (ನಯ ಎಂದರೆ ಮಾರ್ಗವೆಂದೂ ಅರ್ಥವಾಗುವುದು)

೪೫೪. **ಲೋಲಾಕ್ಷೀ ಕಾಮರೂಪಿಣ್ಯೈನಮಃ**—

ಸ್ತ್ರೀತ್ವದ ಕಾಮಬಾಣಸ್ವರೂಪಳು. ಮನೋಹರವಾದ ಸೌಂದರ್ಯ ಮತ್ತು ನೇತ್ರಗಳುಳ್ಳವಳು.

೪೫೫. **ಮಾಲಿನ್ಯೈನಮಃ**—

ಅಕಾರಾದಿ ಕ್ಷಕಾರಾಂತವಾಗಿರುವ ೫೦ ಅಕ್ಷರಗಳ ಅಭಿಮಾನದೇವತೆಗಳಿಗೆ ಮಾಲಿನಿ ಎಂದು ಹೆಸರು. ಅಕ್ಷರ ಶಕ್ತಿಸ್ವರೂಪಳು.

೪೫೬. **ಹಂಸಿನ್ಯೈನಮಃ**—

ಹಂಸ ಎನ್ನುವದಕ್ಕೆ ಪರಬ್ರಹ್ಮ ಜೀವ ಮುಂತಾದ ಅನೇಕ ಅರ್ಥಗಳಿವೆ. ಮುಖ್ಯವಾಗಿ ಶ್ವಾಸೋಚ್ಛ್ವಾಸಗಳು ಆಡುವಾಗ ಅಹಂಸಃ ಎಂಬ ಶಬ್ದವಾಗಿ ಇದರಿಂದ ಜೀವನ ವ್ಯಾಪಾರವು ನಡೆಯುತ್ತಿರುವುದು. ಹಂಸಪಕ್ಷಿಯು ಯಾವ ರೀತಿ ನೀರಿನಲ್ಲಿ ವಿನೋದದಿಂದ ಸಂಚರಿಸುವುದೊ ಅದರಂತೆ ಶ್ವಾಸೋಚ್ಛ್ವಾಸದ ಗತಿಯಿಂದ ಜೀವತ್ವವು ಇರುವುದು. ಆದುದರಿಂದ ಶ್ವಾಸೋಚ್ಛ್ವಾಸದ ಗತಿಯು ಶ್ರೀದೇವಿಯೇ ಆದ್ದರಿಂದ ಹಂಸರೂಪಿಣಿಯು. ಹಂಸ ಶಬ್ದ ವಿಚಾರವು ಮೂಲ ಮಂತ್ರದ ವಿವರಣೆಯಲ್ಲಿಯೂ ಬಂದಿರುವುದು.

**೪೫೭. ಮಾತ್ರೇನಮಃ—**

ಸಪ್ತ ಮಾತೃಕಾ ಸ್ವರೂಪಿಣಿಯು. ಅಕ್ಷರಗಳ ಮಾತೃಕಾಶಕ್ತಿಯು. ಜನನಿಯು.

**೪೫೮. ಮಲಯಾಚಲವಾಸಿನ್ಯೈನಮಃ—**

ಮಲಯವೆಂದರೆ ಧರಿಸುವುದು. ದೇಹವನ್ನು ಧರಿಸುವ ಮೂಲಾಧಾರ ಚಕ್ರರೂಪವಾದ ಪರ್ವತದಲ್ಲಿ ವಾಸಮಾಡುತ್ತಿರುವ ಶ್ರೀ ಕುಂಡಲಿನಿಯು.

**೪೫೯. ಸುಮುಖ್ಯೈನಮಃ**— ಹಸನ್ಮುಖವುಳ್ಳವಳು.

**೪೬೦. ನಳಿನ್ಯೈನಮಃ—**

ನಲತೀತಿ ನಳಃ- ಬಂಧಿಸುವುದು. ಎಂಬ ಅರ್ಥದಂತೆ ಶ್ರೀ ಕುಂಡಲಿನೀ ಶಕ್ತಿಯು ಮೂಲಾಧಾರ ಚಕ್ರದಲ್ಲಿದ್ದುಕೊಂಡು ಬ್ರಹ್ಮರಂಧ್ರದ ಬಾಗಿಲನ್ನು ಬಂಧಿಸಿರುವಳು. ಗಂಗಾದೇವಿಯು.

**೪೬೧. ಸುಭ್ರುವೇನಮಃ**—ಸಮೀಚೀನವಾದ ಹುಬ್ಬುಳ್ಳವಳು.

**೪೬೨. ಶೋಭನಾಯೈನಮಃ**—ಮಂಗಳ ಸ್ವರೂಪಿಣಿಯು.

**೪೬೩. ಸುರನಾಯಿಕಾಯೈನಮಃ**—ದೇವತೆಗಳಿಗೆಲ್ಲಾ ಒಡೆಯಳು.

**೪೬೪. ಕಾಲಕಣ್ಠ್ಯೈನಮಃ—**

ಬಹುಮಧುರ ಮತ್ತು ಮನೋಹರವಾದ ಧ್ವನಿಹೊರಡುವ ಕಂಠವುಳ್ಳವಳು. ಶಿವಸ್ವರೂಪದಿಂದ ವಿಷಪಾನ ಮಾಡಿದವಳು.

**೪೬೫. ಕಾನ್ತಿಮತ್ಯೈನಮಃ**—ಅಸದೃಶಕಾಂತಿಸಂಪನ್ನಳು.

**೪೬೬. ಕ್ಷೋಭಿಣ್ಯೈನಮಃ—**

ಶಾಂತಸ್ವಭಾವದ ಈಶ್ವರನ ಮನಸ್ಸನ್ನು ಹೊಕ್ಕು ಅಲ್ಲಿ ಕ್ಷೋಭೆಯನ್ನುಂಟು ಮಾಡಿ ಆತನನ್ನು ಸೃಷ್ಟಿಕಾರ್ಯದಲ್ಲಿ ಪ್ರವೃತ್ತನಾಗುವಂತೆ ಮಾಡುವವಳು. ಅವಿದ್ಯಾ ಗ್ರಂಥಿಗಳನ್ನೆಲ್ಲಾ ಛಿದ್ರಮಾಡಿಸಿ ಮೋಕ್ಷವನ್ನು ಕೊಡಿಸುವ ಶ್ರೀಕುಂಡಲಿನೀ ಶಕ್ತಿಯು.

**೪೬೭. ಸೂಕ್ಷ್ಮರೂಪಿಣ್ಯೈನಮಃ—**

ತಿಳಿಯಲಸಾಧ್ಯವಾದಂತಹ ಅಣುವಿಗಿಂತಲೂ ಅಣುವಾದ ಸೂಕ್ಷ್ಮರೂಪವುಳ್ಳ ಶ್ರೀಕುಂಡಲಿನೀ ಶಕ್ತಿಯು.

**೪೬೮. ವಜ್ರೇಶ್ವರ್ಯೈನಮಃ—**

ವಜ್ರವು ಅತ್ಯಂತಕಠಿಣ ಪದಾರ್ಥವಾಗಿಯೂ ಅತ್ಯಂತ ಪ್ರಕಾಶಮಾನವಾಗಿಯೂ ಎಂತಹ ಪದಾರ್ಥಗಳನ್ನಾದರೂ ಕತ್ತರಿಸಬಲ್ಲ ಶಕ್ತಿಯುಳ್ಳದ್ದಾಗಿಯೂ ಇರುವುದು. ಇಂತಹ ಮಹತ್ವದ ಸ್ವರೂಪವಾದುದರಿಂದ ಇಂದ್ರನ ಹಸ್ತದಲ್ಲಿ ವಜ್ರಾಯುಧವಿದೆ. ಈ ವಜ್ರಾಯುಧಕ್ಕೂ ಯಜಮಾನಳಾಗಿ ವಜ್ರಾಯುಧವನ್ನು ಇಂದ್ರನಿಗೆ ಅನುಗ್ರಹಿಸಿ ಕೊಟ್ಟವಳು. (೨) ವಜ್ರದ ಕಾಂತಿಗೂ ಕಾಂತಿಯನ್ನು ಕೊಡುವವಳು. ಭಗವತಿಯ ಪರಿವಾರ ದೇವತೆಗಳಲ್ಲಿ ವಜ್ರೇಶ್ವರಿ ಎಂಬುವಳು ಇರುತ್ತಾಳೆ.

**೪೬೯. ವಾಮದೇವ್ಯೈನಮಃ—**

"ತಂದೇವಾ ಅಬ್ರುವನ್ನಯಂವೈನ ಸರ್ವೇಷಾಂ ವಾಮಇತಿ ತಸ್ಮಾದ್ವಾಮದೇವಃ" ಎಂಬ ಶ್ರುತಿವಚನಾನುಸಾರ ಸರ್ವರಿಂದಲೂ ಪೂಜಿಸಲ್ಪಡುವವಳಾದ್ದರಿಂದ ವಾಮದೇವಿ. (೨) ಚಂದ್ರನಾಡಿ ಇರುವ ದೇಹದ ಎಡಭಾಗವೆಲ್ಲಾ ದೇವಿ. ಸೂರ್ಯನಾಡಿ ಇರುವ ಬಲಭಾಗವೆಲ್ಲಾ ಈಶ್ವರ. ಎಡಭಾಗದಲ್ಲಿದ್ದುಕೊಂಡು ಪ್ರಕಾಶಮಾನಳಾಗಿರುವವಳು. ಅಂದರೆ ಚಂದ್ರಸ್ವರೂಪಿಣಿಯು. ಪಂಚಬ್ರಹ್ಮರಲ್ಲಿ ಎರಡನೆಯವನಾದ ವಾಮದೇವನ ಪಟ್ಟಮಹಿಷಿ. ಸೌಂದರ್ಯವತಿಯಾದ ದೇವಿಯು.

**೪೭೦. ವಯೋವಸ್ಥಾವಿವರ್ಜಿತಾಯೈನಮಃ—**

ಬಾಲ್ಯ, ಯೌವ್ವನ, ವಾರ್ಧಿಕ್ಯ ಮುಂತಾದ ಯಾವ ಅವಸ್ಥೆಗಳೂ ಇಲ್ಲದವಳು. ಬಾಲ್ಯ, ಯೌವನ, ವಾರ್ಧಿಕ್ಯಗಳು ದೇಹಕ್ಕೇ ಹೊರತು ದೇಹದಲ್ಲಿರತಕ್ಕ ಚೈತನ್ಯಳಾದ ಕುಂಡಲಿನೀ ಶಕ್ತಿಗಿಲ್ಲ.

**೪೭೧. ಸಿದ್ಧೇಶ್ವರ್ಯೈನಮಃ—**

ಶ್ರೀಕುಂಡಲಿನೀ ಶಕ್ತಿಯು ಸಿದ್ಧರೆಂದರೆ ಜೀವನ್ಮುಕ್ತರಿಗೆಲ್ಲಾ ಒಡೆಯಳು. ಮತ್ತು ಅಮಾನುಷ ಕಾರ್ಯವಾಗುವ ಅಣಿಮಾದಿ ಸಿದ್ಧಿಸಂಪನ್ನರಿಗೆ ಒಡೆಯಳು.

**೪೭೨. ಸಿದ್ಧವಿದ್ಯಾಯೈನಮಃ—**

ಶ್ರೀಕುಂಡಲಿನೀ ಶಕ್ತಿಯು ಜೀವನ್ಮುಕ್ತಾವಸ್ಥೆಯನ್ನು ಪಡೆಯುವ ವಿದ್ಯಾ

ಸ್ವರೂಪಳಾಗಿರುವಳು ಮತ್ತು ಅಮಾನುಷ ಕಾರ್ಯವಾಗುವ ಅಣಿಮಾದಿ ಸಿದ್ಧಿ ಸಾಧಕವಾದ ವಿದ್ಯಾಸ್ವರೂಪಳು.

**೪೭೩. ಸಿದ್ಧಮಾತ್ರೇನಮಃ—**

ಶ್ರೀಕುಂಡಲಿನೀ ಶಕ್ತಿಯು ಜೀವನ್ಮುಕ್ತರನ್ನು ರಕ್ಷಿಸುವವಳು ಮತ್ತು ಅಣಿಮಾದಿಸಿದ್ಧರ ಜನನಿಯು.

**೪೭೪. ಯಶಸ್ವಿನ್ಯೈನಮಃ—**

ಜಗತ್ತಿನಲ್ಲೆಲ್ಲಾ ಪ್ರಖ್ಯಾತಿಯನ್ನು ಪಡೆದಿರುವವಳು.

**೪೭೫. ವಿಶುದ್ಧಿಚಕ್ರನಿಲಯಾಯೈನಮಃ—**

ವಿಶುದ್ಧಚಕ್ರದಲ್ಲಿ ನೆಲೆಸಿರುವವಳು. ವಿಶುದ್ಧಚಕ್ರವು ನಮ್ಮ ಕಂಠದಲ್ಲಿ ಆಕಾಶ ತತ್ವಕ್ಕೆ ಪ್ರಧಾನವಾಗಿಯೂ, ಸಪ್ತವ್ಯಾಹೃತಿಗಳಲ್ಲಿ ಜನಃ ತತ್ವದ್ದಾಗಿಯೂ, ಸಪ್ತಮಾತೃಕೆಯರಲ್ಲಿ ಕೌಮಾರಿಯೇ ಅಧಿದೇವತೆಯಾಗಿಯೂ, ಸ್ವರಗಳಲ್ಲಿ ಗಾಂಧಾರಸ್ವರಕ್ಕೆ ಪ್ರಧಾನಸ್ಥಳವಾಗಿಯೂ, ಮನೋಮಯ ಕೋಶಕ್ಕೆ ಪ್ರಧಾನ ಸ್ಥಳವಾಗಿಯೂ ಇರುತ್ತದೆ. ೪೭೫ ರಿಂದ ೪೮೫ ನೇ ನಾಮದವರೆಗೂ ವಿಶುದ್ಧ ಚಕ್ರದ ವರ್ಣನೆಯಾಗಿರುವುದು.

**೪೭೬. ಆರಕ್ತವರ್ಣಾಯೈನಮಃ—**

ಕೊಂಚ ಕೆಂಪು ಮಿಶ್ರವಾದ ಬಿಳೀಬಣ್ಣವಾಗಿರುವವಳು.

**೪೭೭. ತ್ರಿಲೋಚನಾಯೈನಮಃ—**

ಮೂರು ಕಣ್ಣುಗಳುಳ್ಳವಳು. ಆಕಾಶದಲ್ಲಿ ಸೂರ್ಯ, ಚಂದ್ರ, ನಕ್ಷತ್ರ ರೂಪಗಳಾದ ಮೂರುಕಣ್ಣುಗಳು.

**೪೭೮. ಖಟ್ವಾಂಗಾದಿಪ್ರಹರಣಾಯೈನಮಃ—**

ಖಟ್ವಾಂಗವೇ ಮುಂತಾದ ಆಯುಧವುಳ್ಳವಳು.

**೪೭೯. ವದನೈಕಸಮನ್ವಿತಾಯೈನಮಃ—**

ಒಂದೇ ಮುಖವುಳ್ಳವಳು. ವಿಶುದ್ಧಚಕ್ರವು ಆಕಾಶತತ್ವವಾದ್ದರಿಂದ ಆಕಾಶದ ತತ್ವವುಳ್ಳ ಒಂದೇ ಮುಖವುಳ್ಳವಳು.

**೪೮೦. ಪಾಯಸಾನ್ನಪ್ರಿಯಾಯೈನಮಃ—**

ಮಧುರವಾದ ಪಾಯಸದ ಆಹಾರದಲ್ಲಿ ಇಷ್ಟವುಳ್ಳವಳು.

**೪೮೧. ತ್ವಕ್ಸ್ಥಾಯೈನಮಃ**—ತ್ವಗಿಂದ್ರಿಯಕ್ಕೆ ಅಭಿಮಾನಿ ದೇವತೆಯು.

**೪೮೨. ಪಶುಲೋಕಭಯಂಕರ್ಯೈನಮಃ—**

ಇಂದ್ರಿಯ ಮತ್ತು ಪ್ರಾಣಚೇಷ್ಟೆಗಳಾದ ಅವಿದ್ಯಾಕಾರ್ಯಕ್ಕೆ ಭಯಂಕರ ಸ್ವರೂಪಿಣಿಯು. ಆಕಾಶವು ಇಂದ್ರಿಯ ಮತ್ತು ಪ್ರಾಣಕಾರ್ಯಗಳಿಗೆ ಅತೀತ ವಾದುದು.

**೪೮೩. ಅಮೃತಾದಿಮಹಾಶಕ್ತಿ ಸಂವೃತಾಯೈನಮಃ—**

ವಿಶುದ್ಧ ಚಕ್ರವು ೧೬ ದಳಗಳುಳ್ಳದ್ದು. ಈ ೧೬ ದಳಗಳು ಅ, ಆ, ಇ, ಈ, ಉ, ಊ, ಋ, ೠ, ಌ, ೡ, ಏ, ಐ, ಓ, ಔ, ಅಂ, ಅಃ ಎಂಬ ೧೬ ಸ್ವರಾಕ್ಷರಗಳ ತತ್ವದ್ದಾಗಿವೆ. ಈ ೧೬ ಅಕ್ಷರಗಳಿಗೂ ಅಮೃತ ಮೊದಲಾಗಿ ಅಕ್ಷರವೇ ಅಂತ್ಯವಾಗುಳ್ಳ ೧೬ ಅಭಿಮಾನ ದೇವತಾ ಶಕ್ತಿಗಳಿವೆ. ವಿಶುದ್ಧಿ ಚಕ್ರದಲ್ಲಿ ನೆಲೆಸಿರುವ ಶ್ರೀದೇವಿಯು ಈ ೧೬ ಅಕ್ಷರಗಳ ಅಭಿಮಾನ ದೇವತಾ ಶಕ್ತಿಗಳಿಂದ ಪರಿವೃತಳಾಗಿರುವಳು.

**೪೮೪. ಡಾಕಿನೀಶ್ವರ್ಯೈನಮಃ—**

ಡಾಕಿನಿ ಎಂದರೆ "ದಾಯ (ಭಯದಾನಾಯ) ಅಕತಿ ಕುಟಿಲಂ ಗಚ್ಛತಿ ಇತಿ ಡಾಕಿನೀ" ಭಯವನ್ನುಂಟುಮಾಡುವುದಕ್ಕೋಸ್ಕರ ವಕ್ರವಾಗಿ ಹೋಗುವವಳು ಎಂಬ ಅರ್ಥವೆಂದು ಬ್ರಹ್ಮವೈವರ್ತಪುರಾಣದ ಕಾಶೀಖಂಡದಲ್ಲಿ ಹೇಳಿದೆ. ವಿಶುದ್ಧಚಕ್ರವು ಆಕಾಶದ ತತ್ವವಾಗಿ ಇಂದ್ರಿಯ ಮತ್ತು ಪ್ರಾಣಚೇಷ್ಟೆಗಳಿಗೆ ಅತೀತವಾಗಿ ಇಂದ್ರಿಯ ಕಾರ್ಯಗಳಾದ ಅವಿದ್ಯೆಯನ್ನು ನಾಶಮಾಡುವ ಸ್ವರೂಪವುಳ್ಳದ್ದಾಗಿರುವುದು. ಈ ತತ್ವಕ್ಕೆ ೪೮೨ ನೇ ನಾಮದಲ್ಲಿ ಪಶುಲೋಕಭಯಂಕರಿ ಎಂಬುದು ವಿಶುದ್ಧಚಕ್ರಕ್ಕೆ ಸಂಬಂಧಿಸಿ ಬಂದಿರುವುದು. ಅಲ್ಲದೆ ವಿಶುದ್ಧಚಕ್ರಕ್ಕೆ ಕೌಮಾರಿಯು ಅಧಿದೇವತೆಯಾಗಿರುವುದರಿಂದ ಕುಮಾರಿ ಎಂಬ ಶಬ್ದಕ್ಕೂ "ಕುತ್ಸಿತಾನ್ ಶತ್ರೂನ್ಮಾರಯತೀತಿ ಕುಮಾರೀ (ಮೃಙ – ಪ್ರಾಣತ್ಯಾಗೆ)". ಕುತ್ಸಿತವಾದ ಶತ್ರುಗಳನ್ನು ಧ್ವಂಸಮಾಡುವವಳು. ಅಲ್ಲದೆ "ಕುತ್ಸಿತೋ ಮಾರೋಯಯಾಸಾ ಇತಿ ಕುಮಾರೀ." ಮನ್ಮಥನನ್ನು ತಿರಸ್ಕರಿಸುವವಳೆಂದರೆ ಬಾಲ್ಯಾವಸ್ಥೆಯಲ್ಲಿರುವವಳು, ಎಂಬ ಅರ್ಥಗಳಾಗುವುದರಿಂದ ಶತ್ರುಗಳನ್ನು ನಾಶ ಮಾಡುವ ಸೇನಾಶಕ್ತಿಗಳಿಗೆಲ್ಲಾ ಕುಮಾರಸ್ವಾಮಿಯು ಹೇಗೆ ನಾಯಕನಾಗಿದ್ದನೋ

ಅದರಂತೆ ಶತ್ರುಗಳನ್ನು ನಿಗ್ರಹಮಾಡುವ ಡಾಕಿನೀಸ್ವರೂಪವಾದ ಶಕ್ತಿಗಳಿಗೆಲ್ಲಾ ಕೌಮಾರಿಯು ನಾಥಳಾಗಿರುವುದೇ ಡಾಕಿನೀಶ್ವರೀ ಎಂಬ ನಾಮದ ಅರ್ಥ.

**೪೮೫. ಅನಾಹತಾಬ್ಜನಿಲಯಾಯೈನಮಃ—**

ಅನಾಹತ ಚಕ್ರದಲ್ಲಿ ನೆಲೆಸಿರುವವಳು. ಅನಾಹತಚಕ್ರವು ನಮ್ಮ ಎದೆಯ ಸ್ಥಳದಲ್ಲಿ ವಾಯುತತ್ವಕ್ಕೆ ಪ್ರಧಾನವಾಗಿಯೂ, ಸಪ್ತವ್ಯಾಹೃತಿಗಳಲ್ಲಿ ಮಹಸ್ತತ್ವವಾಗಿಯೂ, ಸಪ್ತಮಾತೃಕೆಯರಲ್ಲಿ ವೈಷ್ಣವಿಯು ಅಧಿದೇವತೆಯಾಗಿಯೂ, ಸ್ವರಗಳಲ್ಲಿ ಮಧ್ಯಮ ಸ್ವರಕ್ಕೆ ಪ್ರಧಾನಸ್ಥಳವಾಗಿಯೂ, ಪ್ರಾಣಮಯ ಕೋಶಕ್ಕೆ ಪ್ರಧಾನಸ್ಥಳವಾಗಿಯೂ ಇರುತ್ತದೆ. ೪೮೫ರಿಂದ ೪೯೫ ನೇ ನಾಮದವರೆಗೂ ಈ ಅನಾಹತಚಕ್ರದ ವಿವರಣೆಯಾಗಿರುವುದು.

**೪೮೬. ಶ್ಯಾಮಾಭಾಯೈನಮಃ—**

ಶ್ಯಾಮವೆಂದರೆ ನೀಲವರ್ಣದವಳು. ವೈಷ್ಣವಿಯು ನೀಲಮೇಘಶ್ಯಾಮಲೆಯು.

**೪೮೭. ವದನದ್ವಯಾಯೈನಮಃ—**

ಎರಡು ಮುಖಗಳುಳ್ಳವಳು. ಅನಾಹತ ಚಕ್ರವು ವಾಯುತತ್ವಕ್ಕೆ ಪ್ರಧಾನವಾಗಿರುವುದರಿಂದಲೂ, ವಾಯುವು ಆಕಾಶದಿಂದ ಉತ್ಪನ್ನವಾಗಿರುವುದರಿಂದಲೂ ಆಕಾಶ ಮತ್ತು ವಾಯು ತತ್ವಗಳೆರಡೂ ಇರುವುದನ್ನು ಸೂಚಿಸುವದಕ್ಕೋಸ್ಕರವೇ ಅನಾಹತಚಕ್ರದಲ್ಲಿ ನೆಲೆಸಿರುವ ಶ್ರೀದೇವಿಗೆ ಎರಡು ಮುಖಗಳಿವೆ.

**೪೮೮. ದಂಷ್ಟ್ರೋಜ್ಜ್ವಲಾಯೈನಮಃ—**

ಪ್ರಕಾಶಿಸುತ್ತಿರುವ ಕೋರೆಗಳುಳ್ಳವಳು.

**೪೮೯. ಅಕ್ಷಮಾಲಾದಿಧರಾಯೈನಮಃ**--ಅಕ್ಷಮಾಲಿಕೆಯನ್ನು ಧರಿಸಿರುವವಳು.

**೪೯೦. ರುಧಿರಸಂಸ್ಥಿತಾಯೈನಮಃ—**

ನಮ್ಮ ದೇಹದಲ್ಲಿರುವ ರಕ್ತಕ್ಕೆ ಅಭಿಮಾನ ದೇವತೆಯು. ರಕ್ತಬಲವೇ ಪ್ರಾಣಬಲವಾಗಿರುವುದರಿಂದ ಪ್ರಾಣಮಯಕೋಶದ ಶಕ್ತಿಯು ರಕ್ತಕ್ಕೆ ಅಭಿಮಾನ ದೇವತೆಯು.

**೪೯೧. ಕಾಳರಾತ್ರ್ಯಾದಿ ಶಕ್ತ್ಯೌಘವೃತಾಯೈನಮಃ—**

ಕಾಳರಾತ್ರಿಯೇ ಮೊದಲಾದ ೧೨ ಶಕ್ತಿಗಳಿಂದ ಪರಿವೃತಳಾಗಿರುವವಳು.

ಅನಾಹತ ಚಕ್ರವು ೧೨ ದಳಗಳುಳ್ಳದ್ದು. ಈ ೧೨ ದಳವೂ ಕ, ಖ, ಗ, ಘ, ಙ, ಚ, ಛ, ಜ, ಝ, ಞ, ಟ, ಠ, ಎಂಬ ೧೨ ಅಕ್ಷರಗಳ ಶಕ್ತಿಗಳಾಗಿವೆ. ಈ ೧೨ ಅಕ್ಷರಗಳಿಗೂ ಕಾಳರಾತ್ರಿಯಿಂದ ಪ್ರಾರಂಭವಾಗಿ ಠಂಕಾರಿಯೇ ಅಂತ್ಯ ವಾಗುಳ್ಳ ಅಭಿಮಾನ ದೇವತಾ ಶಕ್ತಿಗಳಿವೆ. ಅನಾಹತಚಕ್ರದಲ್ಲಿ ನೆಲೆಸಿರುವ ಶ್ರೀದೇವಿಯು ೧೨ ಅಕ್ಷರಗಳ ಅಭಿಮಾನ ದೇವತಾಶಕ್ತಿಗಳಿಂದ ಪರಿವೃತ ಳಾಗಿರುವಳು.

**೪೯೨. ಸ್ನಿಗ್ಧೌದನಪ್ರಿಯಾಯೈನಮಃ—**

ಮಧುರ ಮತ್ತು ಜಿಡ್ಡು ಮಿಶ್ರವಾದ ಅನ್ನದಲ್ಲಿ ಪ್ರಿಯಳಾದವಳು.

**೪೯೩. ಮಹಾವೀರೇನ್ದ್ರವರದಾಯೈನಮಃ—**

ಮಹಾವೀರರಸದೊಡನೆ ಕೂಡಿದ ಪರಾಕ್ರಮಿಗಳಿಗೆ ಅನುಗ್ರಹಿಸುವವಳು. ಬ್ರಹ್ಮ, ವಿಷ್ಣು, ರುದ್ರರಿಗೆ ಮಹಾವೀರೇಂದ್ರರೆಂದು ಹೆಸರು. ಇವರಿಗೂ ವರವನ್ನು ಕೊಡತಕ್ಕವಳು.

ಅನಾಹತಚಕ್ರವು ಪ್ರಾಣಮಯ ಕೋಶಕ್ಕೆ ಪ್ರಧಾನಸ್ಥಳವಾದುದರಿಂದ ಪರಾಕ್ರಮಕ್ಕೆ ಪ್ರಾಣಬಲವೇ ಮುಖ್ಯವಾಗಿ ಬೇಕಾಗಿರುವುದರಿಂದ ಅನಾಹತ ಚಕ್ರದಲ್ಲಿರುವ ಶ್ರೀದೇವಿಯ ಅನುಗ್ರಹವು ಮುಖ್ಯವಾಗಿ ಬೇಕು. ಅಲ್ಲದೆ ಪ್ರಪಂಚಮಾರ್ಗಕ್ಕೆ ಬೇಕಾದ ಪರಾಕ್ರಮವೇ ಹೆಚ್ಚಿನದಲ್ಲ. ಮೋಕ್ಷಕ್ಕೂ ವೀರರಸಬೇಕು. ವೀರರಸವು ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರ ಚಕ್ರ ಗಳನ್ನು ಧ್ಯಾನಾಭ್ಯಾಸದಿಂದ ಭೇದಿಸಿಕೊಂಡು ಅನಾಹತಚಕ್ರಕ್ಕೆ ನಾವು ಬಂದಲ್ಲಿ ಅನಾಹತಚಕ್ರದ ಅಭಿಮಾನಿದೇವತೆಯಾದ ಶ್ರೀ ವೈಷ್ಣವೀದೇವಿಯ ಅನುಗ್ರಹ ದಿಂದ ಅವಿದ್ಯಾಶಕ್ತಿಗಳನ್ನೆಲ್ಲಾ ನಿಗ್ರಹಿಸುವ ವೀರೇಂದ್ರತ್ವವನ್ನು ಹೊಂದುವೆವು. ಇದು ತೇಜೋನಾದಧ್ಯಾನವಿದ್ಯಾ ಸೋಪಾನಕ್ಕೆ ಸೇರಿದುದು.

**೪೯೪. ರಾಕಿಣ್ಯಮ್ಬಾಸ್ವರೂಪಿಣ್ಯೈನಮಃ—**

ರಾಕಿಣಿ ಎಂದರೆ "ಕಂ-ಸುಖಂ ರಾತಿ ದದಾತಿ ಸುಖಮಿತಿ ರಾಕಾ (ರಾದಾನೆ)" ಎಂಬ ಅರ್ಥದಂತೆ ಸುಖವನ್ನುಂಟುಮಾಡುವವಳಿಗೆ ರಾಕಿಣಿ ಎಂದಾಗುವುದು. ಅಂದರೆ ಅನಾಹತಚಕ್ರವು ವಾಯುತತ್ವದ್ದಾಗಿ ಪ್ರಾಣಮಯ ಕೋಶಕ್ಕೆ ಪ್ರಧಾನಸ್ಥಳವಾದುದರಿಂದ ಪ್ರಾಣಸೌಖ್ಯದಿಂದಾಗುವ ದೇಹಸೌಖ್ಯ ವನ್ನೂ ಪರಾಕ್ರಮವನ್ನೂ ಕೊಡತಕ್ಕ ಮಾತೆಯಾಗಿರುವಳು. ಅಲ್ಲದೆ ಪಾರ ಮಾರ್ಥಿಕದ ಸೌಖ್ಯವನ್ನೆಂದರೆ ಪ್ರಾಣವೇ ಪ್ರಣವಸ್ವರೂಪವಾಗುವ ಅಂದರೆ

ಓಂಕಾರವಾಗುವ ಸುಖವನ್ನು ಕೊಡುವವಳು. ಅನಾಹತ ಚಕ್ರವಾದ ವಿಷ್ಣು ಗ್ರಂಥಿ ಭೇದನೆಯಿಂದಲೇ ಓಂಕಾರನಾದಾನುಸಂಧಾನವು ಲಭ್ಯವಾಗಿ ಮೋಕ್ಷ ಸುಖವು ದೊರಕುವುದು. ಅಲ್ಲದೆ ಅನಾಹತ ಚಕ್ರಕ್ಕೆ ಶ್ರೀವೈಷ್ಣವಿಯು ಅಧಿ ದೇವತೆಯಾಗಿರುವುದರಿಂದ ದೇಹವ್ಯಾಪಾರ ರೂಪವಾದ ಪಾಲನಾಸುಖವನ್ನೂ ಪಾರಮಾರ್ಥಿಕ ಸುಖವನ್ನೂ ಅನುಗ್ರಹಿಸುವಳಾಗಿ ಪಾಲನೆಗೆ ಒಡೆಯಳಾಗಿ ವಿಷ್ಣು ಶಕ್ತಿಯಾಗಿ ಅನಾಹತ ಚಕ್ರದಲ್ಲಿ ನೆಲಸಿರುವವಳು. ಆದುದರಿಂದ ಸುಖವನ್ನು ಕೊಡುವ ಮಾತೆಯಾಗಿ ಶ್ರೀವೈಷ್ಣವಿಯು ಅನಾಹತ ಚಕ್ರದಲ್ಲಿ ನೆಲಸಿರುವುದೇ ರಾಕಿಣ್ಯಮ್ಬಾ ಎಂಬ ನಾಮದ ಅರ್ಥ.

**೪೯೫. ಮಣಿಪೂರಾಬ್ಜನಿಲಯಾಯೈನಮಃ—**

ಮಣಿಪೂರಚಕ್ರದಲ್ಲಿ ನೆಲಸಿರುವವಳು. ಮಣಿಪೂರಚಕ್ರವು ನಮ್ಮ ನಾಭಿಗೆ ಸರಿಯಾಗಿ ಬೆನ್ನಿನ ಹುರಿಯಲ್ಲಿರುವುದು. ಅಗ್ನಿತತ್ವಕ್ಕೆ ಪ್ರಧಾನವಾಗಿಯೂ, ಸಪ್ತವ್ಯಾಹೃತಿಗರಲ್ಲಿ ಸುವಃ ತತ್ವದ್ದಾಗಿಯೂ, ಸಪ್ತಮಾತೃಕೆಯರಲ್ಲಿ ವಾರಾಹಿಯೆ ದೇವತೆಯಾಗಿಯೂ, ಸಪ್ತಸ್ವರಗಳಲ್ಲಿ ಪಂಚಮ ಸ್ವರಕ್ಕೆ ಪ್ರಧಾನಸ್ಥಳವಾಗಿಯೂ ಇರುತ್ತದೆ. ೪೯೫ ರಿಂದ ೫೦೪ನೇ ನಾಮದವರಿಗೂ ಮಣಿಪೂರಚಕ್ರದ ವಿವರಣೆಯಾಗಿರುವುದು.

**೪೯೬. ವದನತ್ರಯಸಂಯುತಾಯೈನಮಃ—**

ಮೂರು ಮುಖಗಳುಳ್ಳವಳು. ಮಣಿಪೂರಚಕ್ರವು ಅಗ್ನಿತತ್ವಕ್ಕೆ ಪ್ರಧಾನವಾದುದರಿಂದಲೂ, ಅಗ್ನಿಯು-ಆಕಾಶದಿಂದುತ್ಪನ್ನವಾದ ವಾಯುವಿನಿಂದ ಉತ್ಪನ್ನವಾದುದರಿಂದಲೂ ಆಕಾಶ, ವಾಯು, ಅಗ್ನಿ ಈ ಮೂರು ತತ್ವಗಳೂ ಸೇರಿರುವದೆಂಬ ಸೂಚನೆಯನ್ನು ಅನುಸರಿಸಿ ಮಣಿಪೂರ ಚಕ್ರದಲ್ಲಿರುವ ಶ್ರೀದೇವಿಗೆ ಮೂರು ಮುಖಗಳಿವೆ.

**೪೯೭. ವಜ್ರಾದಿಕಾಯುಧೋಪೇತಾಯೈನಮಃ—**

ವಜ್ರಾಯುಧವೇ ಮುಂತಾದ ಆಯುಧಗಳುಳ್ಳವಳು.

**೪೯೮. ಡಾಮರ್ಯಾದಿಭಿ ರಾವೃತಾಯೈನಮಃ—**

ಡಾಮರ್ಯಾದಿ ಶಕ್ತಿಗಳಿಂದ ಪರಿವೃತಳಾಗಿರುವವಳು. ಮಣಿಪೂರಚಕ್ರವು ೧೦ ದಳಗಳುಳ್ಳದ್ದು. ಈ ಹತ್ತು ದಳಗಳೂ ಡ, ಢ, ಣ, ತ, ಥ, ದ, ಧ, ನ, ಪ, ಫ, ಎಂಬ ಹತ್ತು ಅಕ್ಷರ ಶಕ್ತಿಗಳಾಗಿವೆ. ಈ ಹತ್ತು ಅಕ್ಷರಗಳಿಗೂ ಡಾಮರಿ ಮೊದಲುಗೊಂಡು ಫಟ್ಕಾರಿಣಿಯೇ ಅಂತ್ಯವಾಗುಳ್ಳ ಹತ್ತು ಮಂದಿ

ಅಭಿಮಾನಿದೇವತಾ ಶಕ್ತಿಗಳಿವೆ. ಮಣಿಪೂರದಲ್ಲಿ ನೆಲೆಸಿರುವ ಶ್ರೀದೇವಿಯು ಈ ಅಭಿಮಾನಿದೇವತಾಶಕ್ತಿಗಳಿಂದ ಪರಿವೃತಳಾಗಿರುವಳು.

**೪೯೯. ರಕ್ತವರ್ಣಾಯೈನಮಃ—**

ರಕ್ತವರ್ಣದ ಕೆಂಪು ಬಣ್ಣವುಳ್ಳವಳು. ಮಣಿಪೂರಚಕ್ರವು ಅಗ್ನಿತತ್ತ್ವವಾದ್ದರಿಂದ ಶುದ್ಧ ಕೆಂಪುವರ್ಣವು.

**೫೦೦. ಮಾಂಸನಿಷ್ಠಾಯೈನಮಃ—**

ದೇಹದಲ್ಲಿರುವ ಮಾಂಸಕ್ಕೆ ಅಭಿಮಾನದೇವತೆಯು.

**೫೦೧. ಗುಡಾನ್ನಪ್ರೀತಮಾನಸಾಯೈನಮಃ—**

ಬೆಲ್ಲಮಿಶ್ರವಾದ ಆಹಾರದಲ್ಲಿ ಪ್ರೀತಿಯುಳ್ಳವಳು.

**೫೦೨. ಸಮಸ್ತಭಕ್ತಸುಖದಾಯೈನಮಃ —**

ಸಮಸ್ತ ಭಕ್ತರಿಗೂ ಸೌಖ್ಯವನ್ನುಂಟುಮಾಡುವವಳು. ಮಣಿಪೂರ ಚಕ್ರವು ಅಗ್ನಿತತ್ತ್ವವಾದ್ದರಿಂದ ಈ ಚಕ್ರದ ಅಭಿಮಾನಿದೇವತೆಯಾದ ಶ್ರೀದೇವಿಯು ಅಗ್ನಿಪಟುತ್ವದ ದೇಹಸೌಖ್ಯವನ್ನು ಧ್ಯಾನಾಭ್ಯಾಸಕಾಲದಲ್ಲಿ ದೇಹದಲ್ಲಿನ ಅಗ್ನಿಶಾಖವು ಊರ್ಧ್ವಮುಖವಾಗಿ ಅಮೃತಸ್ರಾವದಿಂದುಂಟಾಗುವ ಸುಖವನ್ನು ಅನುಗ್ರಹಿಸುವಳು.

**೫೦೩. ಲಾಕಿನ್ಯಂಬಾಸ್ವರೂಪಿಣ್ಯೈನಮಃ—**

ಲಾಕಿನಿ ಎಂದರೆ "ಲಾ-ಆದನೆ" ಹೀರುವುದೆಂದು ಅರ್ಥ. ಅಂದರೆ ಮಣಿಪೂರಚಕ್ರವು ಅಗ್ನಿತತ್ತ್ವದ ಕಾರ್ಯವಾಗಿ ಅಗ್ನಿಪಟುತ್ವದ ದೇಹಸೌಖ್ಯವನ್ನು, ಕಾಂತಿಯನ್ನೂ ಉಂಟುಮಾಡುವುದು. ಅಲ್ಲದೆ ಧ್ಯಾನಾಭ್ಯಾಸದಲ್ಲಿ ಅಂಧಕಾರವನ್ನು ಹೀರಿ ಅಂತರ್ಮುಖದ ತೇಜಸ್ಸನ್ನುಂಟುಮಾಡುವುದಲ್ಲದೆ ಅಗ್ನಿಶಾಖದಿಂದ ಅಮೃತಸ್ರಾವವನ್ನುಂಟುಮಾಡುವುದು. ಮಣಿಪೂರಚಕ್ರಕ್ಕೆ ವಾರಾಹಿಯು ಅಧಿದೇವತೆಯಾದುದರಿಂದ ವಾರಾಹಿ ಎನ್ನುವದಕ್ಕೂ "ವರಂ-ಶ್ರೇಷ್ಠಂ ಸತ್ವಂ ಹಂತಿ-ಗಚ್ಛತಿ (ಹನ-ಗತೌ) ಇತಿ ವರಾಹಃ" ಅಂದರೆ ತಮಸ್ಸನ್ನು ನಾಶಮಾಡಿ ಶ್ರೇಷ್ಠವಾದ ಸತ್ವವನ್ನು ಹೊಂದಿಸುವವಳು. ಆದುದರಿಂದ ೫೦೨ ನೇ ನಾಮದಲ್ಲಿ ಸಮಸ್ತ ಭಕ್ತಸುಖದಾ ಎಂದು ತಿಳಿಸಿರುವಂತೆ ಲಾಕಿನಿ ಎಂದರೆ ಭಕ್ತರಿಗೆ ಅಗ್ನಿತತ್ವದಿಂದ ಉಂಟಾಗುವ ಸುಖವನ್ನುಂಟುಮಾಡುವ ಮಾತೆಯಾಗಿರುವವಳು.

**೫೦೪. ಸ್ವಾಧಿಷ್ಠಾನಾಮ್ಬುಜಗತಾಯೈನಮಃ—**

ಸ್ವಾಧಿಷ್ಠಾನಚಕ್ರದಲ್ಲಿ ನೆಲೆಸಿರುವವಳು. ಸ್ವಾಧಿಷ್ಠಾನಚಕ್ರವು ನಮ್ಮ ಸೊಂಟದಲ್ಲಿ ಬೆನ್ನಿನ ಹುರಿಯಲ್ಲಿರುವುದು. ಜಲದ ತತ್ವಕ್ಕೆ ಪ್ರಧಾನವಾಗಿಯೂ, ಸಪ್ತವ್ಯಾಹೃತಿಗಳಲ್ಲಿ ಭುವಃ (ಜಲ) ತತ್ವದ್ದಾಗಿಯೂ, ಸಪ್ತಮಾತೃಕೆಯರಲ್ಲಿ ಇಂದ್ರಾಣಿಯೇ ದೇವತೆಯಾಗಿಯೂ, ಸಪ್ತಸ್ವರಗಳಲ್ಲಿ ಧೈವತಸ್ವರಕ್ಕೆ ಪ್ರಧಾನ ಸ್ಥಳವಾಗಿಯೂ ಇರುತ್ತದೆ. ೫೦೪ರಿಂದ ೫೧೪ನೇ ನಾಮದವರೆಗೂ ಸ್ವಾಧಿಷ್ಠಾನ ಚಕ್ರದ ವಿವರಣೆಯಾಗಿರುವುದು.

**೫೦೫. ಚತುರ್ವಕ್ತ್ರಮನೋಹರಾಯೈನಮಃ—**

ಮನೋಹರವಾದ ನಾಲಕ್ಕು ಮುಖಗಳುಳ್ಳವಳು. ಸ್ವಾಧಿಷ್ಠಾನ ಚಕ್ರವು ಜಲದತತ್ವಕ್ಕೆ ಪ್ರಧಾನವಾದುದರಿಂದಲೂ ಜಲವು ಆಕಾಶದಿಂದ ವಾಯುವು ಉತ್ಪನ್ನ ವಾಗಿ ವಾಯುವಿನಿಂದ ಅಗ್ನಿ ಉತ್ಪನ್ನವಾಗಿ ಅಗ್ನಿಯಿಂದ ಜಲವು ಉತ್ಪನ್ನವಾಗುವು ದರಿಂದಲೂ, ಆಕಾಶ, ವಾಯು, ಅಗ್ನಿ, ಜಲ, ಈ ನಾಲಕ್ಕು ತತ್ವಗಳೂ ಸೇರಿರುವುದೆಂಬ ಸೂಚನೆಯನ್ನು ಅನುಸರಿಸಿ ಸ್ವಾಧಿಷ್ಠಾನದಲ್ಲಿರುವ ಶ್ರೀದೇವಿಗೆ ನಾಲಕ್ಕು ಮುಖಗಳಿವೆ.

**೫೦೬. ಶೂಲಾದ್ಯಾಯುಧಸಂಪನ್ನಾಯೈನಮಃ—**

ಶೂಲವೇ ಮೊದಲಾದ ಆಯುಧಗಳನ್ನು ಧರಿಸಿರುವವಳು.

**೫೦೭. ಪೀತವರ್ಣಾಯೈನಮಃ—** ಹಳದೀವರ್ಣದವಳು.

**೫೦೮. ಅತಿಗರ್ವಿತಾಯೈನಮಃ—**

ಅತ್ಯಂತ ದರ್ಪಯುಕ್ತಳು. ಸಕಲನಾಡೀ ಚೈತನ್ಯಗಳೂ ಸ್ವಾಧಿಷ್ಠಾನದಲ್ಲಿ ಸೇರಿರುವುದರಿಂದಲೂ ಮತ್ತು ಈ ಚಕ್ರದ ಕೆಳಭಾಗದಲ್ಲಿ ಅಧಿಷ್ಠಾನವಾಗಿ ಶ್ರೀಕುಂಡಲಿನೀ ಶಕ್ತಿಯು ಇರುವುದರಿಂದಲೂ ದರ್ಪಕ್ಕೆ ತೌರುಮನೆಯಾಗಿದೆ.

**೫೦೯. ಮೇದೋನಿಷ್ಠಾಯೈನಮಃ—**

ದೇಹದಲ್ಲಿರುವ ಮೇದಸ್ಸಿಗೆ (ಕೊಬ್ಬಿಗೆ) ಅಧಿದೇವತೆಯು.

**೫೧೦. ಮಧುಪ್ರೀತಾಯೈನಮಃ—**

ಜೇನುತುಪ್ಪ ಮತ್ತು ಮಧುರಾಹಾರದಲ್ಲಿ ಪ್ರೀತಿಯುಳ್ಳವಳು.

**೫೧೧. ಬನ್ದಿನ್ಯಾದಿಸಮನ್ವಿತಾಯೈನಮಃ—**

ಬನ್ದಿನ್ಯಾದಿ ಶಕ್ತಿಗಳಿಂದ ಪರಿವೃತಳಾಗಿರುವವಳು. ಸ್ವಾಧಿಷ್ಠಾನಚಕ್ರವು ಆರು ದಳಗಳುಳ್ಳದ್ದು. ಈ ೬ ದಳಗಳೂ ಬ, ಭ, ಮ, ಯ, ರ, ಲ, ಎಂಬ ೬ ಅಕ್ಷರ ಶಕ್ತಿಗಳಾಗಿವೆ. ಈ ಆರು ಅಕ್ಷರಗಳಿಗೂ ಬಂದಿನಿ ಮೊದಲುಗೊಂಡು ಲಂಬೋಷ್ಠಿಯೇ ಅಂತ್ಯವಾಗುಳ್ಳ ಆರು ಮಂದಿ ಅಭಿಮಾನದೇವತಾ ಶಕ್ತಿಗಳಿವೆ. ಸ್ವಾಧಿಷ್ಠಾನದಲ್ಲಿ ನೆಲೆಸಿರುವ ಶ್ರೀದೇವಿಯು ಈ ಆರು ಅಭಿಮಾನದೇವತಾಶಕ್ತಿಗಳಿಂದ ಪರಿವೃತಳಾಗಿರುವಳು.

**೫೧೨. ದಧ್ಯನ್ನಾಸಕ್ತಹೃದಯಾಯೈನಮಃ—**

ಮೊಸರನ್ನದಲ್ಲಿ ಪ್ರೀತಿಯುಳ್ಳವಳು.

**೫೧೩. ಕಾಕಿನೀರೂಪಧಾರಿಣ್ಯೈನಮಃ—**

ಕಾಕಿ ಶಬ್ದಕ್ಕೆ ಜೀವ, ಪರಬ್ರಹ್ಮ, ಶಬ್ದ, ತನ್ನ ಹೆಸರನ್ನು ತಾನೇ ಹೇಳಿಕ್ಕೊಳ್ಳುವುದು, ಇತರರನ್ನು ಕಾಪಾಡುವುದು, ರೋಗರಹಿತವಾದುದು, ಮರಣವಿಲ್ಲದ್ದು, ಚಿರಂಜೀವಿ ಇಷ್ಟು ಅರ್ಥಗಳಾಗುವುವು. ಸ್ವಾಧಿಷ್ಠಾನ ಚಕ್ರದ ಕೆಳಗಡೆ ಇರುವ ಶ್ರೀಕುಂಡಲಿನೀ ಶಕ್ತಿಯು ತನಗೆ ತಾನೇ ಅಧಿಷ್ಠಾನವಾಗಿರುವದರಿಂದ ಈ ಚಕ್ರಕ್ಕೆ ಸ್ವಾಧಿಷ್ಠಾನವೆಂದು ಹೆಸರು ಬಂದಿದೆ. ಅಂದರೆ ತನ್ನ ಹೆಸರನ್ನು ತಾನೇ ಹೇಳಿಕ್ಕೊಳ್ಳುವ ತತ್ತ್ವವಾಗಿದೆ. ಅಂದರೆ ಈ ಸ್ವಾಧಿಷ್ಠಾನ ಚಕ್ರದಲ್ಲಿ ೭೨ ಸಾವಿರ ನಾಡೀಶಕ್ತಿಗಳು ಸೇರಿ ಈ ಶಕ್ತಿಗಳಿಗೆಲ್ಲಾ ಶಕ್ತಿರೂಪಳಾದ ಶ್ರೀಕುಂಡಲಿನಿಯೇ ಅಧಿಷ್ಠಾನಳಾಗಿರುವುದರಿಂದ ತನಗೆ ತಾನೇ ಅಧಿಷ್ಠಾನಳಾಗಿರುವವಳು. ಇದೇ ತನ್ನ ಹೆಸರನ್ನು ತಾನೇ ಹೇಳಿಕ್ಕೊಳ್ಳುವ ತತ್ತ್ವ. ಇವಳಿರುವ ಈ ಸ್ಥಾನವೇ ನಾದೋತ್ಪತ್ತಿಗೆ ಮೂಲವಾದ ಬಿಂದು ಪೀಠವಾಗಿರುವುದು. ಇದಕ್ಕೆ "ಶಿವಸ್ಯ ಬಿಂದು ರೂಪಸ್ಯ ಸ್ಥಾನಂತದ್ಧಿ ಪ್ರಕಾಶಕಂ। ಯತ್ರಕುಂಡಲಿನೀ ನಾಮ ಪರಾಶಕ್ತಿಃ ಪ್ರತಿಷ್ಠಿತಾ। ಯಸ್ಮಾದುತ್ಪದ್ಯತೇ ಬಿಂದು ರ್ಯಸ್ಮಾನ್ನಾದಃ ಪ್ರವರ್ಧತೆ" ಎಂಬ ಶ್ರುತ್ಯಾಧಾರವಿರುವುದು. ಆದುದರಿಂದ ಕಾಕೀ ಎನ್ನುವುದಕ್ಕೆ "ಕೈ ಶಬ್ದೆ" ಎಂಬ ಅರ್ಥದಂತೆ ಓಂಕಾರಶಬ್ದಕ್ಕೆ ಮೂಲಸ್ಥಾನವಾಗಿರುವುದು. ಶ್ರೀಕುಂಡಲಿನಿಯು ಉಪಾಧಿರಹಿತಳು. ಜನನ ಮರಣಗಳಿಲ್ಲದವಳು. ಜೀವ ಮತ್ತು ಪರಬ್ರಹ್ಮ ಸ್ವರೂಪಳು. ಶ್ರೀಕುಂಡಲಿನೀ ಶಕ್ತಿಯು ಮೂಲಾಧಾರ ಸ್ವಾಧಿಷ್ಠಾನಚಕ್ರಗಳೆರಡಕ್ಕೂ ಸಂಬಂಧವುಳ್ಳವಳಾದ್ದರಿಂದ ಸ್ವಾಧಿಷ್ಠಾನದಲ್ಲಿ ಪರಮೈಶ್ವರ್ಯ ಶಾಲಿನಿಯಾದ ಇಂದ್ರಾಣಿಯ ಸ್ವರೂಪಳಾಗಿ ಸಕಲವನ್ನೂ ಕಾಪಾಡುವವಳಾಗಿರುವುದೇ ಕಾಕಿನೀರೂಪಧಾರಿಣ್ಯೈನಮಃ ಎಂಬುದರ ಅರ್ಥ.

**೫೧೪. ಮೂಲಾಧಾರಾಮ್ಬುಜಾರೂಢಾಯೈನಮಃ—**

ಮೂಲಾಧಾರ ಚಕ್ರದ ಮೇಲ್ಭಾಗದಲ್ಲಿ ನೆಲೆಸಿರುವವಳು. ಮೂಲಾಧಾರ ಚಕ್ರವು ಸೊಂಟದ ಕೆಳಗೆ ಬೆನ್ನಿನ ಮೂಳೆಯ ಕೆಳಭಾಗದಲ್ಲಿ ಇರುವುದು. ಪೃಥ್ವೀ ತತ್ವಕ್ಕೆ ಮತ್ತು ಅನ್ನಮಯ ಕೋಶಕ್ಕೆ ಪ್ರಧಾನವಾಗಿಯೂ, ಸಪ್ತವ್ಯಾಹೃತಿಗಳಲ್ಲಿ ಭೂಃ ತತ್ವದ್ದಾಗಿಯೂ ಸಪ್ತಮಾತೃಕೆಯರಲ್ಲಿ ಶ್ರೀಚಾಮುಂಡೇಶ್ವರಿಯೇ ದೇವತೆಯಾಗಿಯೂ ಸಪ್ತಸ್ವರಗಳಲ್ಲಿ ನಿಷಾದ ಸ್ವರಕ್ಕೆ ಪ್ರಧಾನ ಸ್ಥಳವಾಗಿಯೂ ಇರುತ್ತದೆ. ೫೧೪ ರಿಂದ ೫೨೧ ರವರೆಗಿರುವ ನಾಮಗಳು ಮೂಲಾಧಾರಚಕ್ರದ ವಿವರಣೆಯಾಗಿರುವುವು. ಮೂಲಾಧಾರಚಕ್ರದ ತುದಿಯಲ್ಲಿ ನೆಲೆಸಿರುವವಳಾದುದರಿಂದ ಶ್ರೀದೇವಿಯು ಕುಂಡಲಿನೀ ಶಕ್ತಿಯಾಗಿರುತ್ತಾಳೆ.

**೫೧೫. ಪಂಚವಕ್ತ್ರಾಯೈನಮಃ—**

ಐದು ಮುಖಗಳುಳ್ಳವಳು. ಮೂಲಾಧಾರ ಚಕ್ರವು ಭೂ ಎಂದರೆ ಪೃಥ್ವೀ ತತ್ವದ್ದು. ಪೃಥ್ವಿಯಲ್ಲಿ ಆಕಾಶದಿಂದ ಉತ್ಪತ್ತಿಯಾಗುವ ಕ್ರಮವನ್ನು ಅನುಸರಿಸಿ ಆಕಾಶ, ವಾಯು, ಅಗ್ನಿ, ಜಲ, ಪೃಥ್ವೀ ಈ ೫ ತತ್ವಗಳಿರುವುದನ್ನು ಸೂಚಿಸುವದಕ್ಕೋಸ್ಕರ ಮೂಲಾಧಾರದಲ್ಲಿ ನೆಲೆಸಿರುವ ಶ್ರೀದೇವಿಗೆ ಐದು ಮುಖಗಳಿವೆ.

**೫೧೬. ಅಸ್ಥಿಸಂಸ್ಥಿತಾಯೈನಮಃ—**

ದೇಹವಲ್ಲಿರುವ ಮೂಳೆಗಳಿಗೆ ಅಧಿದೇವತೆಯು. ಮೂಳೆಯು ಪೃಥ್ವೀ ತತ್ವಕ್ಕೆ ಸೇರಿದುದು.

**೫೧೭. ಅಂಕುಶಾದಿಪ್ರಹರಣಾಯೈನಮಃ—**

ಅಂಕುಶವೇ ಮೊದಲಾದ ಆಯುಧಗಳನ್ನು ಧರಿಸಿರುವವಳು.

**೫೧೮. ವರದಾದಿನಿಷೇವಿತಾಯೈನಮಃ—**

ವರದಾದಿ ಶಕ್ತಿಗಳಿಂದ ಪರಿವೃತಳಾಗಿರುವವಳು.

ಮೂಲಾಧಾರಚಕ್ರವು ನಾಲ್ಕು ದಳಗಳುಳ್ಳದ್ದು. ಈ ನಾಲ್ಕು ದಳಗಳೂ ವ, ಶ, ಷ, ಸ, ಎಂಬ ನಾಲ್ಕು ಅಕ್ಷರ ಶಕ್ತಿಗಳಾಗಿವೆ. ಈ ನಾಲ್ಕು ಅಕ್ಷರಗಳಿಗೂ ವರದಾ ಮೊದಲು ಸರಸ್ವತಿಯೇ ಅಂತ್ಯವಾಗುಳ್ಳ ನಾಲಕ್ಕು ಅಭಿಮಾನಿ ದೇವತಾಶಕ್ತಿಗಳಿವೆ. ಮೂಲಾಧಾರದಲ್ಲಿ ನೆಲೆಸಿರುವ ಶ್ರೀದೇವಿಯು ಈ ನಾಲಕ್ಕು ಅಭಿಮಾನಿದೇವತಾ ಶಕ್ತಿಗಳಿಂದ ಪರಿವೃತಳಾಗಿರುವಳು.

**೫೧೯. ಮುದ್ಗೌದನಾಸಕ್ತ ಚಿತ್ತಾಯೈನಮಃ—**

ಹೆಸರುಬೇಳೆಯೊಡನೆ ಮಾಡಿದ ಹುಗ್ಗಿಯ ಆಹಾರದಲ್ಲಿ ಪ್ರೀತಿಯುಳ್ಳವಳು.

**೫೨೦. ಸಾಕಿನ್ಯಂಬಾಸ್ವರೂಪಿಣ್ಯೈನಮಃ—**

ಸಾಕಿನಿ ಶಬ್ದಕ್ಕೆ "ಸಹ ಅಕತಿ ಇತಿಸಾಕಂ," ಸೇರುವಿಕೆ. ಸ ಅಂದರೆ ಸರ್ಪ. "ಸೇನ+ಸಹ+ಅಕತೀತಿ=ಸಾಕಿನೀ." ಸರ್ಪದೊಂದಿಗೆ ಕೂಡಿಕೊಂಡಿರುವವಳು, ಎಂದು ಶಬ್ದಾರ್ಥಕಲ್ಪದ್ರುಮದಲ್ಲಿ ಅರ್ಥವಿರುವುದು. ಮೂಲಾಧಾರದಲ್ಲಿರುವ ಶ್ರೀಕುಂಡಲಿನೀ ಶಕ್ತಿಯು "ನಾಗರೂಪಾಮಹೋಜ್ವಲಾ"ಎಂಬ ಶ್ರುತ್ಯಾಧಾರದಂತೆ ಪ್ರಕಾಶಮಾನವಾದ ನಾಗರೂಪಳಾಗಿರುತ್ತಾಳೆ. ಸಾಕ ಎಂಬ ಶಬ್ದಕ್ಕೆ ವಿಷ್ಣು, ಈಶ್ವರ, ಸೂರ್ಯ, ಸರ್ಪಗಳೆಂಬ ಅರ್ಥವೆಂದು ನಿಘಂಟಿನಲ್ಲೀಬರೆದಿರುವುದು. ಅಂದರೆ ಪರಾಶಕ್ತಿಸ್ವರೂಪಿಣಿಯಾದ ಶ್ರೀಕುಂಡಲಿನೀ ದೇವಿಯೇ ಮಹತ್ತಾದ ಸರ್ಪರೂಪಳಾಗಿಯೂ ಇರುವಳು. ಅಂದರೆ ಸರ್ಪರೂಪವಾದ ಆದಿಶೇಷ ಶಕ್ತಿಯು ಜಗತ್ತನ್ನು ಕೇಂದ್ರಾಕರ್ಷಣಾಶಕ್ತಿಯಿಂದ ಕಟ್ಟುಹಾಕಿ ಅದನ್ನು ಧರಿಸಿರುವುದು. ಇದರಂತೆ ಪಿಂಡಾಂಡವಾದ ನಮ್ಮ ದೇಹವನ್ನು ಸೃಷ್ಟಿಸಿ ವ್ಯಾಪಾರಕ್ಕೋಸ್ಕರ ಅದನ್ನು ಕೇಂದ್ರಾಕರ್ಷಣಾಶಕ್ತಿಯಿಂದ ಧರಿಸಿಕೊಂಡು ಮೂಲಾಧಾರ ಮತ್ತು ಸ್ವಾಧಿಷ್ಠಾನ ಚಕ್ರಗಳ ನಡುವೆ ಸರ್ಪರೂಪಾಕಾರದಲ್ಲಿ ಜಗನ್ಮಾತೆಯೆನಿಸಿರುವ ಶ್ರೀಕುಂಡಲಿನೀ ಶಕ್ತಿಯು ನೆಲೆಸಿರುವಳು.

ಅಲ್ಲದೆ ಮೂಲಾಧಾರ ಚಕ್ರಕ್ಕೆ ಸಪ್ತಮಾತೃಕೆಯರಲ್ಲಿ ಶ್ರೀ ಚಾಮುಂಡೇಶ್ವರಿಯು ಅಧಿದೇವತೆಯು. ಶ್ರೀ ಚಾಮುಂಡೇಶ್ವರಿಯ ಅವತಾರವೇ ಶ್ರೀದೇವಿಯ ವಿರಾಟ್ಸ್ವರೂಪವು. ಶ್ರೀಕುಂಡಲಿನೀಶಕ್ತಿಯು ದೇಹವನ್ನು ಸೃಷ್ಟಿಮಾಡಿಕೊಂಡು ಅದನ್ನು ಧರಿಸಿಕೊಂಡು ವಿರಾಟ್‌ಸ್ವರೂಪಿಣಿಯಾಗಿ ವಿರಾಟ್‌ಸ್ವರೂಪಕ್ಕೆ ಸ್ಥಾನವಾದ ಮೂಲಾಧಾರದಲ್ಲಿ ನೆಲಸಿರುವಳು. ಮೋಕ್ಷ ಕ್ರಮದಲ್ಲಿ ಅವಿದ್ಯಾಶಕ್ತಿಗಳನ್ನೆಲ್ಲಾ ನಿಗ್ರಹಿಸಿ ಮೋಕ್ಷಸಾಮ್ರಾಜ್ಯವನ್ನು ಅನುಗ್ರಹಿಸುವಳು. ಆದುದರಿಂದ ಶ್ರೀ ಕುಂಡಲಿನಿಯೇ ಸಾಕಿನೀ ಎಂಬ ಮಾತೆಯ ಸ್ವರೂಪದಲ್ಲಿರುವವಳು.

**೫೨೧. ಆಜ್ಞಾಚಕ್ರಾಬ್ಜನಿಲಯಾಯೈನಮಃ—**

ಆಜ್ಞಾಚಕ್ರದಲ್ಲಿ ನೆಲೆಸಿರುವವಳು. ಆಜ್ಞಾಚಕ್ರವು ನಮ್ಮ ಭ್ರೂಮಧ್ಯಕ್ಕೆ ಸರಿಯಾಗಿ ಬೆನ್ನಿನ ಹುರಿಯಲ್ಲಿರುವುದು. ವಿಶುದ್ಧಚಕ್ರವು ಆಕಾಶತತ್ವವಾಗಿದೆಯೆಂದು ೪೭೫ ನೇ ನಾಮದಲ್ಲಿ ತಿಳಿಸಿರುತ್ತಷ್ಟೆ. ಈ ಆಜ್ಞಾಚಕ್ರವು ಆಕಾಶಾಂತರ್ಗತವಾಗಿರುವ ಸಮಸ್ತ ತತ್ವಗಳೂ ಏಕೀಭವಿಸಿರುವ ಶುದ್ಧ ಶಕ್ತಿ ತತ್ವಪ್ರಧಾನವಾಗಿಯೂ, ಸಪ್ತವ್ಯಾಹೃತಿಗಳಲ್ಲಿ ತಪಃ ತತ್ವದ್ದಾಗಿಯೂ, ಸಪ್ತಮಾತೃಕೆಯರಲ್ಲಿ

ಮಾಹೇಶ್ವರಿಯೇ ದೇವತೆಯಾಗಿಯೂ, ಸಪ್ತಸ್ವರಗಳಲ್ಲಿ ಋಷಭ ಸ್ವರಕ್ಕೆ ಪ್ರಧಾನ ಸ್ಥಳವಾಗಿಯೂ ಇರುತ್ತದೆ. ೫೨೧ ರಿಂದ ೫೨೮ ನೇ ನಾಮದವರಿಗೂ ಈ ಆಜ್ಞಾ ಚಕ್ರದ ವಿವರಣೆಯಾಗಿದೆ.

**೫೨೨. ಶುಕ್ಲವರ್ಣಾಯೈನಮಃ—**

ವರ್ಣಕ್ಕೆಲ್ಲಾ ಮೂಲವಾದ ಮತ್ತು ಶ್ರೇಷ್ಠವಾದ ಬಿಳೀವರ್ಣವಾಗಿರುವವಳು.

**೫೨೩. ಷಡಾನನಾಯೈನಮಃ—**

ಆರು ಮುಖಗಳುಳ್ಳವಳು. ಪಂಚಭೂತಗಳ ತನ್ಮಾತ್ರಾಶಕ್ತಿಯೂ ಈ ಪಂಚ ಭೂತಗಳಿಗೂ ಕಾರಣವಾದ ಶುದ್ಧ ಸತ್ವಶಕ್ತಿಯೂ ಸಂಮಿಳಿತವಾಗಿ ಆಜ್ಞಾಚಕ್ರ ದಲ್ಲಿರುವ ತತ್ವಸೂಚನೆಯೇ ಆಜ್ಞಾಚಕ್ರದಲ್ಲಿರುವ ಶ್ರೀದೇವಿಗೆ ಆರುಮುಖಗಳಿವೆ.

**೫೨೪. ಮಜ್ಜಾಸಂಸ್ಥಾಯೈನಮಃ—**

ದೇಹದಲ್ಲಿರುವ ಮಜ್ಜಾ ಧಾತುವಿಗೆ ಅಧಿದೇವತೆಯು.

**೫೨೫. ಹಂಸವತೀಮುಖ್ಯಶಕ್ತಿಸಮನ್ವಿತಾಯೈನಮಃ—**

ಹಂಸವತೀ ಮತ್ತು ಕ್ಷಮಾವತಿಯರೆಂಬ ಶಕ್ತಿಗಳಿಂದ ಪರಿವೃತಳಾಗಿರುವವಳು. ಆಜ್ಞಾಚಕ್ರವು ಯರಡು ದಳಗಳುಳ್ಳದ್ದು. ಈ ಎರಡು ದಳಗಳೂ ಹ, ಕ್ಷ, ಎಂಬ ಎರಡಕ್ಷರಗಳ ಶಕ್ತಿಗಳಾಗಿವೆ. ಈ ಎರಡು ಅಕ್ಷರಗಳಿಗೂ ಕ್ರಮವಾಗಿ ಹಂಸವತೀ ಮತ್ತು ಕ್ಷಮಾವತಿಯರು ಅಭಿಮಾನ ದೇವತೆಗಳು.

**೫೨೬. ಹರಿದ್ರಾನ್ನೈಕರಸಿಕಾಯೈನಮಃ—**

ಕೇಸರೀ ಅನ್ನವೆಂದರೆ ಶಾಲ್ಯಾನ್ನದ ಆಹಾರದಲ್ಲಿ ಪ್ರೀತಿಯುಳ್ಳವಳು.

**೫೨೭. ಹಾಕಿನೀರೂಪಧಾರಿಣ್ಯೈನಮಃ—**

ಹಾಕಿನೀ ಎಂಬ ಶಬ್ದಕ್ಕೆ "ಹಾ-ತ್ಯಾಗ" ಬಿಡುವುದು ಎಂದರ್ಥವಾಗುವುದು. ಅಂದರೆ ವಿಜ್ಞಾನಮಯ ಕೋಶಕ್ಕೆ ಪ್ರಧಾನವಾದ ಆಜ್ಞಾಚಕ್ರವು ಸಕಲ ಬಹಿರ್ವ್ಯಾಪಾರಗಳಿಂದ ಬಿಡಲ್ಪಟ್ಟ ಮತ್ತು ಪರಬ್ರಹ್ಮತ್ವವನ್ನು ಬಿಟ್ಟಿರುವ ಈಶ್ವರೀ ಸ್ಥಳವಾಗಿರುವುದು. ಹಾಕಿನೀ ಎಂಬ ಶಬ್ದಕ್ಕೆ "ಹಾ-ಗತಿ" ಗಮನವುಳ್ಳದ್ದೆಂದೂ ಅರ್ಥವಾಗುವುದು. ಅಂದರೆ ವಿಜ್ಞಾನಮಯ ಕೋಶದಿಂದಲೇ ಸಕಲ ವ್ಯಾಪಾರದ ಗಮನಕ್ಕೆ ಅಂಕುರಾರ್ಪಣವೆಂದರೆ ಆಜ್ಞಾಚಕ್ರಸ್ವರೂಪವಾದ

ಈಶ್ವರೀ ಸ್ಥಳದಿಂದಲೇ ಸೃಷ್ಟಿ ಮತ್ತು ವ್ಯಾಪಾರಕ್ಕೆ ಅಂಕುರವೆಂಬ ತತ್ವವಾಗಿದೆ. ಸಕಲ ಕಾರ್ಯಕ್ಕೂ ಮೂಲಸ್ಥಾನವಾಗಿ ಆಜ್ಞಾರೂಪವಾಗಿರುವುದರಿಂದ ಈ ಸ್ಥಳಕ್ಕೆ ಆಜ್ಞಾಚಕ್ರವೆಂದೂ ಹೆಸರು ಬಂದಿದೆ. ಅಂದರೆ ಜ್ಞಾನಶಕ್ತಿಯ ಮಹತ್ವವನ್ನು ಸೂಚಿಸುವುದು. ಅಲ್ಲದೆ ಆಜ್ಞಾಚಕ್ರದಿಂದ ಸಹಸ್ರಾರಕ್ಕೆಂದರೆ ಪರಬ್ರಹ್ಮತತ್ವಕ್ಕೆ ಹೋಗುವ ಜ್ಞಾನಮಾರ್ಗದ ಗಮನವುಳ್ಳದ್ದೆಂದೂ ಅರ್ಥವಾಗುವುದು. ಅಲ್ಲದೆ ಹಾಕಿನೀ ಎಂಬ ಶಬ್ದಕ್ಕೆ ಶಿವ, ಸ್ವರ್ಗ, ಧಾರಣ, ಪಾಪಹರಣ, ಚಂದ್ರ ಎಂಬ ಅರ್ಥಗಳನ್ನೂ ನಿಘಂಟಿನಲ್ಲೇ ಬರೆದಿರುವುದರಿಂದ ಸಾಕ್ಷಾತ್ ಈಶ್ವರೀ ಸ್ಥಳವೇ ಆಗಿರುವುದು. ಈ ತತ್ವಗಳಿಗನುಸಾರವಾಗಿ ಸಪ್ತಮಾತೃಕೆಯರಲ್ಲಿ ಮಾಹೇಶ್ವರಿಯೇ ಆಜ್ಞಾಚಕ್ರಕ್ಕೆ ಅಧಿದೇವತೆಯಾಗಿರುವಳು. ಆದುದರಿಂದ ಹಾಕಿನೀ ರೂಪಧಾರಿಣೀ ಎಂದರೆ ಮಾಹೇಶ್ವರೀ ಸ್ವರೂಪವಾಗಿ ಆಜ್ಞಾಚಕ್ರದಲ್ಲಿರುವವಳು ಎಂದು ಅರ್ಥ.

**೫೨೮. ಸಹಸ್ರದಳಪದ್ಮಸ್ಥಾಯೈನಮಃ—**

ಸಹಸ್ರಾರ ಕಮಲದಲ್ಲಿ ನೆಲೆಸಿರುವವಳು. ಸಹಸ್ರಾರ ಕಮಲವು ನಮ್ಮ ಶಿರಸ್ಸಿನಲ್ಲಿರುವುದು. ಪರಬ್ರಹ್ಮತತ್ವವೇ ಈ ಕಮಲದಲ್ಲಿರುವುದು. ಪರಬ್ರಹ್ಮವೇ ಆಗಿರುವ ಸಪ್ತವ್ಯಾಹೃತಿಗಳಲ್ಲಿನ ಸತ್ಯಂ ಎಂಬುದೂ ಸಪ್ತಮಾತೃಕೆಯರಲ್ಲಿ ಬ್ರಾಹ್ಮಿಯೂ, ಸಪ್ತಸ್ವರಗಳಲ್ಲಿನ ಷಡ್ಜಸ್ವರದ ತತ್ವಗಳೂ ಈ ಸ್ಥಾನದಲ್ಲಿರುತ್ತವೆ.

**೫೨೯. ಸರ್ವವರ್ಣೋಪಶೋಭಿತಾಯೈನಮಃ—**

ಎಲ್ಲಾ ಅಕ್ಷರಶಕ್ತಿಗಳಿಂದಲೂ ಎಲ್ಲಾ ಬಣ್ಣಗಳಿಂದಲೂ ಶೋಭಿಸಲ್ಪಡುವವಳು. ಅಂದರೆ ಪರಬ್ರಹ್ಮವೇ ಸರ್ವಾಕ್ಷರ ಮತ್ತು ಸರ್ವವರ್ಣಗಳಿಗೂ ಮೂಲವಾದುದೆಂಬ ತತ್ವ.

**೫೩೦. ಸರ್ವಾಯುಧಧರಾಯೈನಮಃ—**

ಸಕಲ ವಿಧವಾದ ಆಯುಧಗಳನ್ನೂ ಧರಿಸಿರುವವಳು. ಅಂದರೆ ಪರಬ್ರಹ್ಮವೇ ಸರ್ವವಿಧವಾದ ಸೃಷ್ಟಿ ರಕ್ಷಣೆ ಮತ್ತು ಲಯಗಳ ನಿಯಾಮಕಕ್ಕೂ ಕಾರಣವಾದುದು.

**೫೩೧. ಶುಕ್ಲಸಂಸ್ಥಿತಾಯೈನಮಃ—**

ವೀರ್ಯಕ್ಕೆ ಅಧಿದೇವತೆಯಾಗಿರುವವಳು. ಅಂದರೆ ದೇಹಕ್ಕೆ ಮೂಲವಾದದ್ದು ವೀರ್ಯ. ವೀರ್ಯದಂತೆ ದೇಹ. ಇದರಂತೆ "ಸರ್ವಂ ಖಲ್ವಿದಂ ಬ್ರಹ್ಮ" ಎಂಬ ಶ್ರುತಿವಚನಾನುಸಾರ ಪರಬ್ರಹ್ಮವೇ ಜಗತ್ತು. ಜಗತ್ತೇ

ಪರಬ್ರಹ್ಮ. ಶ್ರೀದೇವಿಯೇ ಪರಬ್ರಹ್ಮಸ್ವರೂಪಿಣಿಯು. ಅಂದರೆ ಬೀಜ ಸ್ವರೂಪಿಣಿಯು.

**೫೩೨. ಸರ್ವತೋಮುಖ್ಯೈನಮಃ—**

ಎಲ್ಲಾ ಕಡೆಯಲ್ಲೂ ಮುಖವುಳ್ಳವಳಾಗಿರುವವಳು. ಅಂದರೆ ಪರಬ್ರಹ್ಮವು ಸರ್ವತ್ರ ವ್ಯಾಪಿಸಿರುವುದರಿಂದಲೂ, ಸರ್ವವೂ ಪರಬ್ರಹ್ಮವೇ ಆಗಿರುವುದರಿಂದಲೂ ಸರ್ವತೋಮುಖವಾಗಿರುವುದೆಂಬ ತತ್ವ. "ವಿಶ್ವತಶ್ಚಕ್ಷುರುತ ವಿಶ್ವತೋಮುಖಃ" ಎಂಬ ಶ್ರುತ್ಯಾಧಾರ.

**೫೩೩. ಸರ್ವೌದನಪ್ರೀತಚಿತ್ತಾಯೈನಮಃ—**

ಎಲ್ಲಾ ವಿಧವಾದ ಅನ್ನದಲ್ಲೂ (ಆಹಾರದಲ್ಲೂ) ಪ್ರೀತಿಯುಳ್ಳವಳು. ಅಂದರೆ "ಅನ್ನಂ ಬ್ರಹ್ಮ" ಎಂಬ ಶ್ರುತಿವಚನಾನುಸಾರವಾಗಿ ಪರಬ್ರಹ್ಮವಲ್ಲದ ಪದಾರ್ಥವ್ಯಾವದೂ ಇಲ್ಲವಾದುದರಿಂದಲೂ, ಪ್ರಪಂಚವನ್ನೇ ಭಕ್ಷಿಸಿ ತಾನೊಬ್ಬಳೇ ಉಳಿಯುವವಳಾದುದರಿಂದಲೂ ಎಲ್ಲಾ ವಿಧವಾದ ಆಹಾರದಲ್ಲೂ ಪರಬ್ರಹ್ಮ ಸ್ವರೂಪಿಣಿಯಾದ ಶ್ರೀದೇವಿಗೆ ಪ್ರೀತಿಯು.

**೫೩೪. ಯಾಕಿನ್ಯಮ್ಬಾಸ್ವರೂಪಿಣ್ಯೈನಮಃ—**

ಯಾಕ ಶಬ್ದಕ್ಕೆ ವಾಣೀ, ಪುರುಷೋತ್ತಮ, ಸಂಕರ್ಷಣ, ಪ್ರಳಯಾಂತಕ ಎಂಬ ಅರ್ಥಗಳೆಂದು ನಿಘಂಟಿನಲ್ಲಿ ಬರೆದಿರುವುದು. ಈ ಎಲ್ಲಾ ಅರ್ಥಗಳೂ ಪರಬ್ರಹ್ಮಸ್ವರೂಪಿಣಿಯಾದ ಶ್ರೀದೇವಿಯದೇ ಆಗಿರುವುದು. ಅಲ್ಲದೆ ವಾಣೀ ಎಂದರೆ ಪರಬ್ರಹ್ಮ ಸ್ವರೂಪಿಣಿಯಾದ ಸರಸ್ವತೀ ಅಥವಾ ಬ್ರಾಹ್ಮಿಯೇ ಆಗಿರುತ್ತಾಳೆ. ಸಹಸ್ರಾರ ಕಮಲಕ್ಕೂ ಸಪ್ತಮಾತೃಕೆಯರಲ್ಲಿ ಬ್ರಾಹ್ಮಿಯೇ ಅಧಿದೇವತೆಯಾಗಿರುತ್ತಾಳೆ. ಆದುದರಿಂದ ಯಾಕಿನ್ಯಮ್ಬಾ ಸ್ವರೂಪಿಣಿಯೆಂದರೆ ಪರಬ್ರಹ್ಮ ಸ್ವರೂಪಿಣಿಯಾದ ಮಾತೆಯೇ ಆಗಿರುವಳು.

ಷಟ್ಚಕ್ರಗಳಲ್ಲಿ ಮೂಲಾಧಾರದಿಂದ ಪ್ರಾರಂಭಮಾಡಿ ಸಹಸ್ರಾರ ಕಮಲದ ವರೆಗೂ ಅಥವಾ ಸಹಸ್ರಾರದಿಂದ ಪ್ರಾರಂಭ ಮಾಡಿ ಮೂಲಾಧಾರದವರೆಗೂ ಕ್ರಮವಾಗಿ ತತ್ವಗಳನ್ನು ತಿಳಿಸದೆ ೪೭೫ ನೇ ನಾಮದಲ್ಲಿ ವಿಶುದ್ಧ ಚಕ್ರದಿಂದ ಪ್ರಾರಂಭಮಾಡಿ ಮೂಲಾಧಾರದವರೆಗೆ ಇರುವ ಚಕ್ರಗಳ ತತ್ವಗಳನ್ನು ತಿಳಿಸಿ ಅನಂತರ ಆಜ್ಞಾ ಮತ್ತು ಸಹಸ್ರಾರದ ತತ್ವವನ್ನು ತಿಳಿಸಿರುವ ಕಾರಣ ವೇನೆಂದರೆ.—"ಆತ್ಮನ ಆಕಾಶಸ್ಸಂಭೂತಃ ಆಕಾಶಾದ್ವಾಯುಃ ವಾಯೋರಗ್ನಿಃ ಅಗ್ನೇರಾಪಃ ಅದ್ಭ್ಯಃಪೃಥ್ವೀ" ಎಂಬ ಶ್ರುತಿವಚನದಂತೆ ಆಕಾಶತತ್ವದಿಂದ

ಭೂತತ್ವದವರೆಗೂ ಆಗುವ ಸೃಷ್ಟಿಕ್ರಮವನ್ನು ಸೂಚಿಸುವ ತತ್ವವೇ ವಿಶುದ್ಧ ಚಕ್ರ ದಿಂದ ಪ್ರಾರಂಭವಮಾಡಿ ಮೂಲಾಧಾರದವರೆಗೂ ಇರುವ ಚಕ್ರಗಳ ತತ್ವಗಳನ್ನು ತಿಳಿಸಿರುವುದಾಗಿದೆ. ಇದೇ ಸೃಷ್ಟಿಕ್ರಮದ ಶ್ರೀಚಕ್ರವಾಗಿರುವುದು. ವಿಶುದ್ಧ ಚಕ್ರ ದಿಂದ ಮೂಲಾಧಾರ ಚಕ್ರದವರೆಗೆ ತಿಳಿಸಿರುವ ತತ್ವಗಳೆಲ್ಲಾ ಸುಷುಮ್ನಾ ನಾಡಿಯ ಹೊರಪ್ರಾಕಾರಕ್ಕೆ ಸಂಬಂಧಿಸಿ ಸೃಷ್ಟಿ ಮತ್ತು ವ್ಯಾಪಾರಗಳ ಕಾರ್ಯಕ್ಕೆ ಅನುಕೂಲವಾದದ್ದಾಗಿರುವುದು. ಮೂಲಾಧಾರ ಚಕ್ರದ ವಿಚಾರವನ್ನು ತಿಳಿಸಿದ ಅನಂತರ ಆಜ್ಞಾ ಮತ್ತು ಸಹಸ್ರಾರ ಕಮಲಗಳ ವಿಚಾರವನ್ನು ತಿಳಿಸಿರುವುದರ ತತ್ವವು ಸುಷುಮ್ನಾನಾಡಿಯೊಳಕ್ಕೆ ಸಂಬಂಧಿಸಿ ಮೋಕ್ಷಕ್ರಮವನ್ನು ಸೂಚಿಸು ವುದು. ಹಿಂದೆ ೯೭ ರಿಂದ ೧೧೧ ನೇ ನಾಮದವರೆಗೆ ಮೂಲಾಧಾರೈಕನಿಲಯಾ, ಬ್ರಹ್ಮಗ್ರಂಥಿ ವಿಭೇದಿನೀ ಮುಂತಾಗಿ ತಿಳಿಸಿರುವ ಮೋಕ್ಷಕ್ರಮದ ತತ್ವವನ್ನು ಇಲ್ಲಿಗೆ ಅನ್ವಯಮಾಡಿಕೊಳ್ಳಬೇಕು.

೪೭೫ ನೆಯ ನಾಮದಿಂದ ಪ್ರಾರಂಭವಾಗಿ ವಿವರಿಸಿರುವ ವಿಶುದ್ಧ ಚಕ್ರಾದಿ ಸಪ್ತಚಕ್ರಗಳು ನಮ್ಮ ದೇಹದಲ್ಲಿರುವಿಕೆಯನ್ನು ತೋರಿಸಲು ಚಿತ್ರವೊಂದನ್ನು ಇಲ್ಲಿ ಕೊಟ್ಟಿದೆ. ಸಹಸ್ರಾರ ಕಮಲ ಹೊರತು ಉಳಿದ ಆರು ಚಕ್ರಗಳಲ್ಲಿರುವ ವಿವರಣೆಯನ್ನು ಚಿತ್ರದಲ್ಲಿ ಬರೆದಿರುವುದು. ಚಿತ್ರದಲ್ಲಿರುವ ಚಕ್ರಗಳ ದಳಗಳೇ ಅಕ್ಷರಶಕ್ತಿಗಳಾಗಿವೆ. ಯಾವ ಯಾವ ಚಕ್ರಗಳಲ್ಲಿ ಯಾವ ಯಾವ ಅಕ್ಷರಶಕ್ತಿ ಗಳಿವೆಯೊ ಅವನ್ನು ಗುರುತಿಸಿರುವುದು ಹ ಅಕ್ಷರಕ್ಕೆ ಹಂಸವತೀ, ಡ ಅಕ್ಷರಕ್ಕೆ ಡಾಮರೀ ಈ ರೀತಿಯಾಗಿ ಪ್ರತಿಯೊಂದು ಅಕ್ಷರಕ್ಕೂ ಅಭಿಮಾನಿ ದೇವತಾ ಶಕ್ತಿಗಳ ಹೆಸರುಗಳಿರುವುವು. ಈ ಹೆಸರುಗಳ ತತ್ವಗಳನ್ನು ಶ್ರುತ್ಯಾಧಾರಗಳೊಡನೆ ವಿವರಿಸಬಹುದು. ದೊಡ್ಡ ಗ್ರಂಥವೇ ಆಗುವುದರಿಂದ ಇಲ್ಲಿ ವಿವರಿಸಲಿಲ್ಲ. ಈ ಅಕ್ಷರಶಕ್ತಿಗಳಿಂದ ಪರಿವೃತರಾಗಿ ಆಯಾಯಾ ಚಕ್ರಗಳ ಮುಖ್ಯವಾದ ಅಭಿಮಾನಿ ದೇವತಾಶಕ್ತಿಗಳಾದ ಬ್ರಾಹ್ಮೀ, ಮಾಹೇಶ್ವರೀ ಮೊದಲಾದ ಸಪ್ತಮಾತೃಕೆಗಳ ವಿಚಾರವು ಬಂದೇ ಇರುವುದು. ಅಲ್ಲದೆ ಭೂಲೋಕ, ಭುವರ್ಲೋಕ ಮುಂತಾದ ಸಪ್ತಲೋಕಗಳನ್ನು ಮತ್ತು ಭೂಃ, ಭುವಃ ಮುಂತಾದ ಸಪ್ತವ್ಯಾಹೃತಿಗಳನ್ನು ಚಕ್ರಗಳಲ್ಲಿ ಗುರುತಿಸಿದೆ. ವೇದದ ಆಧಾರದ ಮೇಲೆಯೆ ಇರುವ ಸಂಗೀತ ಶಾಸ್ತ್ರದ ಸ, ರಿ, ಗ, ಮ, ಪ, ಧ, ನಿ, ಗಳಾದ ಸಪ್ತಸ್ವರಗಳನ್ನು ಚಕ್ರಗಳಲ್ಲಿ ಗುರುತಿಸಿರುವುದು. ಚಕ್ರಗಳಲ್ಲಿ ಗುರುತಿಸಿರುವ ಸಪ್ತವ್ಯಾಹೃತಿ ಮತ್ತು ಸಪ್ತಸ್ವರ ಗಳ ತತ್ವಗಳನ್ನು ಅರಿಯಲು ಶ್ರೀ ಸರಸ್ವತೀ ಹಸ್ತದಲ್ಲಿರುವ ವೀಣೆಯನ್ನು ಮನುಷ್ಯ ದೇಹಕ್ಕೆ ಅನ್ವಯಮಾಡಿ ನನ್ನಿಂದ ಬರೆದಿರುವ ಶ್ರೀ ಸರಸ್ವತೀ ಮಹಿಮಾ (ವೀಣಾ ರಹಸ್ಯ) ಗ್ರಂಥವನ್ನು ಪಠಿಸಿ ತಿಳಿದುಕೊಳ್ಳಬಹುದು. ಅಲ್ಲದೆ ಅನ್ನಮಯಾದಿ ಪಂಚಕೋಶಗಳ ಪ್ರಧಾನಸ್ಥಳವು ಯಾವ ಯಾವ ಚಕ್ರಗಳಲ್ಲಿ ಇರುವುವೊ ಅವು




**ಮೂಲಾಧಾರಚಕ್ರದಾರಭ್ಯ ಸಹಸ್ರಾರಕಮಲದವರೆಗೆ ಇರುವ ತತ್ವಗಳನ್ನು ತೋರಿಸುವ ಚಿತ್ರ.**

ಗಳನ್ನೂ ಗುರ್ತಿಸಿರುವುದು. ಈ ಕೋಶಗಳಿಗೆ ಆಯಾಯ ಚಕ್ರಗಳು ಏತಕ್ಕೆ ಪ್ರಧಾನ ಸ್ಥಳಗಳಾಗಿವೆ ಎಂಬ ತತ್ವಗಳನ್ನು ವಿವರಿಸಲು ದೊಡ್ಡ ಗ್ರಂಥವಾಗುವುದು. ಇದೇ ವಿಧವಾದ ಚಕ್ರದ ಚಿತ್ರವನ್ನು ಕೊಟ್ಟು ರಾಮಾಯಣದಲ್ಲಿ ಬರುವ ಚಿತ್ರ ಕೂಟ ಮುಂತಾದ ಸ್ಥಳಗಳನ್ನು ಪಂಚಕೋಶಗಳಿಗೆ ಅನ್ವಯಿಸಿ ನನ್ನಿಂದ ಬರೆ ದಿರುವ ಶ್ರೀಮದ್ರಾಮಾಯಣದ ಅಂತರಾರ್ಥ ಅಥವಾ ಮೋಕ್ಷಮಾರ್ಗ ಪ್ರದೀಪಿಕೆ ಎಂಬ ಗ್ರಂಥವನ್ನು ಪಠಿಸಿದರೆ ಇವುಗಳ ವಿವರವೆಲ್ಲಾ ಗೊತ್ತಾಗುವುದು.

ಮುಖ್ಯವಾಗಿ ಆಜ್ಞಾದಿಂದ ಮೂಲಾಧಾರ ಚಕ್ರದವರೆಗಿನ ಆರು ಚಕ್ರ ಗಳಲ್ಲಿರುವ ಅಕ್ಷರ ಮತ್ತು ಇತರ ತತ್ವಗಳೆಲ್ಲಾ ಸುಷುಮ್ನಾನಾಡಿಯ ಹೊರ ಪ್ರಾಕಾರದಲ್ಲಿ ಚಕ್ರಗಳಲ್ಲಿರುತ್ತವೆ. ಸೊಂಟದ ಕೆಳಗಿನಿಂದ ಶಿರಸ್ಸಿನವರೆಗೂ ತಾವರೆ ನಾಳದಂತೆ ಗುರ್ತಿಸಿರುವುದೇ ಸುಷುಮ್ನಾ ನಾಡಿಯಾಗಿದೆ. ಈ ನಾಳದ ಮೇಲ್ಭಾಗದ ತುದಿಯಲ್ಲಿರುವ ಕಮಲ ಪುಷ್ಪದ ಸ್ಥಳವೇ ಸಹಸ್ರಾರ ಕಮಲವೆನಿಸಿ ಪರಬ್ರಹ್ಮ ಅಥವಾ ಓಂಕಾರಸ್ಥಾನವಾಗಿದೆ. ಓಂಕಾರಾಕ್ಷರವನ್ನು ಬಿಡಿಸಿದ (ಅ, ಉ, ಮ, ಂ) ಇವುಗಳು ಓಂಕಾರ ಅಥವಾ ಅನಾಹತ ನಾದಬ್ರಹ್ಮವಾಗಿ ಸುಷುಮ್ನಾನಾಡಿಯೊಳಗೆ ಇರುತ್ತವೆ. ಸುಷುಮ್ನಾನಾಡಿಯ ಹೊರಪ್ರಾಕಾರದಲ್ಲಿ ರುವ ಅಕ್ಷರ ಮತ್ತು ಇತರ ತತ್ವಗಳೆಲ್ಲಾ ಆಹತನಾದಕ್ಕೆ ಸೇರಿ ಓಂಕಾರದ ವಿವ ರಣೆಯಾದ ಸಗುಣಶಕ್ತಿಗಳೆನಿಸಿ ಬ್ರಹ್ಮಾಂಡ ಮತ್ತು ಪಿಂಡಾಂಡವಾದ ನಮ್ಮ ದೇಹದ ಸೃಷ್ಟಿ ಮತ್ತು ವ್ಯಾಪಾರಕ್ಕೆ ಸಂಬಂಧಪಟ್ಟವುಗಳಾಗಿವೆ. ಈ ಅಕ್ಷರಗಳಲ್ಲಿ ಸ ಅಕ್ಷರವು ಮೂಲಾಧಾರಚಕ್ರದಲ್ಲಿಯೂ ಹ ಅಕ್ಷರವು ಆಜ್ಞಾಚಕ್ರದಲ್ಲೂ ಇರು ವುವು. ಸ ಅಕ್ಷರವೇ ಶುದ್ಧಸತ್ವಶಕ್ತಿಯಾಗಿ ದೇಹವನ್ನು ಸೃಷ್ಟಿಸಿಕೊಂಡು ಕುಂಡಲಿನೀ ಶಕ್ತಿಯೆನಿಸಿಕೊಂಡು ಮೂಲಾಧಾರ ಚಕ್ರದಲ್ಲಿರುವುದು. ಇದೇ ಚಂದ್ರಶಕ್ತಿಯಾಗಿರುವುದು. ಹ ಅಕ್ಷರವೆ ಸೂರ್ಯಶಕ್ತಿಯಾಗಿಯೂ ಜೀವನಾಗಿಯೂ ಇರುವುದು. ಭ್ರೂಮಧ್ಯದಲ್ಲಿರುವ ಹ ಅಕ್ಷರಸ್ವರೂಪನಾದ ಸೂರ್ಯನೂ ಮೂಲಾ ಧಾರದಲ್ಲಿರುವ ಸ ಅಕ್ಷರಸ್ವರೂಪನಾದ ಚಂದ್ರನೂ ಒಂದಕ್ಕೊಂದು ಆಕರ್ಷಿಸು ವುದರಿಂದ ಯಾತಾಯಾತಾ ರೂಪವಾದ ಸ್ಪಂದನ ಶಕ್ತಿಯಾಗಿ ಪಂಚಪ್ರಾಣಗಳ ಮತ್ತು ಶ್ವಾಸೋಛ್ವಾಸದ ಕಾರ್ಯವಾಗುವುದು ಹ ಅಕ್ಷರದ ತತ್ವವಾದ ಸೂರ್ಯನ ಮತ್ತು ಸ ಅಕ್ಷರದ ತತ್ವವಾದ ಚಂದ್ರನ ಯಾತಾ ಯಾತಾ ಕಾರ್ಯಗಳು ಸುಷುಮ್ನಾ ನಾಡಿಯ ಎಡಬಲ ಭಾಗದಲ್ಲಿರುವ ಚಂದ್ರಸೂರ್ಯ ನಾಡಿಗಳಿಂದ ನಡೆಯುವುವು ಮೇಲಿನ ತತ್ವಕ್ಕೆ,

ಹಕಾರೇಣ ಬಹಿರ್ಯಾತಿ ಸಕಾರೇಣ ವಸೇತ್ಪುನಃ |
ಹಂಸ ಹಂಸೇತ್ಯಮುಂ ಮಂತ್ರಂ ಜೀವೋ ಜಪತಿ ಸರ್ವದಾ ||

ಎಂಬ ಶ್ರುತಿಪ್ರಮಾಣವೇ ಇರುವುದು. ಅಂದರೆ ಶ್ವಾಸೋಛ್ವಾಸವು ಹ ಅಕ್ಷರದ

ಶಕ್ತಿಯಿಂದ ಹೊರಕ್ಕೆ ಬರುತ್ತದೆ. ಸ ಅಕ್ಷರದ ಶಕ್ತಿಯಿಂದ ಮೇಲಕ್ಕೆ ಹೋಗುವುದು. ಈ ಯಾತಾಯಾತದಿಂದ ಉಂಟಾಗುವ ಹಂಸಹಂಸ (ಅಹಂಸಃ) ಎಂಬ ಮಂತ್ರವನ್ನು ಜೀವನು ಪುನರಾವರ್ತಿ ಮಾಡುತ್ತಲೇ ಇರುತ್ತಾನೆ. ಆದುದರಿಂದ ಭ್ರೂಮಧ್ಯದಲ್ಲಿರುವ ಹ ಅಕ್ಷರ ಮೂಲಾಧಾರದಲ್ಲಿರುವ ಸ ಅಕ್ಷರಗಳ ಆಕರ್ಷಣೆಗಳ ಯಾತಾಯಾತದಿಂದ ಸ್ಪಂದನ ಶಕ್ತಿಯಾಗಿ ಪಂಚ ಪ್ರಾಣಗಳ ಮತ್ತು ಶ್ವಾಸೋಛ್ವಾಸದ ಕಾರ್ಯ ನಡೆಯುವುದರಿಂದ ಕ್ರಿಯಾಶಕ್ತಿಯು ದೇಹಕ್ಕೆ ಉಂಟಾಗುವುದು. ಈ ಯಾತಾಯಾತದಿಂದ ಹಂಸ ಶಬ್ದವುಂಟಾಗುವುದರಿಂದ ಜೀವನು ಹಂಸನೆಂದು ಕರೆಯಲ್ಪಡುವನು.

ಮೇಲಿನ ವಿಚಾರಗಳೆಲ್ಲಾ ದೇಹದ ವ್ಯಾಪಾರ ಕ್ರಮಕ್ಕೆ ಸೇರಿದುದು. ಮೋಕ್ಷಕ್ರಮದಲ್ಲಿ ಮೂಲಾಧಾರದಲ್ಲಿರುವ ಸ ಅಕ್ಷರಶಕ್ತಿಯು ಸೂರ್ಯ ಚಂದ್ರ ನಾಡಿಗಳ ಯಾತಾಯಾತಗಳನ್ನು ತಡೆದು ಸುಷುಮ್ನಾನಾಡಿಯೊಳಗೆ ಪ್ರವೇಶಿಸಿ ಅನಾಹತ ಚಕ್ರದಲ್ಲಿರುವ ಓಂಕಾರದಲ್ಲಿನ ಉ ಕಾರವನ್ನು ಸೇರಿ ಸೋ ಆಗಿ ಅನಂತರ ಆಜ್ಞಾಚಕ್ರದಲ್ಲಿರುವ ಹ ಅಕ್ಷರವನ್ನೂ ಓಂಕಾರದಲ್ಲಿನ ಅನುಸ್ವಾರವನ್ನೂ ಸೇರಿ ಸೋಹಂ ಆಗುವುದು. ಅಂದರೆ ಸ ಅಕ್ಷರಶಕ್ತಿಯು ಧ್ಯಾನಾಭ್ಯಾಸದಿಂದ ಸುಷುಮ್ನಾದಲ್ಲಿ ಪ್ರವೇಶಿಸುತ್ತಾ ಬರುವುದು. ಧ್ಯಾನಕಾಲದಲ್ಲಿ ಅಂತರ್ಮುಖದಲ್ಲಿ ಗೋಚರವಾಗುವ ತೇಜಸ್ಸನ್ನೇ ನಾನೆಂದು ಧರಿಸಿ ಧ್ಯಾನಮಾಡುತ್ತಾ ಬಂದರೇನೆ ಧ್ಯಾನಾಭಿವೃದ್ಧಿಯಾಗಿ ಧ್ಯಾನದಲ್ಲಿ ಸ್ಥಿರತ್ವವುಂಟಾಗುವುದು. ಹೀಗೆ ಧ್ಯಾನದಲ್ಲಿ ಸ್ಥಿರತ್ವವುಂಟಾಗುವಿಕೆಯೆ ಸೋಹಂ ಆಗುವಿಕೆಯಾಗಿದೆ. ಧ್ಯಾನದಲ್ಲಿ ಸ್ಥಿರತ್ವ ಉಂಟಾಗುತ್ತಾ ಧ್ಯಾನದ ಪರಿಪಕ್ವಾವಸ್ಥೆಗೆ ಬಂದಕಾಲದಲ್ಲಿ ಸೋಹಂ ಹೋಗಿ ಅಹಂ (ನಾನು) ಎಂಬ ಜ್ಞಾನಮಾತ್ರ ಶೇಷವಾಗಿ ನಿಲ್ಲುವುದು. ಅಂದರೆ ಸೋಹಂ ಎನ್ನುವುದರ ತತ್ವವಾದ ತೇಜಸ್ಸೇ ನಾನೆಂದು ಧ್ಯಾನಮಾಡುವುದರಲ್ಲಿ ಧ್ಯಾನ ಮಾಡುವವನು, ಧ್ಯಾನಮಾಡುವಿಕೆ, ಧ್ಯಾನಮಾಡುವ ವಸ್ತು ಎಂಬ ತ್ರಿಪುಟಿಯು ಇರುವುದು. ಅಹಂ ಎಂಬ ಜ್ಞಾನಮಾತ್ರ ಉಳಿಯುವ ಸ್ಥಿತಿಯಲ್ಲಿ ಧ್ಯಾನಮಾಡುವಿಕೆ ಧ್ಯಾನಮಾಡುವ ವಸ್ತು ಈ ಎರಡೂ ಹೋಗಿ ಧ್ಯಾನಮಾಡುವವನೆಂದರೆ ಅಹಂ ಜ್ಞಾನ ಮಾತ್ರ ಶೇಷವಾಗಿ ನಿಲ್ಲುವುದು. ಶೇಷವಾಗಿರುವ ಈ ಅಹಂ ಪದದಲ್ಲಿ ಅಕ್ಷರಕ್ಕೆಲ್ಲಾ ಪ್ರಥಮಾಕ್ಷರವಾದ ಅ ಅಕ್ಷರವು ಅಕ್ಷರಗಳಿಗೆಲ್ಲಾ ಕೊನೆಯದಾದ ಹ ಅಕ್ಷರವು ಮತ್ತು ಅನುಸ್ವಾರ (ಂ) ವೂ ಸೇರಿರುವ ಸ್ಥಿತಿಯಾಗಿದೆ. ಅಂದರೆ ಶೇಷವಾಗಿ ನಿಲ್ಲುವ ಅಹಂ ಜ್ಞಾನದಲ್ಲಿ ಸಕಲಾಕ್ಷರಗಳೆಂದರೆ ದೇಹದ ಸಕಲ ತತ್ವಗಳೂ ವೃಕ್ಷದ ಸಾರವೆಲ್ಲಾ ಬೀಜದಲ್ಲಿ ಅಡಗುವಂತೆ ಆದಿ ಮತ್ತು ಅಂತ್ಯಾಕ್ಷರಗಳು ಸೇರಿ ಆಗುವ ಅಹಂ ಜ್ಞಾನದಲ್ಲಿ ಅಡಗುವುವು.

ಆಜ್ಞಾಚಕ್ರದಲ್ಲಿರುವ ಕ್ಷ ಅಕ್ಷರವು ಕ ಮತ್ತು ಷ ಎಂಬೆರಡೂ ಸೇರಿ ಕ್ಷ ಅಕ್ಷರವಾಗಿ ದೇಹವ್ಯಾಪಾರದ ತತ್ವಕ್ಕೆ ಸೇರಿದೆ. ಶೇಷವಾಗಿ ನಿಲ್ಲುವ ಅಹಂ ಜ್ಞಾನದಲ್ಲಿ ಕ, ಷ ಅಕ್ಷರಗಳು ಸೇರಿಹೋಗಿರುವುದರಿಂದ ಕ್ಷ ಅಕ್ಷರವೂ ಅಹಂ ನಲ್ಲಿ ಸೇರಿಯೇ ಇರುತ್ತದೆ.

ಶೇಷವಾಗಿ ನಿಲ್ಲುವ ಅಹಂ ಜ್ಞಾನವು ಸಹಸ್ರಾರ ಕಮಲದಲ್ಲಿ ಸರ್ವವ್ಯಾಪಿಯೂ, ಪುರುಷೋತ್ತಮನೂ, ಸಚ್ಚಿದಾನಂದ ಸ್ವರೂಪನೂ ಆದ ಪರಬ್ರಹ್ಮನಲ್ಲಿ ಉಪ್ಪು ನೀರಿನಲ್ಲಿ ಕರಗಿದಂತೆ ಅಭೇದದಿಂದ ಕರಗಿಹೋಗುವುದು. ಅಂದರೆ ಅಹಂ ನಲ್ಲಿರುವ ಅ ಅಕ್ಷರಶಕ್ತಿ ಹ ಅಕ್ಷರಶಕ್ತಿ ಮತ್ತು ಅನುಸ್ವಾರ ಇವುಗಳೆಲ್ಲಾ ಒಟ್ಟಿಗೆ ಸೇರಿಹೋಗುವ ಸ್ಥಿತಿಯಾದ ಅಂದರೆ ಅಹಂ ಶಬ್ದವನ್ನು ದೀರ್ಘವಾಗಿ ಉಚ್ಚರಿಸುವುದರಿಂದುಂಟಾಗುವ ಅರ್ಧಮಾತ್ರಾ ಸ್ವರೂಪವೆಂದರೆ ಕಳಾಸ್ವರೂಪವಾಗಿ ಅನಂತರ ನಿಶ್ಚಲತ್ವವನ್ನು ಪಡೆಯುವುದು. ಅಂದರೆ ಪರಮಾತ್ಮಸ್ವರೂಪವಾಗುವುದು. ಇದೇ ಓಂಕಾರದ ತತ್ವವೂ ಓಂ ಇತ್ಯೇಕಾಕ್ಷರಂಬ್ರಹ್ಮ ಎನ್ನುವುದರ ತತ್ವವೂ ಆಗಿರುವುದು. ಸ ಅಕ್ಷರವು ಸೋಹಂ ರೂಪಕ್ಕೆ ಬಂದು ಪರಮಾತ್ಮಸ್ಥಿತಿಯುಂಟಾಗುವ ಮೋಕ್ಷಕ್ರಮದ ತತ್ವವೇ ೯೭ನೆಯ ನಾಮವಾದ ಮೂಲಾಧಾರೈಕನಿಲಯಾ ಬ್ರಹ್ಮಗ್ರಂಥಿವಿಭೇದಿನಿ ಮೊದಲುಗೊಂಡು ತಿಳಿಸುವ ಸಮಯಮತವಾಗಿದೆ. ಶ್ರೀಕೃಷ್ಣ ಪರಮಾತ್ಮನು ಭಗವದ್ಗೀತೆಯಲ್ಲಿ ತಿಳಿಸುವ ಕ್ಷರವೆಂದರೆ ನಾಶವಾಗುವ ಮಲಿನ ಪ್ರಕೃತಿಸ್ವರೂಪವಾಗಿರುವುದೆ ನಮ್ಮ ಸ್ಥೂಲದೇಹವು. ಅಕ್ಷರವೆಂದು ಹೇಳಿರುವುದೇ ನಾಶರಹಿತವಾದ ಶುದ್ಧಸತ್ವಪ್ರಕೃತಿಸ್ವರೂಪವಾದ ಓಂಕಾರದ ವಿವರಣೆಯಾದ ನಮ್ಮ ದೇಹದ ಸೃಷ್ಟಿವ್ಯಾಪಾರಗಳಿಗೆ ಆಧಾರವಾದ ಷಟ್ಚಕ್ರಗಳಲ್ಲಿರುವ ಅಕ್ಷರಶಕ್ತಿಗಳೇ ಆಗಿರುತ್ತವೆ. ಅಕ್ಷರಗಳೆಲ್ಲಾ ಒಟ್ಟುಗೂಡುವ ಅಹಂ ಶೇಷವಾಗಿ ನಿಲ್ಲುವ ಸ್ಥಿತಿಯಾಗಿ ಈ ಅಹಂ ಎನ್ನುವುದು ಪುರುಷೋತ್ತಮನಾದ ಪರಮಾತ್ಮನಲ್ಲಿ ಅಭೇದದಿಂದ ಸೇರಿಹೋಗುವುದು. ಹೀಗೆ ಅಭೇದದಿಂದ ಸೇರಿ ಹೋಗುವುದರಿಂದಲೆ ಅಕ್ಷರಕ್ಕೆ ನಾಶರಹಿತವೆಂದು ಅರ್ಥವಿದೆ.

ಶೇಷವಾಗಿ ನಿಲ್ಲುವ ಅಹಂ ಎನ್ನುವುದು ಪರಮಾತ್ಮನಲ್ಲಿ ಸೇರಿಹೋಗುವುದೆಂತ ಮೇಲೆ ತಿಳಿಸಿತಷ್ಟೆ? ಅಹಂ ಎನ್ನುವುದು ಪರಮಾತ್ಮನಲ್ಲಿ ಸೇರುವಾಗ ಅಹಂ ಶಬ್ದದಲ್ಲಿರುವ ಹ ಕಾರವು ಮೇಲೆ ತಿಳಿಸಿರುವ ಸ ಮತ್ತು ಹ ಅಕ್ಷರದ ತತ್ವಗಳ ವಿಚಾರಕ್ಕೂ ಹಂಸ ಮತ್ತು ಸೋಹಂ ತತ್ವಗಳ ವಿಚಾರಕ್ಕೂ ಇದೇ ಗ್ರಂಥದಲ್ಲಿ ಶ್ರೀಲಲಿತಾಮಂತ್ರದ ರಹಸ್ಯಾರ್ಥದಲ್ಲಿ ಬರೆದಿರುವುದನ್ನು ಪಠಿಸಿದರೆ ತತ್ವಗಳನ್ನು ಚೆನ್ನಾಗಿ ಅರಿಯಬಹುದು. ಸ್ವತಃ ಪ್ರಕಾಶಕಗಳಾದ ೧೬ ಸ್ವರಾಕ್ಷರಗಳು ಆಕಾಶದ ತತ್ವವಾದ ವಿಶುದ್ಧಚಕ್ರದಲ್ಲಿವೆ. ಈ ಸ್ವರಾಕ್ಷರಗಳು ಉದಾತ್ತ

ಅನುದಾತ್ತ ಸ್ವರಿತ ಪ್ರಚಯಗಳೊಡನೆ ಕಲೆತು ೬೪ ಕಲೆಗಳಾಗುವುವು. ಆದುದರಿಂದ ಆಕಾಶದಲ್ಲೆ ಕಳಾಸ್ಥಾನವಿರುವುದು. ಈ ೧೬ ಸ್ವರಾಕ್ಷರಗಳು ವಾಯು, ಅಗ್ನಿ, ಜಲ, ಪೃಥ್ವೀ ತತ್ವಗಳಲ್ಲಿರುವ ವ್ಯಂಜನಾಕ್ಷರಗಳೊಡನೆ ಕಲೆತು ನಾದ ಬ್ರಹ್ಮದಿಂದ ಉಂಟಾಗುವ ಸೃಷ್ಟಿ, ಸ್ಥಿತಿ, ಲಯದ ವಿದ್ಯವೇ ೫೮೭ ನೆಯ ನಾಮದಲ್ಲಿರುವ ಷೋಡಶಾಕ್ಷರೀ ವಿದ್ಯೆಯಾಗಿರುವುದು. ೨೩೬, ೨೩೭, ೫೮೭, ೫೮೮, ೫೮೯, ೫೯೦ ನೆಯ ನಾಮಗಳಲ್ಲಿರುವ ವಿಚಾರಗಳನ್ನು ಇಲ್ಲಿ ಕೊಟ್ಟಿರುವ ಚಿತ್ರದೊಂದಿಗೆ ಪಠಿಸಿದರೆ ತತ್ವಗಳನ್ನು ಚೆನ್ನಾಗಿ ಅರಿಯುಬಹುದು.

೫೨೮ ನೇ ನಾಮದಿಂದ ಪ್ರಾರಂಭವಾದ ಸಹಸ್ರಾರ ಕಮಲದ ಮಹತ್ತು ೫೩೪ ನೇ ನಾಮನವರೆಗೂ ಇರುವುದು.

**೫೩೫. ಸ್ವಾಹಾಯೈನಮಃ—**

ಯಜ್ಞೇಶ್ವರನ ಪತ್ನಿಗೆ ಸ್ವಾಹಾದೇವಿಯೆಂದು ಹೆಸರು. ಶ್ರೀದೇವಿಯು ಯಜ್ಞೇಶ್ವರನ ಪತ್ನಿಯಾದ ಸ್ವಾಹಾಸ್ವರೂಪಿಣಿಯಾಗಿರುತ್ತಾಳೆ. ಶುಭಕಾರ್ಯಗಳಲ್ಲಿ ಸ್ವಾಹಾ ಎಂಬುದನ್ನು ಯಜ್ಞೇಶ್ವರನಲ್ಲಿ ಹೋಮಮಾಡುವ ಪ್ರತಿಮಂತ್ರದ ಅಂತ್ಯದಲ್ಲೂ ಹೇಳಲ್ಪಡುವುದು. ಪ್ರಪಂಚಸಾರದಲ್ಲಿ ಶ್ರೀಶಂಕರಾಚಾರ್ಯರವರು ಸ್ವ-ಸ್ವರ್ಗ, ಆಹಾ-ಹೊಂದು, ಮತ್ತು ಸ್ವ– ನನ್ನ ಆಹಾ-ಹೊಂದುವಿಕೆ ಎಂದೂ, ತೈತ್ತರೀಯ ಶ್ರುತಿಯಲ್ಲಿ ಸ್ವ-ನನ್ನವಾಣಿ, ಆಹಾ-ನನ್ನದೇ ಎಂದು ಅರ್ಥಗಳನ್ನು ಹೇಳಿದೆ. ಕರ್ಮಕಾಂಡದಲ್ಲಿ ಯಜ್ಞೇಶ್ವರನಿಗೆ ಹೋಮ ಮಾಡುವಾಗ ಯಜ್ಞೇಶ್ವರನು ಸುಪ್ರೀತನಾಗಿ ಅನುಗ್ರಹಮಾಡಲು ಸ್ವಾಹಾ ಎಂದು ಹೇಳಿ ಹೋಮ ಮಾಡಲ್ಪಡುವುದು. ಜ್ಞಾನಕಾಂಡರೀತಿಯಲ್ಲಿ ನಮ್ಮಲ್ಲಿ ಮೂಲಾಧಾರದಲ್ಲಿರುವ ಗಾರ್ಹಪತ್ಯಾಗ್ನಿಯ (ಓಂಕಾರದಲ್ಲಿನ ಅ) ನ್ನೂ, ಅನಾಹತಚಕ್ರದಲ್ಲಿರುವ ದಕ್ಷಿಣಾಗ್ನಿ (ಓಂಕಾರದಲ್ಲಿನ ಉ) ಯನ್ನೂ, ಆಜ್ಞಾಚಕ್ರದಲ್ಲಿರುವ ಆಹವನೀಯಾಗ್ನಿ (ಓಂಕಾರದಲ್ಲಿನ ಮ) ಯನ್ನೂ ಪ್ರಜ್ವಲಿಸಿ ಈ ಅಗ್ನಿಗಳನ್ನೆಲ್ಲಾ ಏಕೀಭವಿಸುವಂತೆ ಮಾಡಿ ಸಹಸ್ರಾರಕಮಲದಲ್ಲಿರುವ ಪರಬ್ರಹ್ಮಸ್ವರೂಪವಾದ ಬ್ರಹ್ಮಾಗ್ನಿ (ಚಿಜ್ಜ್ಯೋತಿ) ಯಲ್ಲಿ "ನಾನು" ಎಂಬ ಜ್ಞಾನವನ್ನು ಲಯಮಾಡಿಕೊಳ್ಳುವ ಅಂತರ್ಯಾಗಸ್ವರೂಪವಾದುದೇ ಸ್ವಾಹಾ ಎಂಬುದಕ್ಕೆ ಜ್ಞಾನಮಾರ್ಗದ ಅರ್ಥವಾಗುವುದು. ಸ್ವ-ನನ್ನ, ಆಹಾ-ಸೇರುವಿಕೆಯು ಪರಬ್ರಹ್ಮವೇ ಆಗಿರುವುದು. ಅಲ್ಲದೆ ಸ್ವ-ನನ್ನ ವಾಣಿ, ಆಹಾ-ನನ್ನದೆ ಎಂದರೆ ನನ್ನ ವಾಣಿಯು ಪರಬ್ರಹ್ಮವಾದ ಓಂಕಾರದೊಡನೆ ಸೇರುವುದೇ ಆಗಿರುವುದು. ಈ ತತ್ವಾರ್ಥಗಳಿರುವುದರಿಂದಲೇ ಸಹಸ್ರಾರಕಮಲದ ವರ್ಣನೆಯಾದ ಮುಂದಿನ ನಾಮವೇ ಸ್ವಾಹಾ ಎಂದು ಬಂದಿರುವುದು.

**೫೩೬. ಸ್ವಧಾಯೈನಮಃ—**

ಸ್ವಧಾಸ್ವರೂಪಿಣಿಯು. ಸ್ವಧಾ ಎಂಬ ಪದವು ಪಿತೃದೇವತೆಗಳಿಗೆ ಅರ್ಪಿಸುವ ಮಂತ್ರಾಂತ್ಯದಲ್ಲಿ ಪ್ರಯೋಗಮಾಡಲ್ಪಡುವುದು. ದೇವತೆಗಳಿಗೆ ಚೆನ್ನಾದ ಆಹಾರವಾದಂತಾಗಿ ನನ್ನನ್ನು ಅನುಗ್ರಹಿಸಿ ರಕ್ಷಿಸಲಿ ಎಂಬುದೇ ಸ್ವಧಾ ಎಂಬುದರ ಅರ್ಥ. ಸ್ವಧಾ ಎಂಬ ಪದಕ್ಕೂ ಸ್ವ-ನನ್ನ, ಧಾ-ರಕ್ಷಣೆ. ನನ್ನನ್ನು ರಕ್ಷಿಸುವುದು ದೇವತೆಗಳಿಂದ ಅನುಗ್ರಹೀತವಾದ ಅಮೃತವು. ಜ್ಞಾನಮಾರ್ಗದಲ್ಲಿ ಸಹಸ್ರಾರ ಕಮಲದಲ್ಲಿ ನಾನು ಎಂಬ ಜ್ಞಾನವು ಲಯವಾಗಿ ಬ್ರಹ್ಮಸಾಕ್ಷಾತ್ಕಾರವಾದಾಗ ಸುಧಾಪ್ರವಾಹವು ಉಂಟಾಗಿ ದೇವತೆಗಳಿಗೂ ತೃಪ್ತಿಯಾಗುವದಲ್ಲದೆ ನಮಗೂ ಅಮೃತತ್ವಪ್ರಾಪ್ತಿಯಾಗುವುದು. ಇಂತಹ ಅಮೃತವಾಚ್ಯವಾದ ಸುಧಾಶಬ್ದದ ತತ್ವವನ್ನು ಅನುಸರಿಸಿಯೇ ಸ್ವಧಾ ಎಂಬುದು ಪಿತೃತರ್ಪಣಕ್ಕೋಸ್ಕರ ಶಾಸ್ತ್ರದಲ್ಲಿ ವಿಧಿಸಿದೆ. ಅಲ್ಲದೆ ಸಹಸ್ರಾರಕಮಲದ ವಿಚಾರ ತಿಳಿಸಿದ ಮುಂದಿನ ನಾಮಗಳೇ ಸ್ವಾಹಾ, ಸ್ವಧಾ ಎಂಬ ಪದಗಳು ಬಂದಿವೆ. ಸ್ವಾಹಾ ಮತ್ತು ಸ್ವಧಾ ಎಂಬ ಇಬ್ಬರೂ ಯಜ್ಞೇಶ್ವರನ ಪತ್ನಿಯರು. ಶ್ರೀದೇವಿಯೆ ಯಜ್ಞೇಶ್ವರನ ಪತ್ನಿಯರ ಸ್ವರೂಪವಾಗಿಯೂ ಇರುವಳು.

**೫೩೭. ಅಮತ್ಯೈನಮಃ—**

ಅಮತಿ ಎಂದರೆ ಜ್ಞಾನವಿಲ್ಲದ ಅಥವಾ ಬುದ್ಧಿ ಇಲ್ಲದ ಸ್ಥಿತಿಯು ಅಮತಿ ಎನ್ನಲ್ಪಡುವುದು. ಶ್ರೀದೇವಿಯು ಬುದ್ಧಿ ಇಲ್ಲದ ಸ್ವರೂಪಿಣಿಯಲ್ಲ. ಇದರ ತತ್ವಾರ್ಥವೇನೆಂದರೆ ಹಿಂದಿನ ೭-೮ ನಾಮಗಳಿಂದಲೂ ತಿಳಿಸಿರುವಂತೆ ಸಹಸ್ರಾರ ಕಮಲದಲ್ಲಿ "ನಾನು" ಎಂಬ ಜ್ಞಾನವು ಲಯವಾಗಿ ಬ್ರಹ್ಮಸಾಕ್ಷಾತ್ಕಾರವಾದಾಗ ನಮ್ಮ ಬುದ್ಧಿಯೂ ಪರಬ್ರಹ್ಮನಲ್ಲಿ ಲೀನವಾಗುವುದರಿಂದ ನಮ್ಮ ದೇಹಜ್ಞಾನವೂ ನಮಗಿರುವುದಿಲ್ಲ. ಆದುದರಿಂದ ಬ್ರಹ್ಮಸಾಕ್ಷಾತ್ಕಾರದ ಸ್ಥಿತಿಯು ಅಮತಿ ಎನಿಸಿದೆ. ಇಂತಹ ಸಾಕ್ಷಾತ್ಕಾರದ ಸ್ವರೂಪಿಣಿಯು. ಅ ಎಂದರೆ ಬ್ರಹ್ಮ, ಮತಿ ಎಂದರೆ ಬುದ್ಧಿ ಅಂದರೆ ಬ್ರಹ್ಮಜ್ಞಾನ. ಈ ಬ್ರಹ್ಮಜ್ಞಾನಸ್ವರೂಪಳು ಆದುದರಿಂದ ಅಮತಿ.

**೫೩೮. ಮೇಧಾಯೈನಮಃ—**

ಬಹು ಸೂಕ್ಷ್ಮವಾದ ಬುದ್ಧಿಯ ವಿವೇಚನಾಸ್ವರೂಪಿಣಿಯು.

**೫೩೯. ಶ್ರುತ್ಯೈನಮಃ—**

ಶ್ರುತಿಸ್ವರೂಪಿಣಿಯು. ಶ್ರು-ಶ್ರವಣೆ ಎಂಬ ಅರ್ಥದಂತೆಯೂ "ಶ್ರೂಯತೇ ಗುರುಪರಂಪರಯಾ ಇತಿ ಶ್ರುತಿಃ" ಎಂಬ ವಚನದಂತೆಯೂ ಗುರುಪರಂಪರೆಯಾಗಿ

ಅಧ್ಯಯನರೂಪವಾದ ಶ್ರವಣದಿಂದ ಮಂತ್ರಗಳು ಬಂದಿರುವುವಾದ್ದರಿಂದ ವೇದ ಮಂತ್ರಗಳಿಗೆ ಶ್ರುತಿ ಎಂದು ಹೆಸರು. ಮಂತ್ರಾರ್ಥಗಳನ್ನು ಗ್ರಹಣೆಮಾಡುವುದೂ ಶ್ರುತಿಯಾಗಿರುವುದು. ದೇವತಾ ಆಜ್ಞಾರೂಪಕವಾದುದರಿಂದ ಶ್ರುತಿ ಎನ್ನಲ್ಪಡುವುದು. ಓಂಕಾರಕ್ಕೂ ಶ್ರುತಿ ಎಂದು ಹೆಸರು.

**೫೪೦. ಸ್ಮೃತ್ಯೈನಮಃ—**

ಸ್ಮರತ ಇತಿ ಮತ್ತು ಸ್ಮರ್ಯತೇ ಇತಿ ಸ್ಮೃತಿಃ=ಎಂದರೆ ಸ್ಮೃತಿ ಸ್ವರೂಪಿಣಿಯು. ಶ್ರುತಿಯಲ್ಲಿರುವುದನ್ನು ವಿವರಿಸಿ ಜ್ಞಾಪಿಸಿಕೊಡುವುದಾದುದರಿಂದ ಸ್ಮೃತಿ ಎಂದು ಹೆಸರು. ಶ್ರವಣಮಾಡಿದುದನ್ನು ಮನನಮಾಡುವುದಕ್ಕೂ ಸ್ಮೃತಿ ಎನಿಸುವುದು.

**೫೪೧. ಅನುತ್ತಮಾಯೈನಮಃ—**

ಪರಬ್ರಹ್ಮಸ್ವರೂಪಿಣಿಯಾದ ಶ್ರೀದೇವಿಗಿಂತ ಪರಮೋತ್ಕೃಷ್ಟವಾದುದು ಮತ್ತೊಂದಿಲ್ಲವು. ನಾವು ಮನನಮಾಡಿಕ್ಕೊಂಡ ವಿಚಾರಗಳಲ್ಲೂ ಸಾರವತ್ತಾದ ನಾನೇ ಪರಬ್ರಹ್ಮವಸ್ತುವೆಂದು ತಿಳಿದುಕ್ಕೊಳ್ಳುವುದಕ್ಕಿಂತ ಹೆಚ್ಚಿನದು ಮತ್ತೊಂದಿಲ್ಲ.

**೫೪೨. ಪುಣ್ಯಕೀರ್ತ್ಯೈನಮಃ—**

ಮೋಕ್ಷಮಾರ್ಗಕ್ಕೆ ಅನುಸಾರವಾದ ಆಚರಣೆಗಳಿಗೆ ಪುಣ್ಯವೆಂದು ಹೇಳಬೇಕಲ್ಲದೆ ಪ್ರಾಪಂಚಿಕ ವಿಷಯಾರ್ಜನೆಗೆ ಪುಣ್ಯವೆಂದು ಹೇಳಲಾಗುವುದಿಲ್ಲ. ಆದುದರಿಂದ ಮೋಕ್ಷಮಾರ್ಗಕ್ಕೆ ಅನುಸಾರವಾದ ನಡೆವಳಿಕೆಯು ಮತ್ತು ಕೀರ್ತಿಯು ಸ್ವರೂಪವಾಗಿರುವವಳು.

**೫೪೩. ಪುಣ್ಯಲಭ್ಯಾಯೈನಮಃ—**

ಪುಣ್ಯವೆಂದು ಕರೆಯಲ್ಪಡುವ ಮೋಕ್ಷಮಾರ್ಗದ ನಡೆವಳಿಕೆಗಳಿಂದಲೇ ಲಭ್ಯವಾಗುವವಳು.

**೫೪೪. ಪುಣ್ಯಶ್ರವಣಕೀರ್ತನಾಯೈನಮಃ—**

ಪರಬ್ರಹ್ಮಸ್ವರೂಪಿಣಿಯಾದ ಶ್ರೀದೇವಿಯು ವಿಚಾರವಾದ ಪವಿತ್ರಚರಿತ್ರೆಗಳನ್ನು ಶ್ರವಣಮಾಡುವಿಕೆಯೂ ಮತ್ತು ಅವಳನ್ನು ಸ್ತೋತ್ರಮಾಡಿ ಪ್ರಾರ್ಥಿಸಿಕ್ಕೊಳ್ಳುವ ಸ್ವರೂಪವೂ ಶ್ರೀದೇವಿಯೇ ಆಗಿರುವಳು.

೫೨೮ ರಿಂದ ೫೩೭ ರ ವರೆಗಿನ ನಾಮಗಳಲ್ಲಿ ಪರಬ್ರಹ್ಮಸ್ವರೂಪಿಣಿಯಾದ ಶ್ರೀದೇವಿಯು ಸಾಕ್ಷಾತ್ಕಾರದ ತತ್ವವಾದ ಸಹಸ್ರಾರಕಮಲದ ವರ್ಣನೆಯು

ಬಂದಿರುವುದು. ಈ ಸಾಕ್ಷಾತ್ಕಾರವನ್ನು ಪಡೆಯಲು ಮಾಡಬೇಕಾದ ಸಲಕರಣೆಗಳೇನೆಂಬುದನ್ನೂ ಆ ಸಲಕರಣೆಗಳೂ ಶ್ರೀದೇವಿಯ ಸ್ವರೂಪವೆಂಬುವದನ್ನೂ ೫೩೮ ರಿಂದ ೫೪೪ ರ ವರೆಗೆ. ಇರುವ ನಾಮಗಳು ವ್ಯಕ್ತಪಡಿಸುವುವು. ಅಂದರೆ ಪ್ರಥಮದಲ್ಲಿ ಉತ್ತಮವಾದ ಬುದ್ಧಿಯು ವಿವೇಚನಾಶಕ್ತಿಬೇಕು. ಅನಂತರ ಶ್ರುತಿಸ್ಮೃತಿಗಳಲ್ಲಿ ಹೇಳಿರುವುದನ್ನು ಶ್ರವಣಮಾಡಿ ಪರಬ್ರಹ್ಮಸ್ವರೂಪಿಣಿಯಾದ ಶ್ರೀದೇವಿಗಿಂತ ಶ್ರೇಷ್ಠವಾದುದು ಮತ್ತೊಂದು ಇಲ್ಲವೆಂದು ದೃಢಮಾಡಿಕೊಂಡು ಮೋಕ್ಷಮಾರ್ಗದ ಅನುಸಾರವಾದ ನಡೆವಳಿಕೆಯಲ್ಲಿದ್ದುಕೊಂಡು ಸಹಸ್ರಾರ ಕಮಲದಲ್ಲಿರುವ ಶ್ರೀದೇವಿಯನ್ನು ಸಾಕ್ಷಾತ್ಕರಿಸಿ ಜನನ ಮರಣಗಳ ಬಂಧನದಿಂದ ಬಿಡುಗಡೆ ಹೊಂದಬೇಕೆಂಬ ತತ್ವವಾಗಿರುವುದು.

**೫೪೫. ಪುಲೋಮಜಾರ್ಚಿತಾಯೈನಮಃ—**

ಇಂದ್ರನ ಹೆಂಡತಿಯಾದ, ಪುಲೋಮರ ಮಗಳಾದ ಶಚೀದೇವಿಯಿಂದ ಅರ್ಚಿಸಲ್ಪಟ್ಟವಳು. ವೃತ್ರನನ್ನು ಕೊಂದು ಇಂದ್ರನು ಬ್ರಹ್ಮಹತ್ಯಾಗ್ರಸ್ತನಾಗಿದ್ದಾಗ ನಹುಷರಾಜನು ದೇವತೆಗಳ ಪ್ರಾರ್ಥನೆಯಂತೆ ಇಂದ್ರನ ಪದವಿಯಲ್ಲಿ ರಾಜ್ಯವಾಳುತ್ತಿದ್ದನು. ಆಗ ಇಂದ್ರನ ಹೆಂಡತಿಯು ಶ್ರೀದೇವಿಯನ್ನು ಅರ್ಚಿಸಿ ಇಂದ್ರನಿಗೆ ಪುನಃ ರಾಜ್ಯಪದವಿಯನ್ನು ಕೊಡಿಸಿದಳು.

**೫೪೬. ಬನ್ಧಮೋಚಿನ್ಯೈನಮಃ—**

ಕಷ್ಟಗಳನ್ನೂ ಅಜ್ಞಾನಗಳನ್ನೂ ಹೋಗಲಾಡಿಸುವವಳು.

**೫೪೭. ಬರ್ಬರಾಳಕಾಯೈನಮಃ**—ಗುಂಗರು ಕೂದಲುಳ್ಳವಳು.

**೫೪೮. ವಿಮರ್ಶರೂಪಿಣ್ಯೈನಮಃ—**

ವಿವೇಚನಾಶಕ್ತಿಸ್ವರೂಪಿಣಿಯು. ನಿತ್ಯಾನಿತ್ಯ ವಿವೇಕಸ್ವರೂಪಿಣಿಯು.

**೫೪೯. ವಿದ್ಯಾಯೈನಮಃ—**

ವಿದ್ಯಾಸ್ವರೂಪಿಣಿಯು. ಮೋಕ್ಷಮಾರ್ಗಕ್ಕೆ ಅನುಸಾರವಾದ ವಿದ್ಯೆಯನ್ನೇ ವಿದ್ಯೆಯೆಂದು ಹೇಳಬೇಕಲ್ಲದೆ ಪ್ರಾಪಂಚಿಕವಿದ್ಯೆಯು ಅವಿದ್ಯೆಯಲ್ಲಿನ ವಿದ್ಯೆಯಾಗಿರುವುದು. "ತತ್ಕರ್ಮಯನ್ನಬಂಧಾಯ ಸಾ ವಿದ್ಯಾಯಾ ವಿ ಮುಕ್ತಯೇ" ಎಂಬ ಆಧಾರ.

೫೫೦. **ವಿಯದಾದಿಜಗತ್ಪ್ರಸ್ವೈನಮಃ—**

ಅವ್ಯಕ್ತವಾದ ಆಕಾಶಾಂತರ್ಗತವಾಗಿರುವ ನಾದಬಿಂದು ಕಳೆಗಳಲ್ಲಿನ ಕಳಾಸ್ವರೂಪ ಮೊದಲುಗೊಂಡು ಸರ್ವಜಗತ್ತನ್ನೂ ಸೃಷ್ಟಿಸುವವಳು.

೫೫೧. **ಸರ್ವವ್ಯಾಧಿಪ್ರಶಮನ್ಯೈನಮಃ—**

ಸರ್ವರೋಗಗಳನ್ನೂ ಶಾಂತಿಗೊಳಿಸುವವಳು.

೫೫೨. **ಸರ್ವಮೃತ್ಯುನಿವಾರಿಣ್ಯೈನಮಃ—**

ಅಪಮೃತ್ಯು ಕಾಲಮೃತ್ಯು ಮುಂತಾದ ಎಲ್ಲಾ ಮೃತ್ಯುಗಳನ್ನೂ ನಿವಾರಿಸುವವಳು.

೫೫೩. **ಅಗ್ರಗಣ್ಯಾಯೈನಮಃ—**

ಪ್ರಸಿದ್ಧಿಯನ್ನು ಪಡೆದಿರುವವರಲ್ಲೆಲ್ಲಾ ಪ್ರಥಮಸ್ಥಾನದವಳು.

೫೫೪. **ಅಚಿನ್ತ್ಯರೂಪಾಯೈನಮಃ—**

ಮನಸ್ಸಿನ ಊಹೆಗೂ ನಿಲುಕದಂತಹ ರೂಪವುಳ್ಳವಳು.

೫೫೫. **ಕಲಿಕಲ್ಮಷನಾಶಿನ್ಯೈನಮಃ—**

ಪ್ರಬಲವಾದ ವಿವಾದಗಳನ್ನೂ ಪಾಪಗಳನ್ನೂ ನಾಶಮಾಡುವವಳು.

೫೫೬. **ಕಾತ್ಯಾಯನ್ಯೈನಮಃ—**

ಎಲ್ಲಾ ದೇವತೆಗಳ ತೇಜಸ್ಸನ್ನೂ ಒಟ್ಟುಗೂಡಿಸಿದ ತೇಜಸ್ಸಿನ ಪ್ರಕಾಶವುಳ್ಳವಳು.

೫೫೭. **ಕಾಲಹನ್ತ್ರ್ಯೈನಮಃ—**

ಕಾಲಚಕ್ರಕ್ಕೆ ಒಳಪಡುವ ನಿಯಮವನ್ನು ನಾಶಮಾಡುವವಳು. ಮೃತ್ಯುಭಯನಿವಾರಕಳು.

೫೫೮. **ಕಮಲಾಕ್ಷನಿಷೇವಿತಾಯೈನಮಃ—**

ವಿಷ್ಣುವಿನಿಂದ ಪೂಜಿಸಲ್ಪಡುವವಳು. ಇದಕ್ಕೆ ಪದ್ಮಪುರಾಣದಲ್ಲಿ "ಇಂದ್ರನೀಲಮಯೀಂದೇವೀಂ ವಿಷ್ಣುರರ್ಚಯತೇ ಸದಾ । ವಿಷ್ಣುತ್ವಂ ಪ್ರಾಪ್ತವಾನ್ ತೇನೇತಿ" ಎಂದು ಹೇಳಿದೆ.

**೫೫೯. ತಾಮ್ಬೂಲಪೂರಿತಮುಖ್ಯೈನಮಃ—**

ತಾಂಬೂಲ ಚರ್ವಣದಿಂದ ಆನಂದವಾಗಿರುವ ಮುಖವುಳ್ಳವಳು.

**೫೬೦. ದಾಡಿಮೀಕುಸುಮಪ್ರಭಾಯೈನಮಃ—**

ದಾಡಿಮಾ (ಒಂದು ತರಹ ದಾಳಿಂಬಿ) ಪುಷ್ಪದಂತಹ ಪ್ರಭೆಯುಳ್ಳವಳು.

**೫೬೧. ಮೃಗಾಕ್ಷ್ಯೈನಮಃ—**

ಹುಲ್ಲೆಯ ಕಣ್ಣಿನೋಪಾದಿಯಲ್ಲಿ ಕಣ್ಣುಗಳುಳ್ಳವಳು. ದುಷ್ಟನಿಗ್ರಹ ಶಿಷ್ಟ ಪರಿಪಾಲನೆಯ ಅನ್ವೇಷಣ (ಹುಡುಕುವ) ದ ದೃಷ್ಟಿಯುಳ್ಳವಳು.

**೫೬೨. ಮೋಹಿನ್ಯೈನಮಃ—**

ಸಮುದ್ರಮಥನ ಕಾಲದಲ್ಲಿ ಅಮೃತವನ್ನು ಅಪಹರಿಸುತ್ತಿದ್ದ ರಾಕ್ಷಸರನ್ನು ಮರುಳುಗೊಳಿಸಲು ಶ್ರೀ ವಿಷ್ಣುವು ಮೋಹಿನಿಯ ಅವತಾರವೆತ್ತಿದನು. ಈ ಮೋಹಿನಿಯ ರೂಪವನ್ನು ನೋಡಿ ಸರ್ವಜ್ಞನಾದ ಪರಮೇಶ್ವರನೇ ಮೋಹಿತನಾದನು. ಶ್ರೀದೇವಿಯು ಅಂತಹ ಮೋಹಿನಿಯ ಸ್ವರೂಪಿಣಿಯು. ವಿಷಯಾನಂದವೆಂಬ ಉತ್ಸಾಹಸ್ವರೂಪವಾದ ಪ್ರಪಂಚದಲ್ಲಿ ಮೋಹವನ್ನು ಉಂಟು ಮಾಡುವವಳಾದುದರಿಂದ ಶ್ರೀದೇವಿಯು ಮೋಹಿನೀಸ್ವರೂಪಿಣಿಯು. ಈಶ್ವರನಿಂದಲೂ ಮೋಹಿಸಲ್ಪಡುವವಳಾದುದರಿಂದ ಶ್ರೀದೇವಿಯು ಮೋಹಿನಿಯು.

**೫೬೩. ಮುಖ್ಯಾಯೈನಮಃ—**

ಎಲ್ಲಾ ವಸ್ತುಗಳಿಗಿಂತಲೂ ಎಲ್ಲಾ ಪ್ರಾಣಿಗಳಿಗಿಂತಲೂ ಪ್ರಧಾನವಾದವಳು ಜಗನ್ಮಾತೆಯಾದ ಶ್ರೀದೇವಿಯು.

**೫೬೪. ಮೃಡಾನ್ಯೈನಮಃ—**

ಸೌಖ್ಯವನ್ನೂ ಆನಂದವನ್ನೂ ಅನುಗ್ರಹಿಸುವವಳು.

**೫೬೫. ಮಿತ್ರರೂಪಿಣ್ಯೈನಮಃ—**

ಸ್ನೇಹಿತರ ರೂಪದಿಂದ ಇರುವವಳು. ಸಹೃದಯಳು. ಸೂರ್ಯ ರೂಪಿಣಿಯು.

**೫೬೬. ನಿತ್ಯತೃಪ್ತಾಯೈನಮಃ**—ಸದಾಕಾಲದಲ್ಲೂ ಸಂತುಷ್ಟಳಾಗಿರುವವಳು.

೫೬೭. ಭಕ್ತನಿಧಯೇನಮಃ—

ಭಕ್ತರಿಗೆ ಸಕಲೇಷ್ಟಾರ್ಥಗಳನ್ನೂ ಕೊಡುವ ನಿಧಿಯಂತಿರುವವಳು. ಭಕ್ತರ ಯೋಗಕ್ಷೇಮವೆಲ್ಲಾ ತನ್ನದೆಂಬ ಭಾರವನ್ನು ವಹಿಸಿಕೊಂಡಿರುವವಳು.

೫೬೮. ನಿಯನ್ತ್ರ್ಯೈನಮಃ—

ಬ್ರಹ್ಮಾಂಡದಲ್ಲಿ ಸಕಲ ಕಾರ್ಯಗಳೂ ಹೇಗೆ ಹೇಗೆ ನಡೆಯಬೇಕೊ ಅವರ ನಿಯಾಮಕಳು. ಪ್ರಪಂಚಕ್ಕೆ ಆಜ್ಞಾಸ್ವರೂಪಳು. ಇವಳ ನಿಯಾಮಕಕ್ಕೆ ಹೆದರಿ ವಾಯುವು ಬೀಸುತ್ತದೆ. ಸೂರ್ಯನು ಪ್ರಕಾಶಿಸುತ್ತಾನೆ.

೫೬೯. ನಿಖಿಲೇಶ್ವರ್ಯೈನಮಃ—ಬ್ರಹ್ಮಾಂಡದ ಸರ್ವ ಆಡಳಿತಕ್ಕೂ ಒಡೆಯಳು.

೫೭೦. ಮೈತ್ರ್ಯಾದಿವಾಸನಾಲಭ್ಯಾಯೈನಮಃ—

ವೇದವಿಹಿತವಾದ ಕರ್ಮಾಚರಣೆ ಇರುವವರಲ್ಲಿ ಸ್ನೇಹದಿಂದ ಇರುವುದು, ಮತ್ತು ತನ್ನಂತೆಯೆ ಸರ್ವಪ್ರಾಣಿಗಳೆಂದು ತಿಳಿದು ಸಹೃದಯತೆಯಿಂದ ಇರುವುದು ಮೈತ್ರಿ ಎನಿಸಿಕೊಳ್ಳುವುದು. ಸರ್ವಪ್ರಾಣಿಗಳಲ್ಲೂ ದಯಾವಂತನಾಗಿರುವುದು ಮತ್ತು ದುಃಖಿಗಳಲ್ಲಿ ದಯೆ ಇರುವುದು ಕರುಣ ಎನಿಸಿಕೊಳ್ಳುವುದು. ಸುಖ ದುಃಖಗಳಲ್ಲೂ ಲಾಭ ನಷ್ಟಗಳಲ್ಲೂ ವ್ಯತ್ಯಾಸವಾಗದೆ ಏಕಮನಸ್ಕನಾಗಿರುವುದು ಮತ್ತು ಪುಣ್ಯ ಕರ್ಮವನ್ನು ಮಾಡುವವರನ್ನು ನೋಡಿ ಸಮಾಧಾನತೆಯಿಂದ ಇರುವುದೇ ಸಂತೋಷ. ಪ್ರಾಪಂಚಿಕ ವಿಷಯಗಳಲ್ಲಿ ವಿರಕ್ತಿ ಇರುವುದೇ ಉದಾಸೀನ ಮೈತ್ರೀ, ಕರುಣಾ, ಮುದಿತಾ, ಉದಾಸೀನಗಳು ಯಾರಲ್ಲಿ ಪ್ರಬಲವಾಗಿರುವುದೋ ಅಂತಹವರಿಗೆ ಶ್ರೀದೇವಿಯು ಲಭ್ಯಳು.

೫೭೧. ಮಹಾಪ್ರಳಯಸಾಕ್ಷಿಣ್ಯೈನಮಃ—

ಬ್ರಹ್ಮಾಂಡವೆಲ್ಲ ಆತ್ಯಂತಿಕವಾಗಿ ಲಯವಾಗುವಾಗ ಸೃಷ್ಟಿ, ಸ್ಥಿತಿ, ಲಯಕರ್ತರಾದ ತ್ರಿಮೂರ್ತಿಗಳ ಅವತಾರಗಳು ಉಪಸಂಹಾರವಾಗುತ್ತಿದ್ದರೂ ಪರಬ್ರಹ್ಮಸ್ವರೂಪಿಣಿಯಾದ ಶ್ರೀದೇವಿಯು ಲಯಕಾರ್ಯದಲ್ಲಿ ಸಾಕ್ಷಿಣಿ ಯಾಗಿರುವಳು.

೫೭೨. ಪರಾಶಕ್ತ್ಯೈನಮಃ—

ಕಳಾಸ್ವರೂಪವಾದ ಆದಿಶಕ್ತಿಯಾಗಿರುವಳು. ಪರಬ್ರಹ್ಮಶಕ್ತಿಯಾಗಿ ರುವಳು.

೫೭೩. **ಪರಾನಿಷ್ಠಾಯೈನಮಃ—**

ಶ್ರೇಷ್ಠವಾದ ಪವಿತ್ರತೆಯಿಂದ ಪರಬ್ರಹ್ಮತ್ವದಲ್ಲಿಯೇ ಆಸಕ್ತಿಯಾಗಿರುವ ಸ್ವರೂಪವಾಗಿರುವವಳು. ಬ್ರಹ್ಮಾಂಡದ ಯಾವ ಕಾರ್ಯಕ್ಕೂ ಲೇಪವಾಗದೆ ನಿರ್ಲಿಪ್ತತೆಯಿಂದ ಇರುವವಳು.

೫೭೪. **ಪ್ರಜ್ಞಾನಘನರೂಪಿಣ್ಯೈನಮಃ**

ವಿಷಯಾದಿಗಳ ಜ್ಞಾನವಿಲ್ಲದ (ವಿಜ್ಞಾನವಿಲ್ಲದ) ಸರ್ವಜ್ಞಾನವೂ ಸೇರಿ ಕೊಂಡಂತಿರುವ ತಾನೇತಾನಾದ ಶುದ್ಧಜ್ಞಾನದ ಸ್ವರೂಪಿಣಿಯಾಗಿರುವವಳು. ಇದಕ್ಕೆ "ಸಯಥಾ ಸೈಂಧವ ಘನೋ ನನ್ತರೋ ಬಾಹ್ಯಃ ಕೃತ್ಸ್ನೋ ರಸಘನ ಏವೈವಂ ವಾರೇ ಯಮಾತ್ಮಾ ನನ್ತರೋ ಬಾಹ್ಯಃ ಕೃತ್ಸ್ನೋನ್ತಃ ಪ್ರಜ್ಞಾನ ಘನ," ಎಂಬ ಶ್ರುತ್ಯಾಧಾರವಿರುವುದು.

೫೭೫. **ಮಾಧ್ವೀಪಾನಾಲಸಾಯೈನಮಃ—**

ಮದ್ಯವೆಂದರೆ ಇಲ್ಲಿ ಹೆಂಡವೆಂದು ಅರ್ಥವಲ್ಲ. ಬ್ರಹ್ಮಾಮೃತವಾದ ಸುಧಾಪಾನ ಮಾಡುವ ಜೀವನ್ಮುಕ್ತರು ಬ್ರಹ್ಮಾಮೃತದಲ್ಲಿ ಮಗ್ನರಾಗಿ ಮದ್ಯ ಪಾನಮಾಡಿದವರು ಹೇಗೆ ಆನಂದದಲ್ಲಿರುತ್ತಾರೋ ಅದರಂತೆ ಇರುವರು. ಹೀಗೆ ಬ್ರಹ್ಮಾನಂದದಲ್ಲಿರತಕ್ಕವರ ಸ್ವರೂಪಿಣಿಯೂ ಶ್ರೀದೇವಿಯೇ ಆಗಿರುತ್ತಾಳೆ. ಈ ನಾಮದ ವಿವರಣೆಗೆ ಮುಂದಿನ ನಾಮದಲ್ಲಿ ಬರೆದಿರುವ ಅರ್ಥವನ್ನು ಇಲ್ಲಿಗೆ ಅನ್ವಯಮಾಡಿಕೊಳ್ಳತಕ್ಕದ್ದು.

೫೭೬. **ಮತ್ತಾಯೈನಮಃ—**

ಮೇಲಿನ ನಾಮದಲ್ಲಿ ತಿಳಿಸಿರುವ ಮದ್ಯಪಾನದ ವೇಗವು ಅಧಿಕವಾದರೆ ಮದ್ಯಪಾನಮಾಡಿದವನು ಮತ್ತನಾಗಿ ಬಿದ್ದಿರುತ್ತಾನೆ. ಇದರಂತೆ ಬ್ರಹ್ಮಾಮೃತ ಪಾನದ ಆನಂದವು ಅಧಿಕವಾದರೆ ಜೀವನ್ಮುಕ್ತನು ಮತ್ತನಾಗಿ ದೇಹಜ್ಞಾನ ಕೊಂಚವೂ ಇಲ್ಲದೇ ಇರುತ್ತಾನೆ. ಇದಕ್ಕೆ ಉನ್ಮನೀಸ್ಥಿತಿಯೆಂದು ಹೆಸರು. ಇಂತಹ ಉನ್ಮನೀಸ್ಥಿತಿಯೂ ಶ್ರೀದೇವಿಯೆ.

ಈ ನಾಮದ ಮತ್ತು ಹಿಂದಿನ ನಾಮಗಳ ತತ್ವಾರ್ಥಕ್ಕೆ "ಸ್ವರೂಪಧ್ಯಾನೇನ ನಿರಾಲಂಬಮವಲಂಬ್ಯ ಸ್ವಾತ್ಮನಿಷ್ಠಾನುಕೂಲೇನ ಸರ್ವಂವಿಸ್ಮೃತ್ಯ ತುರೀಯಾತೀತೋವಧೂತ ವೇಷೇಣಾದ್ವೈತ ನಿಷ್ಠಾಪರಃ" ಎಂಬ ಶ್ರುತ್ಯಾಧಾರವಿದೆ. ಅಂದರೆ ಸ್ವರೂಪಧ್ಯಾನದಿಂದ ಇಂದ್ರಿಯ ವ್ಯಾಪಾರಗಳಿಲ್ಲದ ಬ್ರಹ್ಮಾನಂದರಸದಲ್ಲಿ

ಮಗ್ನನಾಗಿ ಸಮಸ್ತವನ್ನೂ ಮರೆತು ಅವಧೂತವೇಷದಿಂದ ಅದ್ವೈತನಿಷ್ಠಾಪರನಾಗಿರುತ್ತಾನೆ. ಅಲ್ಲದೆ ಶ್ರೀ ಶಂಕರಭಗವತ್ಪಾದರವರು "ಬ್ರಹ್ಮಾನನ್ದರಸಾಸ್ವಾದಾಸಕ್ತ ಚಿತ್ತತಯಾಯತೇಃ । ಅನ್ತರ್ಬಹಿರ ವಿಜ್ಞಾನಂ ಜೀವನ್ಮುಕ್ತಸ್ಯಲಕ್ಷಣಂ । ಯದಾಯಾತ್ಯುನ್ಮನೀಭಾವಸ್ತದಾತತ್ಪರಮಂ ಪದಂ ।" ಅಂದರೆ ಯಾವ ಮಹಾತ್ಮನ ಚಿತ್ತವು ಬ್ರಹ್ಮಾನನ್ದ ರಸಾನುಭವದಲ್ಲಿಯೇ ಸಿಲುಕಿ ಅನ್ತರನ್ಗಬಹಿರನ್ಗ ವ್ಯಾಪಾರಗಳನ್ನು ಅರಿತುಕೊಳ್ಳುವುದಿಲ್ಲವೋ ಆತನು ಜೀವನ್ಮುಕ್ತನೆನಿಸುವನು. ಯಾವ ಕಾಲದಲ್ಲಿ ಬ್ರಹ್ಮಾನಂದದ ಮತ್ತು-ಸ್ವಭಾವವಾದ ಉನ್ಮನೀಭಾವವು ಉಂಟಾಗುತ್ತದೊ ಅದೇ ಪರಮಪದ ಎಂದು ಹೇಳುತ್ತಾರೆ. ಆದುದರಿಂದ ಮಾಧ್ವೀಪಾನಲಸಾ ಮತ್ತು ಮತ್ತ ಎಂದರೆ ಶ್ರೀದೇವಿಯು ಹೆಂಡಾಕುಡಿದು ಮತ್ತಳಾಗುವವಳು ಎಂದು ಭಾಸ್ಕರರಾಯರು ಬರೆದಿರುವಂತೆ ಅರ್ಥಮಾಡಬಾರದು. ಮದ್ಯಪಾನವು ರಾಕ್ಷಸ ಸ್ವಭಾವಕ್ಕೆ ಸೇರಿದ್ದಲ್ಲದೆ ದೇವತ್ವಕ್ಕಲ್ಲ. ರಾಕ್ಷಸತ್ವವನ್ನು ಹೋಗಲಾಡಿಸಿ ದೇವತ್ವದ ಉದ್ಧಾರಕ್ಕಾಗಿಯೇ ಶ್ರೀದೇವಿಯ ಅವತಾರಗಳಾಗಿರುವುದರಿಂದ ಮಾಧ್ವಿಪಾನವೆಂದರೆ ಹೆಂಡವಲ್ಲ ಸುಧಾ ಅಥವಾ ಅಮೃತಪಾನವೆಂದು ತಿಳಿಯಬೇಕು.

ಶ್ರೀದೇವಿಯು ಮಹಿಷಾಸುರ ರಾಕ್ಷಸನೊಡನೆ ಯುದ್ಧಮಾಡುತ್ತಿದ್ದಾಗ ರಾಕ್ಷಸನು ಮದ್ಯಪಾನಮಾಡಿ ಬಂದಿರುವುದನ್ನು ಶ್ರೀದೇವಿಯು ನೋಡಿ ತಾನೂ ಮದ್ಯಪಾನಮಾಡಿಕೊಂಡು ಯುದ್ಧಕ್ಕೆ ಬರುತ್ತೇನೆಂದು ರಾಕ್ಷಸನೊಡನೆ ಹೇಳಿದಳೆಂದು ಪುರಾಣದಲ್ಲಿ ಬರೆದಿರುವುದು. ಅದುದರಿಂದ ಶ್ರೀದೇವಿಯೇ ಮದ್ಯಪಾನ ಮಾಡಿರುವಾಗ ಶ್ರೀದೇವಿಯು ಸಹ ರಾಕ್ಷಸಸ್ವಭಾವದವಳೆಂದೂ ಮತ್ತು ಮದ್ಯಪಾನವು ಹೇಯವಾದುದಲ್ಲವೆಂದೂ ಕೆಲವರು ಯೋಚಿಸುತ್ತಾರೆ. ಇದಕ್ಕೆ ಪ್ರತ್ಯುತ್ತರವೇನೆಂದರೆ:—ಶ್ರೀದೇವಿಯು ದೇವತಾ ಅವತಾರದವಳಾಗಿ ಶುದ್ಧಸತ್ವದಲ್ಲಿ ನೆಲೆಸಿದವಳು. ರಾಕ್ಷಸರು ರಜಸ್ತಮೋಸ್ವಭಾವದವರು. ರಾಕ್ಷಸರು ರಜಸ್ತಮೋಸ್ವಭಾವವಾದ ಮಾದಕಪದಾರ್ಥವನ್ನು ತೆಗೆದುಕೊಳ್ಳುತ್ತಾರೆ. ಶುದ್ಧಸತ್ವಸ್ವಭಾವದವರು ಶುದ್ಧಸತ್ವಸ್ವಭಾವವಾದ ಮಾದಕಪದಾರ್ಥವನ್ನೆಂದರೆ ಅಮೃತ ಅಥವಾ ಸುಧಾರಸವನ್ನು ಪಾನಮಾಡುತ್ತಾರೆ. ಆದುದರಿಂದ ಶ್ರೀದೇವಿಯು ಮದ್ಯಪಾನ ಮಾಡಿದವಳೆಂದರೆ ಅಮೃತ ಅಥವಾ ಸುಧಾರಸವನ್ನೇ ಪಾನಮಾಡಿದಳೆಂದು ಖಂಡಿತಾ ತಿಳಿಯತಕ್ಕದ್ದು.

ಹೇಗೆಂದರೆ:—ಕತ್ತಲೆಯು ರಾಕ್ಷಸ ಸ್ವಭಾವ. ಬೆಳಕು ದೇವ ಸ್ವಭಾವ. ಕತ್ತಲೆಯು ಅಧಿಕವಾಗುವಿಕೆಯೆ ರಾಕ್ಷಸನು ಯುದ್ಧಕಾಲದಲ್ಲಿ ಮದ್ಯಪಾನ ಮಾಡಿದ ತತ್ವ. ಅಧಿಕವಾಗುತ್ತಿರುವ ಕತ್ತಲೆಯನ್ನು ಹೋಗಲಾಡಿಸಬೇಕಾದರೆ ಬೆಳಕು ಅಥವಾ ತೇಜಸ್ಸು ಅತ್ಯಂತ ಅಧಿಕವಾಗುತ್ತಾ ಬರಬೇಕಾದುದೇ

ಶ್ರೀದೇವಿಯು ಸೇವಿಸಿದ ಮದ್ಯಪಾನದ ತತ್ವ. ಇದರಂತೆ ಅಧಿಕವಾಗುತ್ತಿರುವ ರಾಕ್ಷಸೀ ಸ್ವಭಾವವಾದ ಕೋಪವನ್ನು ದುಃಖವನ್ನು ನಾಶಪಡಿಸಬೇಕಾದರೆ ದೇವತ್ವವೂ ಆನಂದರೂಪವೂ ಆದ ಸಂತೋಷವನ್ನು ಅಧಿಕಮಾಡಿಕೊಂಡರೆ ಕೋಪವೂ ದುಃಖವೂ ನಾಶವಾಗುವುದು. ಆದುದರಿಂದ ಯುದ್ಧಕಾಲದಲ್ಲಿ ರಾಕ್ಷಸನು ಸೇವಿಸಿದ ಮದ್ಯಪಾನದ ತತ್ವವು ರಾಕ್ಷಸೀಸ್ವಭಾವವಾದ ರಜಸ್ತಮೋ ಗುಣದ ಉಲ್ಬಣದ ಸ್ವರೂಪವನ್ನೂ ಶ್ರೀದೇವಿಯು ಸೇವಿಸಿದ ಮದ್ಯಪಾನದ ತತ್ವವು ರಾಕ್ಷಸತ್ವವನ್ನು ನಾಶಮಾಡುವ ಶುದ್ಧಸತ್ವಗುಣವು ಉಲ್ಬಣವಾಗು ವಿಕೆಯ ತತ್ವವನ್ನೂ ಸೂಚಿಸುವುದು. ವೇದ, ಪುರಾಣಗಳಲ್ಲಿರತಕ್ಕ ಕೆಲವು ಶಬ್ದಗಳಿಗೆ ಸಂದರ್ಭವನ್ನು ಅನುಸರಿಸಿ ಅರ್ಥಮಾಡದಿದ್ದರೆ ಅಪಾರ್ಥವೇ ಆಗುವುದು.

### ೫೭೭. ಮಾತೃಕಾವರ್ಣರೂಪಿಣ್ಯೈನಮಃ—

ಪರಬ್ರಹ್ಮಸ್ವರೂಪಿಣಿಯಾದ ಶ್ರೀದೇವಿಯೆ ಬ್ರಾಹ್ಮಿ, ಮಾಹೇಶ್ವರೀ, ಕೌಮಾರಿ, ವೈಷ್ಣವಿ, ವಾರಾಹಿ, ಇಂದ್ರಾಣಿ, ಚಾಮುಂಡಾ ಎಂಬ ಸಪ್ತಮಾತೃಕಾ ರೂಪಿಣಿಯಾಗಿರುವಳು. ಸಪ್ತಮಾತೃಕೆಯರೇ ೫೦ ವರ್ಣ (ಅಕ್ಷರ) ರೂಪ ರಾಗಿರುತ್ತಾರೆ. ಆದುದರಿಂದ ಶ್ರೀದೇವಿಯು ವರ್ಣಕ್ಕೂ ಮೂಲವಾದ ಮಾತೃಕಾ ಶಕ್ತಿಯಾಗಿಯೂ ಅಕಾರಾದಿ ಕ್ಷಕಾರಾಂತವಾಗಿರುವ ವರ್ಣಮಾಲಿಕಾರೂಪ ವಾಗಿಯೂ ಇರುವವಳು. ಅಲ್ಲದೆ ಓಂಕಾರದ ಮೂರು ಮಾತ್ರೆಯಾದ ಅ, ಉ, ಮ, ಅಕ್ಷರಗಳ ತತ್ವದವಳು. ಅಲ್ಲದೆ ವರ್ಣ (ಬಣ್ಣ) ಗಳಿಗೆಲ್ಲಾ ಮಾತೃರೂಪ ವಾದ ಶ್ವೇತವರ್ಣದ ರೂಪಿಣಿಯು

### ೫೭೮. ಮಹಾಕೈಲಾಸನಿಲಯಾಯೈನಮಃ—

ಕೈಲಾಸವೆಂದರೆ ಆಕಾಶಾಂತರ್ಗತವಾದ ಕಳಾಸ್ವರೂಪವು. ಅಂದರೆ ಪಾರ್ವತಿ ಪರಮೇಶ್ವರರ ವಾಸಸ್ಥಾನವು. ನಮ್ಮ ದೇಹದಲ್ಲಿ ಶಿರಸ್ಸಿನಲ್ಲಿರುವ ದಹರಾಕಾಶವು ಕೈಲಾಸದ ತತ್ವದಲ್ಲಿರುವುದು. ಮಹಾಕೈಲಾಸವೆಂದರೆ ಕಳಾ ಸ್ವರೂಪಕ್ಕೂ ಅತೀತವಾದ ಪರಬ್ರಹ್ಮದಲ್ಲಿ ನೆಲೆಸಿರುವವಳು. ನಮ್ಮ ದೇಹದಲ್ಲಿ ಸಹಸ್ರಾರಕಮಲವು ಮಹಾಕೈಲಾಸವು. ಇಂತಹ ಸಹಸ್ರಾರಕಮಲದಲ್ಲಿ ನೆಲ ಸಿರುವವಳು.

### ೫೭೯. ಮೃಣಾಳಮೃದುದೋರ್ಲತಾಯೈನಮಃ—

ತಾವರೇ ದಂಟಿನಂತೆ ಮೃದುವಾದ ಲತೆಯಂತಿರುವ ತೋಳುಗಳುಳ್ಳವಳು.

**೫೮೦. ಮಹನೀಯಾಯೈನಮಃ—**

ಸಕಲ ದೇವತೆಗಳಿಂದಲೂ ಪೂಜಿಸಲ್ಪಡುವ ಮಹಾಮಹಿಮಾಸ್ವರೂಪಿಣಿಯು. ಅತ್ಯಂತ ಶ್ರೇಷ್ಠಳು ಮತ್ತು ಉದಾರಳು.

**೫೮೧. ದಯಾಮೂರ್ತ್ಯೈನಮಃ**—ಕರುಣೆಯೇ ಸ್ವರೂಪವಾಗಿರುವವಳು.

**೫೮೨. ಮಹಾಸಾಮ್ರಾಜ್ಯಶಾಲಿನ್ಯೈನಮಃ—**

ಅನಿರ್ವಚನೀಯವಾದ ಚಕ್ರವರ್ತಿನಿಯಾಗಿರುವವಳು.

**೫೮೩. ಆತ್ಮವಿದ್ಯಾಯೈನಮಃ—**

ಜೀವಬ್ರಹ್ಮ ಸಾಕ್ಷಾತ್ಕಾರವನ್ನುಂಟುಮಾಡುವ ವಿದ್ಯಾಸ್ವರೂಪಿಣಿಯು.

**೫೮೪. ಮಹಾವಿದ್ಯಾಯೈನಮಃ—**

ಸಕಲ ಬ್ರಹ್ಮಾಂಡದ ಸೃಷ್ಟಿಸ್ಥಿತಿ ಮತ್ತು ಲಯಕ್ರಮಗಳ ಸಕಲ ವಿಚಾರಗಳ ವಿದ್ಯಾ (ಜ್ಞಾನ) ಸ್ವರೂಪಿಣಿಯಾದುದರಿಂದ ಮಹಾವಿದ್ಯಾಸ್ವರೂಪಿಣಿಯು. ಪ್ರಪಂಚದಲ್ಲಿರುವ ಒಂದೊಂದು ಪುಸ್ತಕವೂ ಒಂದೊಂದು ವಿಚಾರದ ಜ್ಞಾನವನ್ನು ತಿಳಿಸುತ್ತದೆ. ಶ್ರೀ ಸರಸ್ವತೀದೇವಿಯ ಹಸ್ತದಲ್ಲಿರುವ ಪುಸ್ತಕವಾದರೋ ಬ್ರಹ್ಮಾಂಡದ ಸೃಷ್ಟಿ ಸ್ಥಿತಿ ಮತ್ತು ಲಯಕ್ರಮಗಳ ಸಕಲವಿಚಾರ ಜ್ಞಾನವನ್ನೂ ಒಳಗೊಂಡು ಜ್ಞಾನಭಂಡಾರವಾಗಿರುವುದರಿಂದಲೇ ವಿದ್ಯಾಭಿಮಾನಿದೇವತೆಯೆಂದು ನಮಸ್ಕಾರಮಾಡುತ್ತೇವೆ. ಆದುದರಿಂದಲೇ ಶ್ರೀದೇವಿಯು ಮಹಾವಿದ್ಯಾಸ್ವರೂಣಿಯಾಗಿರುತ್ತಾಳೆ.

**೫೮೫. ಶ್ರೀವಿದ್ಯಾಯೈನಮಃ—**

ಶ್ರೀ ಎಂದರೆ ಅಸದೃಶಕಾಂತಿಯೂ, ಆನಂದವೂ, ರಮಣೀಯತ್ವವೂ, ಜ್ಞಾನ ಸ್ವರೂಪವೂ, ವಿದ್ಯೆಯೂ, ಕೀರ್ತಿಯೂ, ಸಂಪತ್ತೂ, ರಾಜತ್ವವೂ, ಗುರುತ್ವವೂ ಇಷ್ಟೂ ಯಾವುದರಲ್ಲಿರುವುದೋ ಅದು ಶ್ರೀ. ಇಂತಹ ಮಹಿಮೆಗಳು ಯಾವ ವಿದ್ಯೆಯಲ್ಲಿರುವುದೋ ಅದೇ ಶ್ರೀವಿದ್ಯಾ ಎನಿಸುವುದು. ಶ್ರೀ ಎನ್ನುವುದು ಸ್ತ್ರೀಲಿಂಗವಾದ್ದರಿಂದ ಮಾತೆಯ ಪ್ರಸನ್ನತೆಯಿಂದ ಹೊಂದುವ ಅಮೃತವಿದ್ಯೆಯಾಗಿದೆ. ಇದರಿಂದ ಮಾತೆಯು ಹೆಚ್ಚು ಪಿತನು ಕಮ್ಮಿ ಎಂಬ ಭಾವನೆಯಲ್ಲ ವಿಷ್ಣುವೇ ಸರ್ವೋತ್ತಮ ಶಿವನೇ ಸರ್ವೋತ್ತಮ, ಮಾತೆಯೇ ಸರ್ವೋತ್ತಮಗಳೆಂಬ ಭೇದ ಭಾವದ ಪಾಷಂಡಿಮತವಲ್ಲ. "ಮಾತಾ ಪೂರ್ವರೂಪಂ, ಪಿತೋತ್ತರ ರೂಪಂ, ಮಾತೃದೇವೋಭವ, ಪಿತೃದೇವೋಭವ, ಮಾತೃಭ್ಯೋನಮಃ। ಪಿತೃ

ಭ್ಯೋನಮಃ" ಎಂಬದಾಗಿ ಶ್ರುತಿಯು ಸಾರುತ್ತಿರುವಂತೆ ಅಗ್ರಪೂಜೆ ಮಾತೃವಿಗೇ ಸಲ್ಲತಕ್ಕದ್ದು. ಆದುದರಿಂದ ಸಕಲಕ್ಕೂ ಮಾತೃದೇವತೆಯ ಆರಾಧನೆಯನ್ನೇ ಪ್ರಧಾನವಾದದ್ದನ್ನಾಗಿ ಇಟ್ಟುಕೊಳ್ಳಬೇಕು. ಮಾತೃಪೂಜೆಯಲ್ಲಿ ಪಿತವೊದಲುಗೊಂಡು ಸಕಲರೂ ಅಂತರ್ಭೂತರಾಗಿಯೇ ಇರುತ್ತಾರೆ. ಮಾತೃದೇವತೆಯೇ ಮುಖ್ಯವಾದುದೆನ್ನುವುದಕ್ಕೆ ದ್ವಿಜರಿಗೆಲ್ಲಾ ಕುಲದೇವತೆಯಾಗಿ ಶ್ರೀ ಗಾಯತ್ರೀ ಉಪಾಸನೆಯನ್ನೇ ಇಟ್ಟಿರುತ್ತಾರೆ. ಆದುದರಿಂದ ಮಾತೃದೇವತೆಯೇ ಮುಖ್ಯವಾದುದೆಂದು ತಿಳಿದು ಆ ದೇವಿಯನ್ನು ಶರಣು ಹೊಂದಿ ಉಪಾಸನೆ ಮಾಡಿ ಆಕೆಯ ಅನುಗ್ರಹಕ್ಕೆ ಪಾತ್ರವಾದರೆ ಶ್ರೀ ಎಂಬ ಮಹತ್ತಿನಲ್ಲಿರುವ ಅನ್ಯುತ ವಿದ್ಯೆಯನ್ನೆಲ್ಲಾ ಕರತಲಾಮಲಕವಾಗಿ ಹೊಂದಬಹುದು. ಅಂದರೆ ಪಾರಮಾರ್ಥಿಕಕ್ಕೆ ಸಾಧನವಾಗಿ ಬೇಕಾಗುವ ದೈವೀಸಂಪತ್ತಿನ ಸ್ವರೂಪವಾದ ಧರ್ಮಮಾರ್ಗದ ನಡೆವಳಿಕೆಗಳೂ, ಐಹಿಕ ಸಂಪತ್ತೂ, ಕೀರ್ತಿಯೂ, ಸಹ ಲಭ್ಯವಾಗುವುವು. ೨೩೯ ನೇ ನಾಮದಲ್ಲಿ ತಿಳಿಸಿರುವ ಚಂದ್ರವಿದ್ಯೆಯೂ ಶ್ರೀ ವಿದ್ಯೆಯೂ ಒಂದೇ ಆಗಿರುವುದು. ಇದೇ ಶ್ರೀ ವಿದ್ಯಾಸ್ವರೂಪವು. ಇಂತಹ ವಿದ್ಯಾಸ್ವರೂಪಿಣಿಯೂ ಶ್ರೀದೇವಿಯೇ ಆಗಿರುವಳು.

೫೮೬. **ಕಾಮಸೇವಿತಾಯೈನಮಃ—**

ಮನ್ಮಥನಿಂದ ಸೇವೆಮಾಡಿಸಿಕೊಳ್ಳುವವಳು.

೫೮೭. **ಶ್ರೀ ಷೋಡಶಾಕ್ಷರೀ ವಿದ್ಯಾಯೈನಮಃ—**

ಷೋಡಶಾಕ್ಷರೀ ವಿದ್ಯಾಸ್ವರೂಪಿಣಿಯು. ಪಂಚದಶಾಕ್ಷರೀ ಮಂತ್ರಕ್ಕೆ ಶ್ರೀಂ ಅಥವಾ ಐಂ ಬೀಜಾಕ್ಷರವನ್ನು ಸೇರಿಸಿದರೆ ಷೋಡಶಾಕ್ಷರಿಯಾಗುವದೆಂದು ಕೆಲವು ಆಧುನಿಕರ ಕಲ್ಪನೆ ಇದು ಸಮಂಜಸವಾಗುವುದಿಲ್ಲ. ಕಾರಣ ವೇನೆಂದರೆ ಶ್ರೀಲಲಿತಾ ಪಂಚದಶಾಕ್ಷರೀ ಮಂತ್ರವು ಪೂರ್ಣವಾದ ಮತ್ತು ಸ್ವತಂತ್ರವಾದ ಮಂತ್ರವು. ಇದಕ್ಕೆ ಶ್ರೀಂ ಅಥವಾ ಐಂ ಬೀಜಾಕ್ಷರವನ್ನು ಸೇರಿಸಿದರೆ ತತ್ವಾರ್ಥಕ್ಕೆ ಹೊಂದಿಕೆಯಾಗುವುದೇ ಇಲ್ಲವೆಂಬುದನ್ನು ಶ್ರೀಲಲಿತಾ ಪಂಚದಶಾಕ್ಷರೀ ಮಂತ್ರದ ರಹಸ್ಯಾರ್ಥವನ್ನು ಪಠಿಸಿ ಮನಸ್ಸಿಗೆ ತಂದುಕೊಳ್ಳಬಹುದು. ಅಲ್ಲದೆ "ಶ್ರೀಂ, ಹ್ರೀಂ, ಕ್ಲೀಂ, ಐಂ, ಸೌಃ, ಓಂ, ಹ್ರೀಂ, ಶ್ರೀಂ, ಕ ಏ ಈ ಲ ಹ್ರೀಂ, ಹಸಕಹಲ ಹ್ರೀಂ, ಸಕಲ ಹ್ರೀಂ, ಸೌಃ ಐಂ, ಕ್ಲೀಂ, ಹ್ರೀಂ ಶ್ರೀಂ" ಎಂಬುದು ಷೋಡಶಾಕ್ಷರೀ ಮಂತ್ರವೆಂದು ತಾಂತ್ರಿಕರ ಕಲ್ಪನೆ. ಈ ತಾಂತ್ರಿಕರ ಕಲ್ಪನೆಯಲ್ಲಿ ಶ್ರೀಲಲಿತಾ ಪಂಚದಶಾಕ್ಷರೀ ಮಂತ್ರದ ಒಂದೊಂದು ಪಾದವನ್ನೇ ಒಂದೊಂದು ಅಕ್ಷರವನ್ನಾಗಿ ಪರಿಗಣಿಸಿದೆ. ಒತ್ತಕ್ಷರವಾಗದೆ ಬಿಡಿಬಿಡಿಯಾದ ೪, ೫, ೬ ಅಕ್ಷರಗಳನ್ನು ಒಂದು ಅಕ್ಷರವೆಂತ ಹೇಳುವುದು ಸಾಧುವಲ್ಲ ಮತ್ತು ಶಾಸ್ತ್ರಕ್ಕೆ

ಅವಮರ್ಯಾದೆ. ಷೋಡಶಾಕ್ಷರೀ ಮಂತ್ರವೆಂದರೆ ೧೬ ಅಕ್ಷರಗಳ ಮಂತ್ರವೇ ಆಗಬೇಕು. ಉಪನಿಷತ್ತುಗಳಲ್ಲೂ ಶ್ರೀ ಶಂಕರಾಚಾರ್ಯರವರ ಗ್ರಂಥಗಳಲ್ಲೂ ಷೋಡಶಾಕ್ಷರೀ ಮಂತ್ರದ ವಿಚಾರ ನನಗೆ ಕಂಡುಬಂದಿಲ್ಲ. ಹದಿನಾರು ಅಕ್ಷರ ಗಳೇ ಉಳ್ಳ ಮಂತ್ರವು ಯಾರಿಗಾದರೂ ಉಪನಿಷತ್ತುಗಳಲ್ಲಿ ದೊರೆತರೆ ಅದನ್ನು ಮಂತ್ರವೆಂದು ಧಾರಾಳವಾಗಿ ತೆಗೆದುಕೊಳ್ಳಬಹುದು. ಅಲ್ಲದೆ ಈ ನಾಮದಲ್ಲಿ ಷೋಡಶಾಕ್ಷರೀ ಮಂತ್ರವೆಂದು ಹೇಳಿಲ್ಲ. ಷೋಡಶಾಕ್ಷರೀ ವಿದ್ಯೆಯೆಂದು ಹೇಳಿದೆ. ಶ್ರೀ ಷೋಡಶಾಕ್ಷರೀ ವಿದ್ಯೆಯನ್ನು ಶ್ರೀ ಷೋಡಶಾಕ್ಷರೀ ಮಂತ್ರ ಸ್ವರೂಪಕ್ಕೆ ಸೇರಿದುದೆಂದು ಯಾವ ಆಧಾರದ ಮೇಲೆ ತೆಗೆದುಕೊಳ್ಳುವುದು? ಮನುವಿದ್ಯಾ, ಚಂದ್ರವಿದ್ಯಾ, ಶ್ರೀವಿದ್ಯಾ, ಸಂಧ್ಯಾವಿದ್ಯಾ ಇವುಗಳೆಲ್ಲಾ ತತ್ತ್ವ ಗಳಾಗಿವೆಯೇ ಹೊರತು ಮಂತ್ರಗಳಾಗುವುದಿಲ್ಲ. ಆದುದರಿಂದ ಈ ಷೋಡ ಶಾಕ್ಷರೀ ವಿದ್ಯೆಯು ಯಾವುದೆಂದರೆ:—ಸ್ವತಃ ಪ್ರಕಾಶಕಗಳಾದ ಹದಿನಾರು ಸ್ವರಾಕ್ಷರಗಳಿಗೆ ಸಂಬಂಧಪಟ್ಟ ವಿದ್ಯೆಯು ಷೋಡಶಾಕ್ಷರೀ ವಿದ್ಯೆಯಾಗಿರುವುದು. ೧೬ ಸ್ವರಾಕ್ಷರಗಳು ಉದಾತ್ತ, ಅನುದಾತ್ತ, ಸ್ವರಿತ, ಪ್ರಚಯಗಳ ಭೇದದಿಂದ ೬೪ ಕಲೆಗಳಾಗುವುವೆಂದು ೨೩೬--೨೩೭ ನೇ ನಾಮಗಳಲ್ಲಿ ತಿಳಿಸಿರುತ್ತೇವೆ. ಅಲ್ಲದೆ ೧೬ ಸ್ವರಾಕ್ಷರಗಳೂ ಕ ಅಕ್ಷರ ಮೊದಲು ಕ್ಷ ಅಕ್ಷರದವರೆಗಿರುವ ಎಲ್ಲಾ ಅಕ್ಷರಗಳಿಗೂ ವ್ಯಾಪಿಸಿ, ಕೊಂಬು, ದೀರ್ಘ, ಏತ್ವ ಮೊದಲಾದ ವ್ಯತ್ಯಾಸ ಗಳನ್ನು ಹೊಂದುವುದರಿಂದ ಅನೇಕ ವಿಧವಾದ ಶಕ್ತಿಭೇದವೂ ಅರ್ಥಭೇದವೂ ಆಗುವುದು. ಆದುದರಿಂದ ೧೬ ಸ್ವರಗಳು ೬೪ ಕಲೆಗಳಾಗುವ ಮತ್ತು ವ್ಯಂಜನ ಮತ್ತು ಯೋಗವಾಹದ ಅಕ್ಷರಗಳೊಡನೆ ಕಲೆಯುವ ಅಕ್ಷರಗಳು ಒಂದಕ್ಕೊಂದು ಸೇರಿ ಒತ್ತಕ್ಷರಗಳಾಗುವ ಅನಂತರ ಅಕ್ಷರಗಳು ಸೇರಿ ಪದಗಳೂ ಮತ್ತು ವಾಕ್ಯ ಗಳಾಗುವ ಅನೇಕಾನೇಕ ಕಲಾ ಎಂದರೆ ನಾದಬ್ರಹ್ಮದ ಶಕ್ತಿಸ್ವರೂಪಗಳಾಗುವುವು. ಈ ರೀತಿಯಾಗುವುದರ ಸ್ವರೂಪವನ್ನು ತಿಳಿಸುವುದೇ ಷೋಡಶಾಕ್ಷರೀ ವಿದ್ಯೆ ಯಾಗಿರುವುದು. ಶ್ರೀದೇವಿಯು ಇಂತಹ ನಾದಬ್ರಹ್ಮದ ಷೋಡಶಾಕ್ಷರೀ ವಿದ್ಯಾ ಸ್ವರೂಪಿಣಿಯು.

**೫೮೮. ತ್ರಿಕೂಟಾಯೈನಮಃ—**

ತ್ರಿಕೂಟಸ್ವರೂಪಿಣಿಯು. ಅಂದರೆ ಅಕ್ಷರಗಳೆಲ್ಲಾ ಸ್ವರ, ವ್ಯಂಜನ, ಯೋಗವಾಹವೆಂಬ ಮೂರುಕೂಟಗಳಾಗಿವೆ. ಶ್ರೀದೇವಿಯು ಇಂತಹ ಕೂಟ ಸ್ವರೂಪಿಣಿಯು. ಅಲ್ಲದೆ ನಮ್ಮಲ್ಲಿರುವ ಸೂರ್ಯನಾಡಿ (ಗಂಗೆ) ಚಂದ್ರನಾಡಿ (ಯಮುನೆ) ಸುಷುಮ್ನಾನಾಡಿ (ಸರಸ್ವತಿ) ಗಳಾದ ಈ ಮೂರೂ ಸೇರುವ ಸ್ಥಳಕ್ಕೆ ತ್ರಿಕೂಟವೆಂದು ಶ್ರೀ ಶಂಕರಾಚಾರ್ಯರವರು ಯೋಗತಾರಾವಳಿಯಲ್ಲಿ ಹೇಳಿರುತ್ತಾರೆ. ಈ ಮೂರೂ ಮೂಲಾಧಾರಚಕ್ರದಲ್ಲಿ ಸೇರುತ್ತವೆ. ಮತ್ತು ಭ್ರೂಮಧ್ಯದಲ್ಲಿ

ಸೇರುತ್ತವೆ. ಈ ಮೂರುನಾಡಿಗಳೂ ದೇಹದಲ್ಲಿ ಮೂರು ಶಿಖರಗಳಂತಿವೆ. ಶ್ರೀದೇವಿಯು ಇಂತಹ ಕೂಟಸ್ವರೂಪಿಣಿಯು.

**೫೮೯. ಕಾಮಕೋಟಿಕಾಯೈನಮಃ—**

ಮೇಲಿನ ಎರಡು ನಾಮಗಳಲ್ಲಿ ತಿಳಿಸಿರುವಂತೆ ೧೬ ಸ್ವರಾಕ್ಷರಗಳು ಕಾಮ ವೆಂದರೆ ಸಂಯೋಗ ಎಂಬ ಅರ್ಥದಂತೆ ವ್ಯಂಜನಾಕ್ಷರಗಳಲ್ಲಿಯೂ ಯೋಗವಾಹ ಗಳಲ್ಲಿಯೂ ಸೇರುವಿಕೆ, ವ್ಯಂಜನಾಕ್ಷರಗಳು ಯೋಗವಾಹಾಕ್ಷರಗಳೂ ಒಂದ ಕ್ಕೊಂದು ಒತ್ತಕ್ಷರಗಳಾಗಿ ಸೇರುವಿಕೆ, ಅಕ್ಷರಗಳು ಸೇರಿ ಪದಗಳಾಗುವಿಕೆ, ಇಂತಹ ಸೇರುವಿಕೆಗಳು ಕೋಟ್ಯಾಂತರಗಳಾಗುವುವು. ಹೀಗೆ ಅಕ್ಷರಗಳು ಕೋಟ್ಯಾಂತರ ಸೇರುವಿಕೆಗಳಿಂದ ಕೋಟ್ಯಾಂತರ ಉಪಶಕ್ತಿಗಳಾಗುವುವು. ಆದುದ ರಿಂದ ಶ್ರೀದೇವಿಯು ಅಕ್ಷರಗಳ ಸಂಯೋಗದಿಂದ ಉಂಟಾಗುವ ಕೋಟ್ಯಾಂತರ ಪದಗಳ ಶಕ್ತಿಯಾಗಿಯೂ ಇರುತ್ತಾಳೆ. ಇದೇ ಕಾಮಕೋಟಿಕಾಸ್ವರೂಪವು.

**೫೯೦. ಕಟಾಕ್ಷಕಿಂಕರೀಭೂತ ಕಮಲಾಕೋಟಿಸೇವಿತಾಯೈನಮಃ—**

ಅಕ್ಷರಗಳ ಸಂಯೋಗದಿಂದ ಉಂಟಾಗುವ ಪದಗಳ ಶಕ್ತಿಗಳೇ ಕಮಲಾ ಎನಿಸಿಕೊಳ್ಳುತ್ತವೆ. ಕಮಲವು ದಳಗಳಿಂದ ಕೂಡಿರುತ್ತೆ. ಪದವು ಅಕ್ಷರಗಳಿಂದ ಕೂಡಿರುತ್ತದೆ. ಕಮಲಾಕೋಟಿಯೆಂದರೆ ಅಕ್ಷರಗಳಿಂದ ಸಂಯೋಗವಾದ ಪದ ಗಳ ಶಕ್ತಿಗಳು ಕೋಟ್ಯಾಂತರವಾಗುತ್ತವೆ. ಇಂತಹ ಕೋಟ್ಯಾಂತರ ಪದಗಳ ಶಕ್ತಿಗಳು ತಮಗೆ ನಾಥಳಾದ ಶ್ರೀದೇವಿಯ ಕಟಾಕ್ಷವೀಕ್ಷಣೆಯನ್ನು ಹೊಂದಲು ದಾಸರಂತಾಗಿ ಶ್ರೀದೇವಿಯನ್ನು ಕಳಾಸ್ವರೂಪದಲ್ಲಿ ಸೇವೆಮಾಡಿರುತ್ತವೆ. ಇದಕ್ಕೆ ಉದಾಹರಣೆಗಾಗಿ ಅಕ್ಷರಗಳಿಂದಾಗುವ ಪದಗಳ ಕೋಟ್ಯಾನು ಕೋಟಿ ಶಕ್ತಿಗಳನ್ನು ನಾವು ಪ್ರಾರ್ಥನೆಯಲ್ಲಿ ಉಪಯೋಗಿಸಿದರೂ ಆ ಶಕ್ತಿಗಳೆಲ್ಲಾ ಮೂಲರೂಪಳಾದ ಶ್ರೀದೇವಿಗೆ ಸೇವಕಸ್ಥಾನದಲ್ಲಿವೆ.

೫೭೮ ರಿಂದ ೫೯೦ ರ ವರೆಗಿನ ತತ್ವಗಳೆಲ್ಲಾ ನಾದಬ್ರಹ್ಮದ ಕಾರ್ಯಕ್ಕೆ ಸೇರಿದ್ದು. ಈ ಕೆಳಗಿನ ಶ್ರುತಿವಾಕ್ಯವನ್ನು ಬಿಡಿಸಿ ತಿಳಿದುಕೊಂಡರೆ ಮೇಲಿನ ನಾಮಗಳ ತತ್ವಗಳು ಚೆನ್ನಾಗಿ ಗೊತ್ತಾಗುವುದು.

> " ಅಕಾರಾದಿಕ್ಷಕಾರಾನ್ತಾ ನ್ಯಕ್ಷರಾಣಿ ಸಮೀರಯೇತ್ ।
> ಅಕ್ಷರೇಭ್ಯಃ ಪದಾನಿಸ್ಯುಃ ಪದೇಭ್ಯೋ ವಾಕ್ಯಸಂಭವಃ ।
> ಸರ್ವವಾಕ್ಯಾತ್ಮಕಾ ಮನ್ತ್ರಾ ವೇದ ಶಾಸ್ತ್ರಾಣಿ ಕೃತ್ಸ್ನಶಃ ।
> ಪುರಾಣಾನಿಚ ಕಾವ್ಯಾನಿ ಭಾಷಾಶ್ಚ ವಿವಿಧಾ ಅಪಿ ।

ಸಪ್ತಸ್ವರಾಶ್ಚಗಾಥಾಶ್ಚ ಸರ್ವೇನಾದ ಸಮುದ್ಭವಾಃ |
ಏಷಾಸರಸ್ವತೀ ದೇವೀ ಸರ್ವಭೂತ ಗುಹಾಶ್ರಯಾ ||"

**೫೯೧. ಶಿರಸ್ಥಿತಾಯೈನಮಃ—**

ಶಿರಸ್ಸಿನಲ್ಲಿ ನೆಲೆಸಿರುವವಳು. ಅಂದರೆ ನಮ್ಮ ಶಿರಸ್ಸಿನಲ್ಲಿರುವ ಸಹಸ್ರಾರ ಕಮಲದಲ್ಲಿ ನೆಲೆಸಿರುವವಳು.

**೫೯೨. ಚನ್ದ್ರನಿಭಾಯೈನಮಃ—**

ಚಂದ್ರನ ಕಾಂತಿ ಅಥವಾ ಪ್ರಭೆಯ ಸ್ವರೂಪವಾಗಿರುವವಳು.

**೫೯೩. ಫಾಲಸ್ಥಾಯೈನಮಃ—**ಭ್ರೂಮಧ್ಯದಲ್ಲಿ ನೆಲೆಸಿರುವವಳು.

**೫೯೪. ಇನ್ದ್ರಧನುಃಪ್ರಭಾಯೈನಮಃ—**

ಕಾಮನಬಿಲ್ಲಿನ ಬಣ್ಣದ ಸ್ವರೂಪಳು. ಅಂದರೆ ೫೯೩ ನೇ ನಾಮದಲ್ಲಿ ತಿಳಿಸಿರುವ ಭ್ರೂಮಧ್ಯದಲ್ಲಿ ಧ್ಯಾನದಕಾಲದಲ್ಲಿ ತೇಜೋಬಿಂದುವು ಗೋಚರವಾಗುವುದು. ಈ ಬಿಂದುವಿನ ತೇಜಸ್ಸು ಕಾಮನಬಿಲ್ಲಿನ ಬಣ್ಣದಂತೆ ಇರುವುದು.

**೫೯೫. ಹೃದಯಸ್ಥಾಯೈನಮಃ—**

ಎದೆಯಲ್ಲಿರುವ ಹೃದಯಸ್ಥಳವೆಂದರೆ ಅನಾಹತಚಕ್ರದಲ್ಲಿ ನೆಲೆಸಿರುವವಳು.

**೫೯೬. ರವಿಪ್ರಖ್ಯಾಯೈನಮಃ—**

ಸೂರ್ಯಸಮಾನಳು. ಅಂದರೆ ೫೯೫ ನೇ ನಾಮದಲ್ಲಿ ತಿಳಿಸಿರುವ ಅಧೋಮುಖವಾಗಿರುವ ಅನಾಹತಚಕ್ರದಲ್ಲೇ ನಮ್ಮಲ್ಲಿರುವ ರವಿಯು ಇರುವನು. ಬ್ರಹ್ಮಾಂಡದಲ್ಲಿರುವ ರವಿಯ ಕಿರಣಗಳು ಅಧೋಮುಖವಾಗಿ ಪ್ರಕಾಶವಾಗಿದ್ದು ಲಯಕಾಲದಲ್ಲಿ ಊರ್ಧ್ವಮುಖವಾಗುವಂತೆ ನಮ್ಮಲ್ಲಿ ಅನಾಹತಚಕ್ರದಲ್ಲಿರುವ ರವಿಯು ಸಹ ಅನಾಹತಚಕ್ರದ ಭೇದನೆಯ ಕಾಲದಲ್ಲಿ ಊರ್ಧ್ವಮುಖವಾದ ಅನಂತರವೇ ಸಾಕ್ಷಾತ್ಕಾರವುಂಟಾಗುವುದು. ಇದಕ್ಕೆ "ಹೃದಯಂ ಚಾಪ್ಯಧೋಮುಖಂ" ಮತ್ತು "ತಸ್ಯಾಶ್ಶಿಖಾಯಾ ಮಧ್ಯೆ ಪರಮಾತ್ಮಾ ವ್ಯವಸ್ಥಿತಃ" ಎಂಬ ಶ್ರುತ್ಯಾಧಾರವಿದೆ.

**೫೯೭. ತ್ರಿಕೋಣಾನ್ತರದೀಪಿಕಾಯೈನಮಃ—**

ನಮ್ಮಲ್ಲಿರುವ ಮೂಲಾಧಾರಚಕ್ರವು ನಾಲಕ್ಕು ಕಮಲದಳವುಳ್ಳದ್ದಾಗಿದೆ. ಈ ಕಮಲದೊಳಗೆ ತ್ರಿಕೋಣಾಕಾರ (ಮೂರು ಮೂಲೆ) ವಿದೆ. ಈ ಮೂಲಾ

ಧಾರಚಕ್ರದಲ್ಲಿ ಗಾರ್ಹಪತ್ಯಾಗ್ನಿಯು ಇರುವುದು. ಈ ಅಗ್ನಿಯು ಪ್ರಜ್ವಲನೆಯಾಗದೆ ಬ್ರಹ್ಮರಂಧ್ರ (ಸುಷುಮ್ನಾ) ನಾಡಿಯ ಬಾಗಿಲು ತೆಗೆದು ಕುಂಡಲಿನೀ ಶಕ್ತಿಯು ಮೇಲ್ಮುಖವಾಗಿ ಹೋಗಲು ಯತ್ನವಿಲ್ಲ. ಆದುದರಿಂದ ಮೂಲಾಧಾರದಲ್ಲಿ ಉಂಟಾಗುವ ಅಗ್ನಿಪ್ರಜ್ವಲನೆಯ ಸ್ವರೂಪವೂ ಶ್ರೀದೇವಿಯೇ ಆಗಿರುತ್ತಾಳೆ.

೫೯೧ ನೇ ಶಿರಸ್ಥಿತಾ ಎಂಬ ನಾಮದಿಂದ ಇದುವರೆಗೂ ಇರುವ ನಾಮಗಳ ವಿಚಾರಗಳು ಪರಮಾತ್ಮನನ್ನು ಸಾಕ್ಷಾತ್ಕಾರಮಾಡಿಕೊಳ್ಳಲು ಧ್ಯಾನಕ್ಕೆ ಪ್ರಾರಂಭ ಮಾಡಿದ ಅಧಿಕಾರಿಯು ಪರಮಾತ್ಮನನ್ನು ಸಾಕ್ಷಾತ್ಕಾರಮಾಡಿಕೊಳ್ಳುವವರೆಗೆ ಧ್ಯಾನಮಾರ್ಗದಲ್ಲಿ ಹೊಂದುವ ಅನುಭವಗಳ ತತ್ವಗಳನ್ನು ತಿಳಿಸುತ್ತವೆ. ಧ್ಯಾನದ ಪ್ರಾರಂಭದಲ್ಲಿ ೫೯೭ ನೇ ತ್ರಿಕೋಣಾಂತರದೀಪಿಕಾ ಎಂಬ ನಾಮದ ತತ್ವವಾದ ತ್ರಿಕೋಣಾಕಾರವಾದ ಮೂಲಾಧಾರಚಕ್ರದಲ್ಲಿರುವ ಅಗ್ನಿಯು ಪ್ರಜ್ವಲನೆಯಾಗುವುದು. ಈ ಕಾಲದಲ್ಲಿ ಧ್ಯಾನಾಭ್ಯಾಸಬಲದಿಂದ ಮೂಲಾಧಾರ ಚಕ್ರದಲ್ಲಿ ಸರ್ಪಾಕಾರವಾಗಿರುವ ಶ್ರೀ ಕುಂಡಲಿನೀಶಕ್ತಿಯು ಬ್ರಹ್ಮರಂಧ್ರನಾಡಿಯೊಳಗೆ ಪ್ರವೇಶಿಸುತ್ತಾ ಬರುವುದು. ಈ ತತ್ವಸಮರ್ಥನೆಗೆ "ವಾಯ್ವಾಘಾತ ವಶಾದಗ್ನೀ ಸ್ವಾಧಿಷ್ಠಾನ ಗತೋಜ್ವಲ್ | ಜ್ವಲನಾಘಾತಪವನಾಘಾತೋರುನ್ನಿದ್ರಿತೋಹಿರಾಟ್ ||" ಎಂಬದಾಗಿ ಯೋಗಕುಂಡಲ್ಯುಪನಿಷತ್ತಿನಲ್ಲೂ, "ಯೋಗ ಕಾಲೇನಮರುತಾ ಸಾಗ್ನಿನಾ ಬೋಧಿತಾಸತೀ | ಸ್ಫುರಿತಾಹೃದಯಾಕಾಶೆ ನಾಗ ರೂಪಾಮಹೋಜ್ವಲಾ ||" ಎಂಬದಾಗಿ ದರ್ಶನೋಪನಿಷತ್ ಮತ್ತು ತ್ರಿಶಿಖಿ ಬ್ರಾಹ್ಮಣೋಪನಿಷತ್ತುಗಳಲ್ಲೂ ಹೇಳಿರುವುದಲ್ಲದೆ ಶ್ರೀ ಶಂಕರಭಗವತ್ಪಾದರವರು ಕೂಡ ಯೋಗತಾರಾವಳಿಯಲ್ಲಿ "ಉತ್ಥಾಪಿತಾಧಾರ ಹುತಾಶನೋಲ್ಕೈಃ" ಎಂಬದಾಗಿ ಅಪ್ಪಣೆಕೊಡಿಸಿರುತ್ತಾರೆ. ಅಂದರೆ ಧ್ಯಾನಕಾಲದಲ್ಲಿ ಮೂಲಾಧಾರ ಚಕ್ರದಲ್ಲಿ ಅಗ್ನಿಪ್ರಜ್ವಲನೆಯಾಗಿ ಶ್ರೀ ಕುಂಡಲಿನೀಶಕ್ತಿಯು ಬ್ರಹ್ಮರಂಧ್ರದಲ್ಲಿ ಪ್ರವೇಶಿಸುತ್ತೆಂಬ ಅರ್ಥವನ್ನೇ ಮೇಲಿನ ಆಧಾರವಾಕ್ಯಗಳು ಪ್ರತಿಪಾದಿಸುತ್ತವೆ.

ಧ್ಯಾನದ ಪ್ರಥಮಾವಸ್ಥೆಯಲ್ಲಿ ನಾವು ಧ್ಯಾನಿಸುವ ಅಂತರ್ಮುಖದ ತೇಜಸ್ಸು ಆಗತಾನೆ ಉದಯವಾದ ಸೂರ್ಯನಂತೆ ಕೆಂಪಾಗಿರುತ್ತದೆ. ಇದಕ್ಕೆ "ಬಾಲಾದಿತ್ಯಮಂಡಲ ಮಧ್ಯಸ್ಥಾಂ ರಕ್ತವರ್ಣಾಂ" ಎಂಬ ಶ್ರುತ್ಯಾಧಾರವೂ ಇರುತ್ತದೆ. ಪ್ರಾತಃಕಾಲದ ಸೂರ್ಯನು ಮಧ್ಯಾಹ್ನಕ್ಕೆ ತೇಜಃಪುಂಜನಾಗುವಂತೆ ಧ್ಯಾನವು ಅಭಿವೃದ್ಧಿಯಾದರೆ ಅಧಿಕಾರಿಯು ಅಂತರ್ಮುಖದಲ್ಲಿ ತನ್ನಲ್ಲಿರುವ ಮಧ್ಯಾಹ್ನದ ಸೂರ್ಯಪ್ರಭೆಯಲ್ಲಿ ನಿಲ್ಲುತ್ತಾನೆ. ಮಣ್ಡಲಬ್ರಾಹ್ಮಣೋಪನಿಷತ್ ಅದ್ವಯತಾರಕೋಪನಿಷತ್ತುಗಳಲ್ಲಿನ "ಪುರುಷಸ್ಯ ದೃಷ್ಟ್ಯಗ್ರೇ ಜ್ಯೋತಿರ್ಮಯೂಖಾವರ್ತನ್ತೆ ತದ್ದೃಷ್ಟಿಃ ಸ್ಥಿರಾಭವತಿ | ಕೋಟಿಸೂರ್ಯಪ್ರಕಾಶಂ ಸೂರ್ಯಾಕಾಶಂ ಭವತಿ |

ಏವಮಭ್ಯಾಸಾತ್ತನ್ಮಯೋ ಭವತಿ।" ಎಂಬ ವಾಕ್ಯವು ಮೇಲಿನ ತತ್ವಕ್ಕೆ ಆಧಾರವಾಗಿದೆ. ಅಧಿಕಾರಿಯು ಈ ಸ್ಥಿತಿಯನ್ನು ಪಡೆದಾಗ ಶ್ರೀಕುಂಡಲಿನೀ ಶಕ್ತಿಯು ಮೂಲಾಧಾರದಿಂದ ಎದ್ದು ಬ್ರಹ್ಮರಂಧ್ರನಾಡಿಯೊಳಗೆ ಮೇಲ್ಮುಖವಾಗಿ ಪ್ರವೇಶಿಸಿ ಹೃದಯಕೋಶದಲ್ಲಿರುವ ಅನಾಹತಚಕ್ರವನ್ನು ಸೇರುವುದು ಈ ಮೇಲಿನ ತತ್ವಗಳೇ ಹೃದಯಸ್ಥಾರವಿಪ್ರಖ್ಯಾ ಎಂಬೆರಡು ನಾಮಗಳ ತತ್ವಗಳಾಗಿವೆ.

ತೇಜಃ ಪುಂಜನಾದ ಮಧ್ಯಾಹ್ನದ ಸೂರ್ಯಪ್ರಭೆಯ ಸ್ಥಿತಿಗೆ ಬಂದಿರುವ ಧ್ಯಾನಮಾಡುವ ಅಧಿಕಾರಿಯು ಧ್ಯಾನದಲ್ಲಿ ಇನ್ನೂ ಮುಂದುವರಿದರೆ ತನ್ನಲ್ಲಿರುವ ಸೂರ್ಯತೇಜಸ್ಸು ತಗ್ಗುತ್ತಾ ಅಸ್ತಮಾನ ಕಾಲದ ಸೂರ್ಯತೇಜಸ್ಸಿನಲ್ಲಿ ನಿಲ್ಲುತ್ತಾನೆ. ಇಂತಹ ಸ್ಥಿತಿಗೆ ಬಂದಾಗ ಅಂತರ್ಮುಖದಲ್ಲಿ ಇಂದ್ರ ಧನುಃ ಪ್ರಭಾ ಎಂದರೆ ಕಾಮನ ಬಿಲ್ಲಿನ ಬಣ್ಣದಲ್ಲಿ ನಿಲುಗಡೆಯನ್ನು ಹೊಂದುತ್ತಾನೆ. "ನೀಲತೋಯದ ಮಧ್ಯಸ್ಥಾದ್ವಿದ್ಯುಲ್ಲೇಖೇವ ಭಾಸ್ವರಾ" ಎಂಬ ತೈತ್ತಿರೀಯ ಶ್ರುತಿವಾಕ್ಯವು ಮೇಲಿನ ತತ್ವಕ್ಕೆ ಆಧಾರವಾಗಿದೆ. ಮೂಲಾಧಾರಚಕ್ರದಿಂದ ಮೇಲ್ಮುಖವಾಗಿ ಹೊರಟು ಅನಾಹತಚಕ್ರವನ್ನು ಸೇರಿದ್ದ ಶ್ರೀ ಕುಂಡಲಿನೀಶಕ್ತಿಯು ಅನಾಹತಚಕ್ರದಿಂದಲೂ ಮೇಲಕ್ಕೆ ಭ್ರೂಮಧ್ಯದಲ್ಲಿರುವ ಆಜ್ಞಾಚಕ್ರವನ್ನು ಸೇರಿರುವ ಸ್ಥಿತಿಯಲ್ಲೆ ಪಾಲಸ್ಥಾ ಇಂದ್ರಧನುಃಪ್ರಭಾ ಎಂಬ ಸ್ಥಿತಿಯನ್ನು ಧ್ಯಾನಾಭ್ಯಾಸದ ಅಧಿಕಾರಿಯು ಹೊಂದುವನು.

ಧ್ಯಾನಾಭ್ಯಾಸವು ಇನ್ನೂ ಅಭಿವೃದ್ಧಿಯಾಗಿ ಧ್ಯಾನದ ಪರಿಪಕ್ವಾವಸ್ಥೆಯನ್ನು ಹೊಂದುವ ಕಾಲದಲ್ಲಿ ಶ್ರೀಕುಂಡಲಿನೀ ಶಕ್ತಿಯು ಭ್ರೂಮಧ್ಯದ ಮೇಲೆ ಶಿರಸ್ಸಿನಲ್ಲಿರುವ ದಹರಾಕಾಶದಲ್ಲಿ ನೆಲೆಸುವಳು. ಈ ಸ್ಥಿತಿಯಲ್ಲಿ ಶಿರಸ್ಥಿತಾ ಚಂದ್ರನಿಭಾ ಎಂಬ ಮಹತ್ತನ್ನು ಅಧಿಕಾರಿಯು ಪಡೆಯುವನು. ಅಂತರಿಂದ್ರಿಯ ಬಹಿರಿಂದ್ರಿಯಗಳ ವಿಕಾರಗಳು ಲೇಶವೂ ಇಲ್ಲದಿರುವ ಅತ್ಯುತ್ತಮವಾದ ಶಾಂತಿಯುಳ್ಳದ್ದಾಗಿಯೂ, ಚಂದ್ರನಕಾಂತಿಮಾತ್ರಉಳ್ಳ ಪ್ರಕಾಶಸ್ವರೂಪವಾಗಿಯೂ, ಪರಮಾಹ್ಲಾದಕರವಾದ ಆನಂದಮಯದಲ್ಲಿ ನಿಲುಗಡೆಯನ್ನು ಹೊಂದಿ ದೇಹಜ್ಞಾನವಿಲ್ಲದ "ನಾನು" ಎಂಬ ಜ್ಞಾನಮಾತ್ರ ಶೇಷವಾಗಿರುವ ಸ್ಥಿತಿಯಾಗಿಯೂ, ಬಿಂದು ನಾದಕಳೆಗಳಲ್ಲಿ ಕಳಾಸ್ಥಿತಿಯಾಗಿಯೂ ಇರುವ ಸ್ಥಿತಿಯನ್ನು ಅಧಿಕಾರಿಯು ಹೊಂದುವಿಕೆಯೇ ಶಿರಸ್ಥಿತಾ ಚಂದ್ರನಿಭಾ ನಾಮಗಳ ತತ್ವಗಳಾಗಿವೆ. "ಆರ್ದ್ರಂ ಜ್ವಲತಿ ಜ್ಯೋತಿರಹಮಸ್ಮಿ" ಎಂಬ ತೈತ್ತಿರೀಯ ಶ್ರುತಿಪ್ರಮಾಣದಂತೆ ಅಮೃತಸ್ವರೂಪವಾದ ತೇವದಿಂದೊಡಗೂಡಿದ ಚಂದ್ರನ ಪ್ರಕಾಶಕ್ಕೆ ಆರ್ದ್ರಂಜ್ವಲತಿ ಎಂದು ಹೆಸರು. ಇಂತಹ ಕಾಂತಿಯಲ್ಲಿ ಅಧಿಕಾರಿಯು ಇರುತ್ತಾನೆ. ಶ್ರೀಶಂಕರಭಗವತ್ಪಾದರವರು ಅಪ್ಪಣೆಕೊಡಿಸಿರುವ "ಸುಧಾಮೂರ್ತಿಮೀಡೆ ಮಹಾನಂದರೂಪಮ್"

ಅಂದರೆ ಅತಿಶಯವಾದ ಆನಂದಮಯವಾದ ಅಮೃತಮಯ ಶರೀರವೇ ಶಿರಸ್ಥಿತಾ ಚಂದ್ರನಿಭಾ ತತ್ವವಾಗಿದೆ. ಇದೇ ಈಶ್ವರಸೋಪಾನವಾಗಿಯೂ ಇದೆ. ಅಗ್ನಿಯು ಶಾಂತವಾಗುವಂತೆ ಈ ಸ್ಥಿತಿಯಲ್ಲಿರುವ "ನಾನು" ಎಂಬ ಜ್ಞಾನವು ಆನಂದದಲ್ಲೇ ಶಾಂತವಾದರೆ ಅದೇ ಪರಬ್ರಹ್ಮಸಾಕ್ಷಾತ್ಕಾರದ ಸ್ಥಿತಿಯಾಗಿರುವುದು. ಈ ಮೇಲಿನ ಅಂತರ್ಮುಖದಲ್ಲಿ ನಡೆಯುವ ಮಹತ್ತುಗಳೆಲ್ಲಾ ಶ್ರೀದೇವಿಯೆ ಆಗಿರುತ್ತಾಳೆ. ೬೧೨ ನೆಯ ನಾಮದವರೆಗೂ ಶ್ರೀ ಕುಂಡಲಿನೀಶಕ್ತಿಯ ಮಹಿಮೆಯೇ ಬರುವುದು.

**೫೯೮. ದಾಕ್ಷಾಯಣ್ಯೈನಮಃ—**

ದಕ್ಷಬ್ರಹ್ಮನ ಮಗಳು. ದಕ್ಷ-ಪ್ರವೃದ್ಧಃ ಎಂಬಂತೆ ಪ್ರಪಂಚಾಕಾರವಾಗಿ ವೃದ್ಧಿಹೊಂದುವವನ ಪುತ್ರಿಯು. ಅಂದರೆ ಮೂಲಾಧಾರದಲ್ಲಿರುವ ಕುಂಡಲಿನೀ ಶಕ್ತಿಯು ಬ್ರಹ್ಮರಂಧ್ರದ ಬಾಗಿಲನ್ನು ಮುಚ್ಚಿಕೊಂಡು ಪ್ರಪಂಚಾಕಾರವೆಂದರೆ ದೇಹವ್ಯಾಪಾರವನ್ನು ಮಾಡಿಸುತ್ತಿರುವುದರಿಂದ ಕುಂಡಲಿನೀಶಕ್ತಿಯೇ ದಕ್ಷಪುತ್ರಿಯಾದ ದಾಕ್ಷಾಯಣಿಯು.

**೫೯೯. ದೈತ್ಯಹಸ್ತ್ರ್ಯೈನಮಃ—**

ರಾಕ್ಷಸರನ್ನು ನಿಗ್ರಹಿಸುವವಳು. ಮೇಲಿನ ನಾಮದಲ್ಲಿ ಹೇಳಿರುವ ದಾಕ್ಷಾಯಣಿಯಾದ ಕುಂಡಲಿನೀಶಕ್ತಿಯು ದೇಹವ್ಯಾಪಾರವನ್ನು ತ್ಯಜಿಸಿ ಮೋಕ್ಷವನ್ನು ಹೊಂದುವ ಕ್ರಮದಲ್ಲಿ ರಾಕ್ಷಸರ ತತ್ವದಲ್ಲಿ ನಮ್ಮಲ್ಲಿರುವ ಅಜ್ಞಾನದ ಶಕ್ತಿಗಳನ್ನೆಲ್ಲಾ ಧ್ವಂಸಮಾಡುವವಳು.

**೬೦೦. ದಕ್ಷಯಜ್ಞವಿನಾಶಿನ್ಯೈನಮಃ—**

ದಕ್ಷಬ್ರಹ್ಮನ ಯಜ್ಞವನ್ನು ನಾಶಮಾಡಿದವಳು. ಮೇಲಿನ ಎರಡು ನಾಮಗಳಲ್ಲಿ ತಿಳಿಸಿರುವಂತೆ ದಕ್ಷನ ಯಜ್ಞವೆಂದರೆ ಪ್ರಪಂಚಾಕಾರವಾಗಿ ವೃದ್ಧಿಹೊಂದುವ ಕಾರ್ಯವು. ಲಯಕ್ರಮವನ್ನು ಅನುಸರಿಸಿದರೆ ಪ್ರಪಂಚನಾಶವಾಗುವುದು. ಇದರಂತೆ ಪ್ರಪಂಚಾಕಾರವಾಗಿ ವೃದ್ಧಿಹೊಂದುವುದೆಂದರೆ ದೇಹದ ವ್ಯಾಪಾರವು ನಾಶವಾಗಿ ಮೋಕ್ಷವನ್ನು ಪಡೆಯುವ ತತ್ವವೇ ದಕ್ಷನ ಯಜ್ಞದ ನಾಶವಾಗಿರುವುದು. ಅಂದರೆ ಕುಂಡಲಿನೀಶಕ್ತಿಯು ಮೂಲಾಧಾರಚಕ್ರದಿಂದೆದ್ದು ಸಹಸ್ರಾರಕಮಲವನ್ನು ಸೇರುವ ತತ್ವವಾಗಿರುವುದು.

**೬೦೧. ದರಾನ್ದೋಳಿತದೀರ್ಘಾಕ್ಷ್ಯೈನಮಃ—**

ಭಯವನ್ನು ಹೋಗಲಾಡಿಸುವಂತಹ ನಿಧಾನವಾಗಿ ಚಲಿಸುವ ದೊಡ್ಡದಾದ

ಕಣ್ಣುಗಳುಳ್ಳವಳು. ಈ ನಾಮದಿಂದ ೬೫ ನೇ ನಾಮದವರೆಗೂ ದಾಕ್ಷಾಯಣಿ ಯಾದ ಶ್ರೀ ಕುಂಡಲಿನಿಯ ಮಹಿಮಾವರ್ಣನೆಯಾಗಿರುವುದು.

**೬೦೨. ದರಹಾಸೋಜ್ಜ್ವಲನ್ಮುಖ್ಯೈನಮಃ—**

ಮುಗುಳುನಗುಮುಖದಿಂದ ಹೊಳೆಯುತ್ತಿರುವ ಮುಖವುಳ್ಳವಳು.

**೬೦೩. ಗುರುಮೂರ್ತ್ಯೈನಮಃ—**

ಗುರುಸ್ವರೂಪದಿಂದ ಅಜ್ಞಾನವನ್ನು ಹೋಗಲಾಡಿಸುವವಳು. ಬಾಹ್ಯ ದಲ್ಲಿರುವ ಗುರುವು ಆತ್ಮವಿಚಾರಬೋಧೆ ಮಾಡಬಲ್ಲನೇ ಹೊರತು ನಮ್ಮಲ್ಲಿರುವ ಅಜ್ಞಾನವನ್ನೇ ನಾಶಮಾಡಲಾರನು. ನಮ್ಮ ಅಜ್ಞಾನವನ್ನು ನಾಶಮಾಡಲು ನಮ್ಮಲ್ಲಿಯೇ ಇರುವ ಶ್ರೀ ಕುಂಡಲಿನಿಯೇ ನಮ್ಮ ನಿಶ್ಚಯವಾದ ಗುರುವು. ಕುಂಡಲಿನಿಯು ಮೋಕ್ಷದ ಬಾಗಿಲಾದ ಸುಷುಮ್ನಾನಾಡಿಯ ಬಾಗಿಲನ್ನು ತೆಗೆಸಿ ಕೊಂಡು ಸಹಸ್ರಾರಕ್ಕೆ ಸೇರಿ ಮೋಕ್ಷಸಾಮ್ರಾಜ್ಯ ಸುಖವನ್ನು ಜೀವಂತನಾಗಿ ದ್ದಾಗಲೇ ಅನುಗ್ರಹಿಸುವವಳು. ಶ್ರೀ ಕುಂಡಲಿನಿಯಲ್ಲಿ ಈ ಮಹಿಮೆಯು ಇರುವುದರಿಂದಲೇ "ಕುಂಡಲಿನೀ ಜ್ಞಾನಿಶಕ್ತಿ ರ್ಗೃಹಮ್" ಎಂಬದಾಗಿ ಶ್ರುತಿ ಯಲ್ಲಿ ಹೇಳಿದೆ. ಆದುದರಿಂದ ಕುಂಡಲಿನಿ (ದಾಕ್ಷಾಯಣಿ) ಯೇ ಗುರುಸ್ವರೂಪ ದಲ್ಲಿರುವಳು.

**೬೦೪. ಗುಣನಿಧಯೇನಮಃ—**

ಮೋಕ್ಷಸಾಮ್ರಾಜ್ಯವನ್ನು ಹೊಂದುವ ಸಕಲ ಕಲ್ಯಾಣ ಗುಣಗಳಿಗೂ ಕುಂಡಲಿನಿಯ ಸ್ವರೂಪದಲ್ಲಿರುವ ಶ್ರೀದೇವಿಯು ಗಣಿಯಂತಿರುವಳು.

**೬೦೫. ಗೋಮಾತ್ರೇನಮಃ—**

ಗೋ ಎಂದರೆ ಪ್ರಪಂಚ, ದೇಹ, ನಾದ, ನೀರು ಮುಂತಾದ ಅರ್ಥ ಗಳಾಗುವುವು. ಆದುದರಿಂದಲೇ ಕುಂಡಲಿನಿಯು ನಮ್ಮ ದೇಹಕ್ಕೂ ನಾದಕ್ಕೂ ಅಮೃತಕ್ಕೂ ಪ್ರಪಂಚಕ್ಕೂ ಮಾತೆಯಾಗಿರುವಳು.

**೬೦೬. ಗುಹಜನ್ಮಭುವೇನಮಃ—**

ಶ್ರೀದೇವಿಯ ಪುತ್ರನಾದ ಷಣ್ಮುಖಸ್ವಾಮಿಗೆ ಗುಹನೆಂದು ಹೆಸರು. ರಾಕ್ಷಸರನ್ನು ನಿಗ್ರಹಿಸಿ ದೇವತೆಗಳನ್ನು ಕಾಪಾಡಲು ಷಣ್ಮುಖಸ್ವಾಮಿಯು ಶ್ರೀದೇವಿಯಲ್ಲಿ ಅವತರಿಸಿದನು. ನಮ್ಮಲ್ಲಿರುವ ರಾಕ್ಷಸರ ಸ್ವರೂಪವಾದ ಅಜ್ಞಾನವನ್ನು ನಿಗ್ರಹಿಸಲು ಶ್ರೀ ಷಣ್ಮುಖಸ್ವಾಮಿಯ ಸಹಾಯದ ತತ್ವವನ್ನು

ನಾವು ಹೊಂದಬೇಕು. ಜ್ಞಾನೇಂದ್ರಿಯುಗಳಿಂದ ಬಾಹ್ಯ ವಿಷಯಗಳಿಗೆ ಎಳೆಯ ದಂತೆ ಜ್ಞಾನೇಂದ್ರಿಯಗಳನ್ನು ಮುಚ್ಚಿಕ್ಕೊಳ್ಳುವ ಷಣ್ಮುಖೀ ಮುದ್ರೆಯನ್ನು ಹಾಕಿ ಕೊಂಡು ಸಮಾಧಿಯನ್ನು ಅಭ್ಯಾಸಮಾಡಬೇಕು. ಈ ಷಣ್ಮುಖೀ ಮುದ್ರೆಯ ಅಭ್ಯಾಸಕ್ಕೆ ಬರಲು ಕುಂಡಲಿನೀಶಕ್ತಿಯು ಮೂಲಾಧಾರದಿಂದೆದ್ದು ಸ್ವಾಧಿಷ್ಠಾನ ಮಣಿಪೂರಚಕ್ರಗಳನ್ನು ದಾಟಿ ಅನಾಹತಚಕ್ರಕ್ಕೆ ಬಂದಾಗ ಷಣ್ಮುಖೀಮುದ್ರೆಯ ಅಭ್ಯಾಸಕ್ಕೆ ಅಧಿಕಾರವುಂಟಾಗುವುದು.

**೬೦೭. ದೇವೇಶ್ಯೈನಮಃ—**

ದೇವತೆಗಳಿಗೆಲ್ಲಾ ಒಡೆಯುಳು. ಮೇಲಿನ ನಾಮದಲ್ಲಿ ಹೇಳಿರುವಂತೆ ಷಣ್ಮುಖೀ ಮುದ್ರೆಯಿಂದ ಅನುಷ್ಠಾನ ಮಾಡುತ್ತಿದ್ದ ಸಮಾಧಿಯು ಪರಿಪಕ್ವಾ ವಸ್ಥೆಗೆ ಬಂದಾಗ ಅಂದರೆ ಶ್ರೀ ಕುಂಡಲಿನಿಯು ಆಜ್ಞಾಚಕ್ರಕ್ಕೆ ಬಂದಾಗ ನಾವು ದೇವತೆಗಳ ಸಮಾನರಾಗುತ್ತೇವೆ. ಇಂತಹ ದೇವತ್ವಗಳಿಗೆಲ್ಲಾ ಶ್ರೀಕುಂಡಲಿನೀ ದೇವಿಯು ನಾಥಳು. ಇದೇ ಶುದ್ಧ ಸತ್ವಗುಣದ ಸೋಪಾನವಾಗಿದೆ.

**೬೦೮. ದಣ್ಡನೀತಿಸ್ಥಾಯೈನಮಃ—**

ನಿಗ್ರಹದ (ದಂಡ-ನಿಗ್ರಹ) ಮಾರ್ಗದಲ್ಲಿ ನೆಲೆಸಿರುವವಳು. ಮೇಲಿನ ನಾಮದಲ್ಲಿ ತಿಳಿಸಿದಂತೆ ನಾವು ದೇವತೆಗಳ ಸಮಾನವಾಗಲು ನಮ್ಮಲ್ಲಿರುವ ಅಜ್ಞಾನದ ಶಕ್ತಿಗಳನ್ನು ಸಾಮ, ಭೇದ, ದಾನಗಳಾದ ಈ ಮೂರು ಮಾರ್ಗ ಗಳಿಂದ ಖಂಡಿತವಾಗಿಯೂ ಹೋಗಲಾಡಿಸಲಾರೆವು. ದಂಡ ಎಂದರೆ ನಿಗ್ರಹ ದಿಂದಲೇ ಅಜ್ಞಾನಶಕ್ತಿಗಳು ನಾಶವಾಗಬೇಕಲ್ಲದೆ ಬೇರೆ ದಾರಿಯೇ ಇಲ್ಲವೆಂಬು ದನ್ನು ಸೂಚಿಸುವುದಕ್ಕೋಸ್ಕರವೇ ಶ್ರೀ ಕುಂಡಲಿನೀದೇವಿಯು ನಿಗ್ರಹಮಾರ್ಗದಲ್ಲಿ ನೆಲೆಸಿರುವವಳು. ನಿಗ್ರಹದ ಮಾರ್ಗವೇ ನಮ್ಮ ಅಂತರ್ಮುಖದ ಮಾರ್ಗದಲ್ಲಿ ಹೋಗುವ ಜ್ಞಾನದೊಡಗೂಡಿದ ಧ್ಯಾನಾಭ್ಯಾಸವಾಗಿದೆ.

**೬೦೯. ದಹರಾಕಾಶರೂಪಿಣ್ಯೈನಮಃ—**

ದಹರಾಕಾಶಸ್ವರೂಪಿಣಿಯು. ದಹರಾಕಾಶವೆಂದರೆ ಆಕಾಶಾಂತರ್ಗತವಾಗಿ ವ್ಯಾಪಿಸಿರುವ ನಾದ, ಬಿಂದುಗಳಿಗೂ ಅತೀತವಾಗಿರುವ ಆನಂದಮಯವಾಗಿರುವ ಶುದ್ಧಸತ್ವಗುಣವೆನಿಸುವ ಕಳಾಸ್ವರೂಪವು. ಈ ದಹರಾಕಾಶಸ್ವರೂಪವು ಸರ್ವತ್ರ ವ್ಯಾಪಿಸಿದ್ದರೂ ನಮ್ಮ ಬುದ್ಧಿವೃತ್ತಿಯು ಮೂಲಾಧಾರಾದಿ ಷಟ್ಚಕ್ರಗಳನ್ನು ಭೇದಿಸಿಕೊಂಡು ನಮ್ಮ ಶಿರಸ್ಸಿಗೆ ಬರುವವರೆಗೆ ದಹರಾಕಾಶದ ಸೋಪಾನವು ದೊರೆಯುವುದಿಲ್ಲ. ಆದುದರಿಂದ ನಮ್ಮಲ್ಲಿರುವ ಅಜ್ಞಾನದ ಶಕ್ತಿಗಳನ್ನು ನಿಗ್ರಹಿಸಿದ ಅನಂತರ ಅಂದರೆ ಶ್ರೀಕುಂಡಲಿನೀ ಶಕ್ತಿಯು ಆಜ್ಞಾಚಕ್ರಕ್ಕೆ ಬಂದಾಗ

ನಮ್ಮ ಶಿರಸ್ಸಿನಲ್ಲಿರುವ ದಹರಾಕಾಶವಾದ ಕಳಾಸೋಪಾನವನ್ನು ಅಧಿಕಾರಿಯು ಹೊಂದುವನು. ಈ ಸೋಪಾನವೇ ರಜಸ್ತಮೋಗುಣಗಳನ್ನು ನಿಗ್ರಹಿಸಿದ ಅನಂತರ ಹೊಂದುವ ಶುದ್ಧಸತ್ವಗುಣ ಅಥವಾ ಕಳಾಸೋಪಾನವಾಗಿದೆ. ಮೇಲಿನ ತತ್ವಕ್ಕೆ "ಅಥಯ ಇದಸ್ಮಿನ್ ಬ್ರಹ್ಮಪುರೇದಹರಂ ಪುಂಡರೀಕಂ ವೇಶ್ಮದಹರೋಸ್ಮಿ ನನ್ತರಾSSಕಾಶಸ್ತಸ್ಮಿನ್ಯದಂತಃ" ಎಂಬ ಶ್ರುತಿವಾಕ್ಯವೂ ಇರುವುದು. ಇದೇ ದಹರಾಕಾಶಸ್ವರೂಪಿಣಿಯು.

**೭೧೦. ಪ್ರತಿಪನ್ಮುಖ್ಯ ರಾಕಾಂತತಿಥಿ ಮಂಡಲಪೂಜಿತಾಯೈನಮಃ—**

ಶುದ್ಧಪಾಡ್ಯದಾರಭ್ಯ ಪೌರ್ಣಿಮಾದವರೆಗಿರುವ ಹದಿನೈದು ತಿಥಿಗಳ ಕ್ರಮ ದಿಂದ ಅರ್ಚಿಸಲ್ಪಡುವವಳು. ಶುದ್ಧಪಾಡ್ಯದಾರಭ್ಯ ಪೌರ್ಣಿಮಾದವರೆಗಿನ ಹದಿನೈದು ದಿನಗಳಲ್ಲಿ ಕಳೆಯು ದಿನದಿನಕ್ಕೆ ಅಭಿವೃದ್ಧಿಯಾಗಿ ಪೌರ್ಣಿಮಾದಿನಕ್ಕೆ ಪೂರ್ಣಕಳಾಸ್ವರೂಪನಾದ ಚಂದ್ರನು ನಮಗೆ ಗೋಚರವಾಗುತ್ತಾನಷ್ಟೆ? ಹೀಗೆ ಪಾಡ್ಯದಾರಭ್ಯ ಪೌರ್ಣಿಮಾದವರೆಗಿನ ಕಳಾಭಿವೃದ್ಧಿಯನ್ನು ಹೊಂದುವ ವಿಧಾನ ದಿಂದ ಪೂಜಿಸಲ್ಪಡುವವಳು. ಅಂದರೆ ಹಿಂದಿನ ನಾಮದಲ್ಲಿ ತಿಳಿಸಿರುವ ಶ್ರೀಕುಂಡಲಿನೀಶಕ್ತಿಯು ಆಜ್ಞಾಚಕ್ರದಲ್ಲಿ ನೆಲಸಿದಾಗ ಆಕಾಶಾಂತರ್ಗತವಾದ ಕಳಾಸ್ವರೂಪವೆಂದು ತಿಳಿಸಿತಷ್ಟೆ! ಇದೇ ಪೌರ್ಣಿಮಾಚಂದ್ರನ ಸ್ವರೂಪವಾದ ಪೂರ್ಣಕಳೆಯಾಗಿರುವುದು. ಈ ಪೂರ್ಣಕಳಾಸ್ಥಿತಿಯನ್ನು ಪಡೆಯಲು ಶುದ್ಧ ಪಾಡ್ಯದಾರಭ್ಯ ಪೌರ್ಣಿಮಾದವರೆಗಿರುವ ಹದಿನೈದು ದಿನಗಳ ತತ್ವಗಳನ್ನು ನಾವು ಮೋಕ್ಷಮಾರ್ಗದಲ್ಲಿ ಹೊಂದಬೇಕು. ತೈತ್ತರೀಯ ಬ್ರಾಹ್ಮಣಶ್ರುತಿಯಲ್ಲಿ ಹೇಳಿ ರುವ ಈ ಹದಿನೈದು ದಿನಗಳ ಹೆಸರುಗಳನ್ನೂ, ಪೂರ್ಣಕಳಾಸೋಪಾನವಾದ ಜೀವ ನ್ಮುಕ್ತ ಸ್ಥಿತಿಯನ್ನು ಹೊಂದುವ ಮೋಕ್ಷಮಾರ್ಗದ ಸೋಪಾನಗಳಿಗೆ ಅನ್ವಯಿಸಿ ತತ್ವಗಳನ್ನು ವಿವರಿಸಬಹುದು. ಈ ಅನ್ವಯವೇ ಒಂದು ಗ್ರಂಥವಾಗುವುದರಿಂದ ವಿವರಿಸಲಿಲ್ಲ. ಮುಖ್ಯವಾಗಿ ಶುಕ್ಲಪಕ್ಷದ ಕಳಾಭಿವೃದ್ಧಿಯ ತತ್ವವು ಜೀವನ್ಮುಕ್ತ ಸ್ಥಿತಿಯನ್ನು ಹೊಂದುವ ಮೋಕ್ಷಮಾರ್ಗದ ಸೋಪಾನಗಳ ತತ್ವವಾಗಿರುವುದು. ಕೃಷ್ಣಪಕ್ಷದ ಪಾಡ್ಯದಾರಭ್ಯ ಅಮಾವಾಸ್ಯೆಯವರೆಗೆ ಸೃಷ್ಟಿಯು ಲಯವಾಗುವ ಮಾರ್ಗದ ತತ್ವವೆಂದರೆ ಪೌರ್ಣಿಮಾತತ್ವದಲ್ಲಿದ್ದ ಜೀವನ್ಮುಕ್ತನು ವಿದೇಹಕೈವಲ್ಯ ವನ್ನು ಪಡೆಯುವ ತತ್ವಕ್ಕೆಸೇರಿದ್ದಾಗಿದೆ.

**೭೧೧. ಕಲಾತ್ಮಿಕಾಯೈನಮಃ—**

ಕಳಾರೂಪವಾಗಿರುವವಳು. ಹಿಂದಿನ ನಾಮಗಳೆರಡರಲ್ಲೂ ತಿಳಿಸಿರುವಂತೆ ಆಜ್ಞಾಚಕ್ರಕ್ಕೆ ಬಂದಿರುವ ಶ್ರೀಕುಂಡಲಿನೀ ಶಕ್ತಿಯು ಕಳಾರೂಪವೇ ಅಂದರೆ ಶಕ್ತಿಯೇ ಆಗಿರುವಳು. ದೇಹ ನಾನೆಂಬ ಜ್ಞಾನವಲ್ಲದ "ನಾನು" ಎಂಬ ಶುದ್ಧ

ಜ್ಞಾನವು ನಮ್ಮಲ್ಲಿರುವದಷ್ಟೆ? ಈ "ನಾನು" ಎಂಬ ಶುದ್ಧಜ್ಞಾನವು ನಮ್ಮ ಶಿರಸ್ಸಿನಲ್ಲಿರುವ ದಹರಾಕಾಶದಲ್ಲಿ ಆನಂದಮಯಸ್ವರೂಪವಾಗಿ ಆಕಾಶಾಂತರ್ಗತ ವಾಗಿರುವ ಕಳಾಸ್ವರೂಪದಲ್ಲಿ ಲಯವಾಗಿ ಅಖಂಡಾಕಾರವಾಗುತ್ತಾ "ನಾನು" ಎಂಬ ಜ್ಞಾನವೂ ಮರೆತು ಕಳಾರೂಪಾತ್ಮಕವಾಗುವುದು. ಇದೇ ಕಳಾತ್ಮಿಕಾ ಎನ್ನುವುದರ ತತ್ವವಾಗಿದೆ.

**೬೧೨. ಕಲಾನಾಥಾಯೈನಮಃ—**

ಕಳೆಗೂ ಒಡೆಯಳು. ಕಳೆಗೂ ಅತೀತವಾಗಿ ಕಳೆಗೆ ಧೊರೆಯಾಗಿರುವುದು ಪರಬ್ರಹ್ಮವೇ ಹೊರತು ಮತ್ತಾವುದೂ ಅಲ್ಲವಾದ್ದರಿಂದ ಶ್ರೀಕುಂಡಲಿನೀದೇವಿಯು ಪರಬ್ರಹ್ಮಸ್ವರೂಪಿಣಿಯಾಗಿರುವಳು. ಸಮಾಧಿಯನ್ನು ಅಭ್ಯಾಸಮಾಡುತ್ತಿದ್ದ ಅಧಿಕಾರಿಯು "ನಾನು" ಎಂಬ ಶುದ್ಧ ಜ್ಞಾನವನ್ನು ಅಖಂಡಾಕಾರವಾದ ಕಳಾ ಸ್ವರೂಪಕ್ಕೆ ತಂದುಕೊಂಡು ಅನಂತರ ಕಳಾರೂಪಕ್ಕೂ ಅತೀತವಾದ ಪರಬ್ರಹ್ಮ ಸಾಕ್ಷಾತ್ಕಾರವನ್ನು ಹೊಂದುವಿಕೆಯೇ ಕಳಾನಾಥಾ ಎಂಬುದರ ತತ್ವ. ಅಂದರೆ ಧ್ಯಾನಮಾಡುತ್ತಿದ್ದ ಅಧಿಕಾರಿಯ "ನಾನು" ಎಂಬ ಶುದ್ಧಜ್ಞಾನವು ಪರಬ್ರಹ್ಮ ಸ್ವರೂಪಿಣಿಯಾದ ಶ್ರೀದೇವಿಯ ಸ್ವರೂಪವಾಗುವುದು.

ಇಲ್ಲಿಂದ ೬೨೪ನೇ ನಾಮದವರೆಗೆ ಅಧಿಕಾರಿಯು ಸಾಕ್ಷಾತ್ಕರಿಸಿಕೊಂಡು ಇರುವ ಕಳೆಗೂ ನಾಥಳಾದ ಪರಬ್ರಹ್ಮಸ್ವರೂಪಿಣಿಯ ಮಹಿಮೆಯನ್ನು ತಿಳಿಸುವುದು.

**೬೧೩. ಕಾವ್ಯಾಲಾಪವಿನೋದಿನ್ಯೈನಮಃ—**

ಕಾವ್ಯಗಳ ಪಠನ ಶ್ರವಣಗಳ ವಿನೋದದಿಂದ ಇರುವವಳು. ಕವಿತಾ ತತ್ವಕ್ಕೆ ಮೂಲಕಾರಣವಾಗಿ "ಕವಿಂ ಪುರಾಣಂ" ಎಂಬ ಶ್ರುತ್ಯಾಧಾರದಂತೆ ಪರಬ್ರಹ್ಮವೇ ಕವಿಯ ಶಬ್ದದಿಂದ ಹೇಳಲ್ಪಡುವುದು. ಇಂತಹ ಪರಬ್ರಹ್ಮ ಸ್ವರೂಪಿಣಿಯಾದ ಶ್ರೀದೇವಿಯೇ ಪ್ರಪಂಚದ ಸೃಷ್ಟಿ, ಸ್ಥಿತಿ, ಲಯಗಳೆಂಬ ಕಾರ್ಯಗಳ ಕಾವ್ಯದ ರಚನೆಯ ವಿನೋದಸ್ವರೂಪವಾಗಿರುವಳು. ಇದರ ತತ್ವಾರ್ಥವೇನೆಂದರೆ ಪರಬ್ರಹ್ಮಸ್ವರೂಪಿಣಿಯಾದ ಶ್ರೀದೇವಿಯನ್ನು ಸಾಕ್ಷಾತ್ಕರಿಸಿ ಕೊಂಡು ಬಹಿರ್ಮುಖನಾಗಿರುವ ಜೀವನ್ಮುಕ್ತನು ಕವಿಯ ತತ್ವವಾದ ಪರಬ್ರಹ್ಮ ವಸ್ತುವಿನ ಲೀಲಾವಿಭೂತಿಯ ಆಲೋಡನೆಯಲ್ಲಿಯೇ ಮಗ್ನನಾಗಿ ಆನಂದ ವಾಗಿರುವನು. ಶ್ರೀದೇವಿಯು ಇಂತಹ ಸ್ವರೂಪಿಣಿಯು.

**೬೧೪. ಸಚಾಮರ ರಮಾವಾಣೀ ಸವ್ಯದಕ್ಷಿಣಸೇವಿತಾಯೈನಮಃ—**

ಪರಬ್ರಹ್ಮಸ್ವರೂಪಿಣಿಯಾದ ಶ್ರೀದೇವಿಯು ಶ್ರೀ ಲಕ್ಷ್ಮೀ ಶ್ರೀ ಸರಸ್ವತೀ

ಯರುಗಳಿಂದ ಚಾಮರಗಳನ್ನು ಬೀಸುವ ಸೇವೆ ಮಾಡಿಸಿಕೊಳ್ಳುತ್ತಿರುವಳು. ಅಂದರೆ ಸಗುಣದಲ್ಲಿರುವ ಶ್ರೀ ಲಕ್ಷ್ಮೀ ಶ್ರೀ ಸರಸ್ವತಿಯರಿಗಿಂತ ನಿರ್ಗುಣಳಾದ ಪರಬ್ರಹ್ಮಸ್ವರೂಪಿಣಿಯು ಶ್ರೇಷ್ಠವೆಂಬ ತಾತ್ಪರ್ಯವಾಗಿದೆ.

**೬೧೫. ಆದಿಶಕ್ತ್ಯೈನಮಃ—**

ಪರಬ್ರಹ್ಮಸ್ವರೂಪಿಣಿಯಾದ ಶ್ರೀದೇವಿಯಿಂದಲೇ ಎಲ್ಲಾ ಸಗುಣಶಕ್ತಿಗಳೂ ಉದಯಿಸುವುದರಿಂದ ಶ್ರೀದೇವಿಯು ಆದಿಶಕ್ತಿಯಾಗಿರುತ್ತಾಳೆ.

**೬೧೬. ಅಮೇಯಾಯೈನಮಃ—**

ಪರಬ್ರಹ್ಮಸ್ವರೂಪವು ಅಳತೆಗೆ ಒಳಪಡದೆ ಸರ್ವತ್ರ ಸರ್ವದಾ ಪೂರ್ಣವಾಗಿ ಇರುವುದರಿಂದ ಪರಬ್ರಹ್ಮಸ್ವರೂಪಿಣಿಯಾದ ಶ್ರೀದೇವಿಯು ಅಮೇಯೆ ಎನಿಸಿ ಕೊಂಡಿರುವಳು.

**೬೧೭. ಆತ್ಮನೇನಮಃ—**

ಜೀವಾತ್ಮನ ಸ್ವರೂಪಳು. ಪರಬ್ರಹ್ಮಸ್ವರೂಪಿಣಿಯಾದ ಶ್ರೀದೇವಿಯೇ ಜೀವಾತ್ಮನಾಗಿರುವಳು. ಪರಬ್ರಹ್ಮವು ಸ್ವಯಂಪ್ರಕಾಶಸ್ವರೂಪವು. ಜೀವನು ಪ್ರತಿಫಲಿತ ಚೈತನ್ಯನು. ಸ್ವಯಂಪ್ರಕಾಶದ ಚೈತನ್ಯಕ್ಕೂ ಪ್ರತಿಫಲಿತ ಚೈತ ನ್ಯಕ್ಕೂ ಚೈತನ್ಯತ್ವೇನ ಭೇದವಿಲ್ಲ.

**೬೧೮. ಪರಮಾಯೈನಮಃ—**

ಪರಬ್ರಹ್ಮಕ್ಕಿಂತ ಮತ್ತೊಂದು ಶ್ರೇಷ್ಠವಾದ ಮತ್ತು ಹೆಚ್ಚಿನ ವಸ್ತುವು ಇಲ್ಲವಾದುದರಿಂದ ಪರಬ್ರಹ್ಮಸ್ವರೂಪಿಣಿಯಾದ ಶ್ರೀದೇವಿಯು ಪರಮಾ ಆಗಿರು ತ್ತಾಳೆ. ಪರಾ+ಮಾ ಯಸ್ಯಾಃ ಸಾಪರಮಾ ಅಂದರೆ ಪರಮೋತ್ಕೃಷ್ಟ ಸಂಪತ್ತಿ ನಿಂದ ಕೂಡಿದವಳು.

**೬೧೯. ಪಾವನಾಕೃತಯೇನಮಃ—**

ಬಹು ಪವಿತ್ರವಾದ ರೂಪವುಳ್ಳವಳು. ಅಂದರೆ ಪರಬ್ರಹ್ಮಸ್ವರೂಪಿಣಿ ಯಾದ ಶ್ರೀದೇವಿಯು ಸತ್ವರಜಸ್ತಮೋಗುಣಗಳಿಲ್ಲದ ನಿರ್ಗುಣನಿರಾಕಾರ ಳಾಗಿಯೂ ಸತ್ಯಜ್ಞಾನಾನಂದಸ್ವರೂಪಳಾಗಿಯೂ ಇರುವುದರಿಂದ ಪಾವನವಾದ ರೂಪವುಳ್ಳವಳು.

**೬೨೦. ಅನೇಕಕೋಟಿ ಬ್ರಹ್ಮಾಂಡಜನನ್ಯೈನಮಃ—**

ಅನೇಕ ಕೋಟಿ ಬ್ರಹ್ಮಾಂಡಗಳನ್ನು ಪರಬ್ರಹ್ಮಸ್ವರೂಪಿಣಿಯಾದ ಶ್ರೀದೇವಿಯು ಸೃಷ್ಟಿಸಿರುವಳು. ವಿರಾಟ್ಪುರುಷನ ಒಂದೊಂದು ರೋಮಕೂಪದಲ್ಲಿಯೂ ಒಂದೊಂದು ಬ್ರಹ್ಮಾಂಡವಿದೆ.

**೬೨೧. ದಿವ್ಯವಿಗ್ರಹಾಯೈನಮಃ—**

ಸರ್ವವ್ಯಾಪಕ ಮತ್ತು ಸ್ವಯಂಪ್ರಕಾಶಸ್ವರೂಪಳು.

**೬೨೨. ಕ್ಲೀಂಕಾರ್ಯೈನಮಃ—**

ಕ್ಲೀಂ ಬೀಜಾಕ್ಷರಸ್ವರೂಪಿಣಿಯು. ಕ್ಲೀಂ ಎಂಬುದು ಮನ್ಮಥಶಕ್ತಿಯನ್ನು ಪ್ರತಿಪಾದಿಸುವ ಬೀಜಾಕ್ಷರವು. ಪಂಚದಶಾಕ್ಷರೀ ಮಂತ್ರರಹಸ್ಯದಲ್ಲಿ ಹ್ರೀಂ ಬೀಜಾಕ್ಷರವು ಹ+ರ+ಈ+೦ ಎಂಬವುಗಳ ರೂಪವಾಗಿ ಹೇಗೆ ಪರಬ್ರಹ್ಮತತ್ವ ಪ್ರತಿಪಾದಕವಾಗಿದೆಯೋ ಅದರಂತೆಯೇ ಮನ್ಮಥಬೀಜಾಕ್ಷರವೂ ಕ+ಲ+ಈ+೦ ಎಂಬುವುಗಳ ರೂಪವಾಗಿ ಪರಬ್ರಹ್ಮವನ್ನೇ ಪ್ರತಿಪಾದಿಸುವುದು. ಇದರಂತೆ ಅ+ಏ+ಈ+೦ ಗಳು ಸೇರಿ ಐಂ ಎಂದಾಗಿ ಶ್ರೀ ಸರಸ್ವತೀ ಬೀಜಮಂತ್ರವಾಗಿ ಪರಬ್ರಹ್ಮವನ್ನೇ ಪ್ರತಿಪಾದಿಸುವುದು. ಮನ್ಮಥಶಕ್ತಿಯು ಕಾಮಬೀಜವಾಗಿ ಬ್ರಹ್ಮಾಂಡದ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣವಾಗಿರುವುದು. ಕಾಮಕ್ಕೆಲ್ಲಾ ಕಾಮ ಅಂದರೆ ಕಾರಣಕ್ಕೆಲ್ಲಾ ಕಾರಣವಾಗಿರುವುದೇ ಪರಬ್ರಹ್ಮವು. ಆದುದರಿಂದ "ಸೋಕಾಮಯತ ಬಹುಸ್ಯಾಂ ಪ್ರಜಾಯೆಯೇತಿ" ಎಂಬ ಶ್ರುತ್ಯಾಧಾರದಂತೆ ಸಂಕಲ್ಪಸ್ವರೂಪವಾದ ಪರಬ್ರಹ್ಮವೇ ವಿಷ್ಣುಸ್ವರೂಪವಾಗಿರುವ ಮನ್ಮಥವು. ಸೃಷ್ಟಿ, ಸ್ಥಿತಿ, ಲಯಗಳಲ್ಲೆಲ್ಲಾ ಪ್ರಥಮದಲ್ಲಿ ಈ ಸಂಕಲ್ಪ (ಕಾರಣ) ಕ್ಕೆ ಸ್ಪಂದನ ಉಂಟಾಗಿಯೇ ಮುಂದಿನಕಾರ್ಯಗಳು ನಡೆಯುವುದರಿಂದ ಕ್ಲೀಂಕಾರೀ ಎಂದರೆ ಪರಬ್ರಹ್ಮದ ಸೃಷ್ಟಿಸಂಕಲ್ಪಸ್ವರೂಪಿಣಿಯು.

**೬೨೩. ಕೇವಲಾಯೈನಮಃ—**

ಮತ್ತೊಂದಿಲ್ಲದೆ ತಾನೇತಾನಾಗಿರುವವಳು. ಅಂದರೆ ಅದ್ವಿತೀಯಸ್ವರೂಪಿಣಿಯು.

**೬೨೪. ಗುಹ್ಯಾಯೈನಮಃ—**

ಹೊಂದಲು ಸುಲಭಸಾಧ್ಯವಿಲ್ಲದೆ ಬಹು ಗೋಪ್ಯವಾಗಿರುವವಳು ಮತ್ತು ಇಂದ್ರಿಯಗಳಿಗೆ ಸಿಲುಕದವಳು.

ಸಮಾಧಿಯನ್ನು ಅಭ್ಯಾಸಮಾಡಿ ಅಧಿಕಾರಿಯು ಪಡೆದುಕೊಂಡಿರುವ ಪರಮಪದವಾದ ಶ್ರೀದೇವಿಯ ಮಹಿಮೆಗಳನ್ನೇ ೬೧೨ ರಿಂದ ಇಲ್ಲಿಯವರೆಗಿನ ನಾಮಗಳು ಪ್ರತಿಪಾದಿಸುತ್ತವೆ. ಅಲ್ಲದೆ ೫೯೧ ನೆಯ ನಾಮದಿಂದ ಇದುವರೆಗೂ ಬಂದಿರುವ ತತ್ವಗಳೂ ಚಂದ್ರವಿದ್ಯೆಯ ಮತ್ತು ಚಂದ್ರವಿದ್ಯೆಯಿಂದ ಹೊಂದ ಬಹುದಾದ ಶ್ರೀದೇವಿಯ ಸಾಕ್ಷಾತ್ಕಾರದ ಸ್ಥಿತಿಯ ವಿವರಣೆಗಳಾಗಿವೆ.

## ೬೨೫. ಕೈವಲ್ಯಪದದಾಯಿನ್ಯೈನಮಃ—

ದೇಹ ಮತ್ತು ಇಂದ್ರಿಯಗಳ ಸಂಬಂಧವೇ ಇಲ್ಲದ ಕೇವಲ ಪರಬ್ರಹ್ಮ ಮಾತ್ರವಾಗಿಯೇ ಇರುವ, ದೇಹ ಪತನಕಾಲದಲ್ಲಿ ಉಂಟಾಗುವ ಕೈವಲ್ಯವೆಂದರೆ ವಿದೇಹ ಮುಕ್ತಿಯನ್ನು ಅನುಗ್ರಹಿಸುವವಳು.

ಅಂದರೆ ೪೭೫ ರಿಂದ ೫೪೬ನೇ ನಾಮದವರೆಗೆ ಮೂಲಾಧಾರದಿಂದ ಸಹಸ್ರಾರ ಕಮಲದವರೆಗೂ ಇರುವ ಚಕ್ರಗಳ ಸ್ವರೂಪಗಳನ್ನೂ ಮತ್ತು ಮೋಕ್ಷಮಾರ್ಗಕ್ಕೆ ನಾವು ಬಾಹ್ಯದಲ್ಲಿ ಸಂಪಾದಿಸಬೇಕಾದ ಸಲಕರಣೆಗಳ ವಿಚಾರಗಳನ್ನೂ ತಿಳಿಸಿತು. ೫೯೧ ದಿಂದ ೬೨೪ ನೇ ನಾಮದವರೆಗೆ ಅನುಷ್ಠಾನಕ್ರಮದಲ್ಲಿ ಶ್ರೀಕುಂಡಲಿನೀ ಶಕ್ತಿಯು ಉತ್ಥಾಪನೆಯಾಗಿ ಸಮಾಧಿಯ ಅಭ್ಯಾಸದಿಂದ ಜೀವಂತನಾಗಿರುವಾಗಲೇ ಮೋಕ್ಷಸಾಮ್ರಾಜ್ಯವನ್ನು ಪಡೆಯುವ ಕ್ರಮವನ್ನೂ ಮತ್ತು ಸಾಕ್ಷಾತ್ಕಾರಮಾಡಿ ಕೊಂಡ ಆ ಪರಬ್ರಹ್ಮಸ್ವರೂಪಿಣಿಯಾದ ಶ್ರೀದೇವಿಯ ಮಹಿಮೆಯನ್ನೂ ತಿಳಿಸಿತು. ಹೀಗೆ ಪರಬ್ರಹ್ಮಸಾಕ್ಷಾತ್ಕಾರವಾಗಿ ಜೀವನ್ಮುಕ್ತನೆನಿಸಿಕೊಂಡು ಅನೇಕ ಸಂವತ್ಸರ ಗಳು ಬದುಕಿರಬಹುದು. ದೇಹಪತನಕಾಲ ಒದಗಿದಾಗ ಶ್ರೀಕುಂಡಲಿನೀ ದೇವಿಯ ಅನುಗ್ರಹದಿಂದ ಪ್ರತಿಫಲಿತ ಚೈತನ್ಯನಾದ ಜೀವನು ಪುನರ್ಜನ್ಮವಿಲ್ಲದ ಸರ್ವ ವ್ಯಾಪಕವಾದ ಹ್ರೀಂ ಬೀಜಾಕ್ಷರ ಪ್ರತಿಪಾದ್ಯವಾದ ಸತ್ಯಜ್ಞಾನಾನಂದ ಸ್ವರೂಪವೇ ನಿಲ್ಲುವ ಶ್ರೀದೇವಿಯ ಸಾಯುಜ್ಯಪದವಿಯನ್ನು ಹೊಂದುವನು. ಇದೇ ಕೈವಲ್ಯ ಪದದಾಯಿನಿ ಎಂಬ ಪದದ ಅರ್ಥವು.

## ೬೨೬. ತ್ರಿಪುರಾಯೈನಮಃ—

ಅನಾದಿ ಅಥವಾ ಬಹು ಹಿಂದಿನದಕ್ಕೆ ಪುರಾ ಎಂದು ಹೆಸರು. ತ್ರಿಮೂರ್ತಿ ಗಳಿಗೂ ಪುರಾತನವಾದ ಪರಬ್ರಹ್ಮಸ್ವರೂಪಿಣಿಯಾದುದರಿಂದ ಶ್ರೀದೇವಿಯು ತ್ರಿಪುರಾ ಎನಿಸುವಳು. ಪುರ ಎಂದರೆ ಪಟ್ಟಣ ಅಥವಾ ವಾಸಸ್ಥಳವೆಂದು ಅರ್ಥ ವಾಗುವುದರಿಂದ ಸ್ವರ್ಗ ಮರ್ತ್ಯ ಪಾತಾಳಗಳೆಂಬ ಮೂರು ಲೋಕಗಳಲ್ಲೂ, ಮೂರು ಅಗ್ನಿಗಳಲ್ಲೂ, ಓಂಕಾರದ ಮೂರು ಪಾದಗಳಲ್ಲೂ, ಬಿಂದು, ನಾದ,

ಕಳೆಗಳಲ್ಲಿಯೂ, ನೆಲಸಿರುವವಳಾದುದರಿಂದಲೂ ಮತ್ತು ಇವುಗಳಿಗಿಂತ ಪುರಾತನಳಾದುದರಿಂದಲೂ ಶ್ರೀದೇವಿಯು ತ್ರಿಪುರಾ ಎನಿಸಿಕೊಂಡಿರುತ್ತಾಳೆ.

**೬೨೭. ತ್ರಿಜಗದ್ವನ್ದ್ಯಾಯೈನಮಃ—**

ಸ್ವರ್ಗ, ಮರ್ತ್ಯ, ಪಾತಾಳಗಳೆಂಬ ಮೂರು ಲೋಕಗಳವರಿಂದಲೂ ನಮಸ್ಕರಿಸಲ್ಪಡುವವಳು.

**೬೨೮. ತ್ರಿಮೂರ್ತಯೇನಮಃ—**

ಪರಬ್ರಹ್ಮ ಸ್ವರೂಪಿಣಿಯಾದ ಶ್ರೀದೇವಿಯೆ ಸೃಷ್ಟಿ ಸ್ಥಿತಿಲಯಗಳ ಕಾರ್ಯಗಳಿಗೋಸ್ಕರ ಚತುರ್ಮುಖಬ್ರಹ್ಮ, ವಿಷ್ಣು, ರುದ್ರರ ಮತ್ತು ಸರಸ್ವತಿ, ಲಕ್ಷ್ಮಿ, ಪಾರ್ವತಿಯರ ಸ್ವರೂಪಳಾಗಿರುವಳು.

**೬೨೯. ತ್ರಿದಶೇಶ್ವರ್ಯೈನಮಃ—**

ತ್ರಿದಶ ಎಂದರೆ ಮೂರು ಅವಸ್ಥೆಗಳು. ಬಾಲ್ಯ, ಕೌಮಾರ, ಯವ್ವನಗಳೆಂಬ ಮೂರು ಅವಸ್ಥೆಗಳುಳ್ಳವರು ದೇವತೆಗಳು. ತ್ರಿದಶ ಎಂದರೆ ಮುವ್ವತ್ತೆಂದು ಅರ್ಥವಾಗಿ ದೇವತೆಗಳು ವೃದ್ಧಾಪ್ಯವೆಂಬುದಿಲ್ಲದೆ ಯಾವಾಗಲೂ ಮುವ್ವತ್ತು ವರುಷದ ಯವ್ವನವಂತರಾಗಿಯೇ ಇರುವರು. ಆದುದರಿಂದ ಇಂತಹ ದೇವತೆಗಳಿಗೆಲ್ಲಾ ಶ್ರೀದೇವಿಯು ನಾಥಳಾಗಿರುವಳು.

**೬೩೦. ತ್ರ್ಯಕ್ಷರ್ಯೈನಮಃ—**

ಓಂಕಾರದ ಅ, ಉ, ಮ, ಎಂಬ, ಐಂ, ಹ್ರೀಂ, ಶ್ರೀಂ ಎಂಬ, ಐಂ, ಕ್ಲೀಂ, ಸೌಃ ಎಂಬ ಬೀಜಾಕ್ಷರಗಳ ಸ್ವರೂಪಿಣಿಯು.

**೬೩೧. ದಿವ ಗಂಧಾಢ್ಯಾಯೈನಮಃ—**

ಆನಂದರೂಪವಾದ ದೇವತಾಲೋಕದ ಸುಗಂಧದ್ರವ್ಯಗಳ ಪರಿಮಳದಿಂದ ಕೂಡಿರುವವಳು.

**೬೩೨. ಸಿನ್ಧೂರತಿಲಕಾಂಚಿತಾಯೈನಮಃ—**

ಚಂದ್ರದ ತಿಲಕದಿಂದ ಅಲಂಕರಿಸಲ್ಪಟ್ಟವಳು.

**೬೩೩. ಉಮಾಯೈನಮಃ—**

"ಉಕಾರೋ ವಿಷ್ಣುರಾಸ್ಥಿತಃ" ಎಂಬ ಶ್ರುತ್ಯಾಧಾರದಂತೆ ಉ–ವಿಷ್ಣುವು,

ಮಾ-ಲಕ್ಷ್ಮಿಯು. ಆದುದರಿಂದ ಉಮಾ ಎಂದರೆ ವಿಷ್ಣು ಮತ್ತು ಲಕ್ಷ್ಮೀ ಸ್ವರೂಪವಾಗಿರುವವಳು. ಕೇಸರೀ ಬಣ್ಣದಂತೆ ಹೊಳೆಯುತ್ತ ಮಹಿಮಾತಿಶಯ ವುಳ್ಳವಳು. ಶ್ರೀದೇವಿಯು ಪರ್ವತರಾಜನ ಕುವರಿಯಾಗಿ ಅವತರಿಸಿ ಈಶ್ವರ ನೊಡನೆ ವಿವಾಹವಾಗುವದಕ್ಕಿಂತ ಮುಂಚಿತವಾಗಿ ಬಾಲ್ಯವಯಸ್ಸಿನಲ್ಲಿ ಈಶ್ವರನೇ ತನಗೆ ಪತಿಯಾಗಬೇಕೆಂದು ವನಕ್ಕೆ ಹೋಗಿ ತಪಸ್ಸುಮಾಡಬೇಕೆಂದು ಇರುವಾಗ ಪರ್ವತರಾಜನ ಹೆಂಡತಿಯು ಉ-ಎಲೌ, ಮಾ-ಬೇಡ-ತಪಸ್ಸಿಗೆ ಹೋಗಬೇಡ ಎಂದು ಹಲವು ಬಾರಿ ಹೇಳಿದರೂ ಕೇಳದೇಹೋದವಳಾದ್ದರಿಂದ ಉಮಾ ಎಂದು ಕರೆಯಲ್ಪಟ್ಟವಳು.

ಉಮಾ ಶಬ್ದವು ಉ+ಮ್+ಅ, ಈ ಮೂರು ಅಕ್ಷರಗಳುಳ್ಳ ಪ್ರಣವ ಸ್ವರೂಪವಾಗುವುದರಿಂದ ಶ್ರೀದೇವಿಯು ಪ್ರಣವಸ್ವರೂಪಿಣಿಯು. ಹೇಗೆಂದರೆ ನಮ್ಮ ಉಸಿರು ಮೇಲಕ್ಕೆ ಹೋಗುವಾಗ ಉ ಎಂಬ ಶಬ್ದವಾಗುವುದು. ಉಸಿರು ಹೊರಕ್ಕೆ ಬರುವಾಗ ಮ್ ಎಂಬ ಶಬ್ದವಾಗುವುದು. ಅಕಾರವು ಸಾಕ್ಷಿಚೈತನ್ಯ ವಾಗಿದೆ. ಅಕಾರವು ಸಾಕ್ಷಿ ಚೈತನ್ಯವೆಂದು ಅನೇಕ ಶ್ರುತಿಪ್ರಮಾಣಗಳಿವೆ. ಉಮಾ ರೂಪವಾದ ಪ್ರಣವವು ದೇಹವ್ಯಾಪಾರಕ್ಕೆ ಸೇರಿದುದು. ಹಂಸಸ್ವರೂಪ ವಾದ ಅಜಪಾಕ್ಕೂ ಉಮಾ ರೂಪವಾದ ಪ್ರಣವಕ್ಕೂ ಭೇದವಿಲ್ಲ. ಮೋಕ್ಷ ಕ್ರಮದಲ್ಲಿ ಅಜಪಾಮಂತ್ರವಾದ ಹಂಸ ಎನ್ನುವುದು ಹೇಗೆ ಸೋಹಂ ಆಗುವುದೋ ಅದರಂತೆಯೇ ಉಮಾ (ಉ+ಮ್+ಅ) ಎನ್ನುವದು ಓಂಕಾರವಾಗುವುದು. ಅವಿವಾಹಿತಳಾದ ಉಮೆಯು ಈಶ್ವರನನ್ನು ಪಾಣಿಗ್ರಹಣಮಾಡಿ ಈಶ್ವರನೊಡ ಗೂಡಿದಾಗ ಓಂಕಾರಸ್ವರೂಪಿಣಿಯಾಗುವಳು. ಅಲ್ಲಿಯವರಿಗೆ ಉಮಾ ಎನಿಸಿ ಕ್ಕೊಂಡೇ ಇರುವಳು. ಹೇಗೆಂದರೆ ಹಂಸಃ ಹೋಗಿ ಸೋಹಂ ಎಂದು ಹೇಗೆ ಮಾರ್ಪಡುವುದೋ ಅದರಂತೆ ಉ+ಮ್ ಎಂಬ ಅಕ್ಷರಗಳು ಅಕಾರದ ಮುಂದಕ್ಕೆ ಬಂದು ನಿಂತು ಓಂ ಎಂದಾಗುವುದು. ಅಂದರೆ ಶ್ವಾಸೋಛ್ವಾಸವಾಡುವುದು ನಿಂತು ಧ್ಯಾನದಿಂದ ಓಂಕಾರಸ್ವರೂಪಕ್ಕೆ ಬಂದು ನಿಲ್ಲಬೇಕು. ಆದುದರಿಂದ ಉಮಾ ಎಂದರೆ ಪ್ರಣವಶಕ್ತಿಸ್ವರೂಪಿಣಿಯು.

**೬೩೪. ಶೈಲೇಂದ್ರತನಯಾಯೈನಮಃ—**

ಮೇಲಿನ ನಾಮದಲ್ಲಿ ತಿಳಿಸಿರುವ ಉಮೆಯು ಪರ್ವತರಾಜನ ಮಗಳು. ಈಶ್ವರನೊಡನೆ ಲಗ್ನವಾಗುವುದಕ್ಕಿಂತ ಮುಂಚೆ ಉಮೆ ಎನಿಸಿಕ್ಕೊಂಡಿರುವವಳು.

**೬೩೫. ಗೌರ್ಯೈನಮಃ—**

ಶ್ರೀದೇವಿಯು ವಿಷ್ಣುವಿನ ಸಹೋದರಿಯಾದ್ದರಿಂದ ಶ್ಯಾಮಲವರ್ಣ ದವಳಾಗಿದ್ದಳು. ಶ್ಯಾಮಲವರ್ಣವಾಗಿದ್ದುದಕ್ಕೆ ಈಶ್ವರನು ಹಾಸ್ಯಮಾಡಲು

ಶ್ರೀದೇವಿಯು ತಪಸ್ಸುಮಾಡಿ ಹಿಮವಂತನ ಪುತ್ರಿಯಾಗಿ ಅವತರಿಸಿ ಶಂಖ ಮಲ್ಲಿಗೆ ಮತ್ತು ಚಂದ್ರನಂತೆ ವರ್ಣವನ್ನು ಹೊಂದಿದ ದೇಹವುಳ್ಳವಳಾದ್ದರಿಂದ ಗೌರೀ ಎಂದು ಕರೆಯಲ್ಪಟ್ಟಳೆಂದು ದೇವೀಪುರಾಣದಲ್ಲಿ ಹೇಳಿದೆ. ಹತ್ತು ವರುಷದ ಕನ್ಯೆಯಾಗಿ ಈಶ್ವರನೇ ತನಗೆ ಪತಿಯಾಗಬೇಕೆಂದು ಆರಾಧಿಸುತ್ತಿದ್ದ ವಳಾದುದರಿಂದಲೂ ಗೌರೀ ಎಂದು ಕರೆಯಲ್ಪಟ್ಟಳು.

**೬೩೬. ಗಂಧರ್ವಸೇವಿತಾಯೈನಮಃ—**

ಗಾನವಿದ್ಯಾವಿಶಾರದರಾದ ಗಂಧರ್ವರಿಂದ ಸೇವಿಸಲ್ಪಡುವವಳು. ಓಂಕಾರ ನಾದಬ್ರಹ್ಮಸ್ವರೂಪಳು.

**೬೩೭. ವಿಶ್ವಗರ್ಭಾಯೈನಮಃ—**

ಗರ್ಭಧಾರಣೆಯಿಂದ ಬ್ರಹ್ಮಾಂಡವನ್ನು ಸೃಷ್ಟಿಸುವವಳು. ಅಂದರೆ ಓಂಕಾರ ನಾದದಿಂದ ಬ್ರಹ್ಮಾಂಡವು ಸೂಕ್ಷ್ಮರೂಪದಿಂದ ಸ್ಥೂಲರೂಪವಾಗುವವರೆಗೂ ಗರ್ಭರೂಪವಾಗಿದ್ದು ಹೊರ ಉದಯಿಸುವುದು.

**೬೩೮. ಸ್ವರ್ಣಗರ್ಭಾಯೈನಮಃ—**

ಬ್ರಹ್ಮಾಂಡವನ್ನು ಧರಿಸಿರುವ ಗರ್ಭವು ಸ್ವಯಂಪ್ರಕಾಶಸ್ವರೂಪವಾದುದು ಮತ್ತು ಸವಿತುಃ ರೂಪವಾದ ಪ್ರತಿಫಲನ ಪ್ರಕಾಶಸ್ವರೂಪವಾದುದು. ಜಲ ಮತ್ತು ಭೂಮಿಯು ಸೃಷ್ಟಿಯಾಗುವುದಕ್ಕಿಂತ ಮುಂಚಿತವಾಗಿ ತೇಜಸ್ತತ್ವದಲ್ಲಿ ಸಕಲ ಬ್ರಹ್ಮಾಂಡವೂ ಇರುತ್ತಾದುದರಿಂದ ಸ್ವರ್ಣಗರ್ಭವೆಂದೂ ಹಿರಣ್ಯಗರ್ಭ ವೆಂದೂ ಕರೆಯಲ್ಪಡುವುದು. ಅಂದರೆ ಶ್ರೀದೇವಿಯು ಈಶ್ವರ, ಹಿರಣ್ಯಗರ್ಭ, ವಿರಾಟ್ ತತ್ವಗಳಲ್ಲಿ ಹಿರಣ್ಯಗರ್ಭಸ್ವರೂಪಿಣಿಯು ಎಂಬುದು ಈ ನಾಮದ ತತ್ವ.

**೬೩೯. ಅವರದಾಯೈನಮಃ—**

ಅವರ ಎಂದರೆ ದುಷ್ಟರಾಕ್ಷಸರು. ದಾ-ಎಂದರೆ ಸೀಳತಕ್ಕವಳು ದುಷ್ಟ ರಾಕ್ಷಸರನ್ನು ನಿಗ್ರಹಿಸುವವಳು. ತ್ರಿಪುರಾಸುರ ಸಂಹಾರಿಣಿಯು.

**೬೪೦. ವಾಗಧೀಶ್ವರ್ಯೈನಮಃ—**

ಮನುಷ್ಯನು ಆದಿಯಾಗಿ ಸಕಲಪ್ರಾಣಿಗಳೂ ಅವರವರ ಸಂಜ್ಞಾನುಸಾರ ಮಾತನಾಡುವವು. ಇವುಗಳಿಗೆಲ್ಲಾ ನಾಥಳಾದ ಓಂಕಾರ ನಾದಬ್ರಹ್ಮಸ್ವರೂ ಪಿಣಿಯು. ವಾಗಧಿಷ್ಠಾನದೇವತೆಯು.

**೬೪೧. ಧ್ಯಾನಗಮ್ಯಾಯೈನಮಃ**—ಧ್ಯಾನದಿಂದ ಲಭ್ಯವಾಗುವವಳು.

**೬೪೨. ಅಪರಿಚ್ಛೇದ್ಯಾಯೈನಮಃ**—

ದೇಶ ಮತ್ತು ಕಾಲಗಳ ಅಳತೆಗೆ ಒಳಪಡದವಳು.

**೬೪೩. ಜ್ಞಾನದಾಯೈನಮಃ**—

ಜನನ ಮರಣ ಪ್ರವಾಹವನ್ನು ದಾಟಿಸುವ ಬ್ರಹ್ಮಜ್ಞಾನವನ್ನು ಅನುಗ್ರಹಿಸುವವಳು.

**೬೪೪. ಜ್ಞಾನವಿಗ್ರಹಾಯೈನಮಃ**—

ಜ್ಞಾನಸ್ವರೂಪವೆನಿಸುವ ಪರಬ್ರಹ್ಮಸ್ವರೂಪಿಣಿಯಾಗಿರುವವಳು. ಇಲ್ಲಿ ಜ್ಞಾನವೆಂದರೆ ಪ್ರಾಪಂಚಿಕಜ್ಞಾನವಲ್ಲ. ಶುದ್ಧಜ್ಞಾನವಾದ ಪರಬ್ರಹ್ಮಸ್ವರೂಪವು.

**೬೪೫. ಸರ್ವವೇದಾನ್ತಸಂವೇದ್ಯಾಯೈನಮಃ**—

ಜಗತ್ತು ಮಿಥ್ಯವೆಂತಲೂ ಬ್ರಹ್ಮ ಒಂದೇ ಸತ್ಯವೆಂತಲೂ ಇದನ್ನು ಹೊಂದಬೇಕೆನ್ನುವುದೇ ನಾಲಕ್ಕು ವೇದಗಳ ತಾತ್ಪರ್ಯವೆಂತಲೂ ಸಿದ್ಧಾಂತವಾಗಿದೆ. ವೇದಗಳ ಇಂತಹ ಸಿದ್ಧಾಂತವನ್ನು ಪ್ರತಿಪಾದಿಸುವುದಕ್ಕೆ ವೇದಾಂತವೆಂದು ಹೆಸರು. ಆದುದರಿಂದ ಸಕಲವೇದಗಳ ಸಿದ್ಧಾಂತರೂಪವಾದ ಪ್ರಜ್ಞಾನಂ ಬ್ರಹ್ಮ, ಅಹಂ ಬ್ರಹ್ಮಾಸ್ಮಿ, ತತ್ವಮಸಿ, ಅಯಮಾತ್ಮಾಬ್ರಹ್ಮ ಎಂಬ ಜ್ಞಾನದಿಂದಲೇ ಶ್ರೀದೇವಿಯು ತಿಳಿಯಲ್ಪಡತಕ್ಕವಳಾಗಿರುವವಳು.

**೬೪೬. ಸತ್ಯಾನನ್ದಸ್ವರೂಪಿಣ್ಯೈನಮಃ**—

ತ್ರಿಕಾಲದಲ್ಲೂ ಯಾವಬಾಧೆಯೂ ವ್ಯತ್ಯಾಸವೂ ಇಲ್ಲದೆ ಸತ್ಯಸ್ವರೂಪಳಾಗಿ ಆನಂದರೂಪವಾಗಿ ಇರುವವಳು.

**೬೪೭. ಲೋಪಾಮುದ್ರಾರ್ಚಿತಾಯೈನಮಃ**—

ಲೋಪಾಮುದ್ರೆಯಿಂದ ಪೂಜಿಸಲ್ಪಟ್ಟವಳು. ಲೋಪಾಮುದ್ರೆಯು ಅಗಸ್ತ್ಯ ಋಷಿಗಳ ಪತ್ನಿಯು ಮತ್ತು ಶ್ರೀದೇವಿಯ ಪರಮಭಕ್ತಳು. ಲೋಪಾಮುದ್ರೆಯು ವಿದರ್ಭರಾಜಕುಮಾರಿಯಾಗಿದ್ದರೂ ಸಕಲ ರಾಜಭೋಗಗಳನ್ನೂ ಅಲ್ಲಗಳೆದು ತನ್ನ ಪತಿಯಮೂಲಕ ಶ್ರೀವಿದ್ಯೋಪಾಸಕಳಾಗಿ ಶ್ರೀದೇವಿಯ ಪರಮಭಕ್ತಳಾದಳು. ಲೋಪಾಮುದ್ರೆಯಿಂದ ಅರ್ಚಿಸಲ್ಪಟ್ಟವಳೆಂದು ಹೇಳಿರುವುದರಿಂದ ಲೋಪಾಮುದ್ರೆಯ ವಿಚಾರವು ಅಮೋಘವಾದುದಾಗಿರಬೇಕು. ಅಗಸ್ತ್ಯ ಮತ್ತು

ಲೋಪಾಮುದ್ರೆಯರ ತತ್ವವು ಓಂಕಾರದ ಅಕಾರವು ಉಕಾರದಲ್ಲಿ ಸೇರಿ ಮಕಾರಕ್ಕೆ ಸಂಬಂಧವಿಲ್ಲದೆ ಓಕಾರವಾಗಿಯೇ ನಿಂತಿರುವ ಪ್ರಾಣಶಕ್ತಿಯ ತತ್ವದ್ದಾಗಿ ನಮ್ಮ ಪ್ರಾಣಮಯ ಕೋಶಕ್ಕೆ ಅನ್ವಯವಾಗುವುದು. ಈ ವಿಚಾರವು ರಾಮಾಯಣದ ಅಂತರಾರ್ಥ ಗ್ರಂಥದಲ್ಲಿದೆ. ಓಕಾರವು ಮಕಾರದೊಡನೆ ಸೇರಿ ಓಂಕಾರವಾಗ ಬೇಕಾದರೆ ನಮ್ಮ ಪ್ರಾಣಶಕ್ತಿಯು ಸಾಷ್ಟಾಂಗಪ್ರಣಾಮ ಸ್ವರೂಪದಿಂದ ಪರಮಾತ್ಮ ನಲ್ಲಿ ಸೇರುವುದರಿಂದ ಪ್ರಣವ (ಓಂಕಾರ)ವೆನಿಸುವುದು. ಈ ತತ್ವಕ್ಕೆ "ಪ್ರಾಣಾಸ್ ಸರ್ವಾ್ಃ ಪರಮಾತ್ಮನಿ ಪ್ರಣಾಮಯತಿ ಇತ್ಯೇತಸ್ಮಾತ್ ಪ್ರಣವಃ" ಎಂಬ ಶ್ರುತ್ಯಾಧಾರವಿರುವುದು. ಆದುದರಿಂದ ಪ್ರಾಣಶಕ್ತಿಯು ಪ್ರಾಣಾಯಾಮ ಮತ್ತು ಧ್ಯಾನದಿಂದ ಪ್ರಣವಸ್ವರೂಪಕ್ಕೆ ನಿಲ್ಲುವುದೇ ಲೋಪಾಮುದ್ರೆಯಿಂದ ಅರ್ಚಿ ಸಲ್ಪಡುವ ತತ್ವವಾಗಿದೆ. ಅಂದರೆ ಪ್ರಾಣಶಕ್ತಿಯು ಸಾಷ್ಟಾಂಗಪ್ರಣಾಮದಿಂದ ಪರಬ್ರಹ್ಮಸ್ವರೂಪಿಣಿಯಾದ ಶ್ರೀದೇವಿಯನ್ನು ಅರ್ಚಿಸುವುದೆಂಬ ತತ್ವ.

**೬೪೮. ಲೀಲಾಕ್ಲೃಪ್ತ ಬ್ರಹ್ಮಾಣ್ಡಮಣ್ಡಲಾಯೈನಮಃ—**

ವಿವಿಧಾಕಾರವಾಗಿಯೂ ವಿಚಿತ್ರ ವಿಚಿತ್ರವಾಗಿಯೂ ಭಿನ್ನ ಭಿನ್ನವಾಗಿಯೂ ಇರುವ ಈ ಅದ್ಭುತವಾದ ಬ್ರಹ್ಮಾಂಡಗಳನ್ನು ಮಕ್ಕಳಾಟದಂತೆ ಲೀಲಾಜಾಲವಾಗಿ ರಚಿಸಿರುವವಳು.

**೬೪೯. ಅದೃಶ್ಯಾಯೈನಮಃ—**

ಚರ್ಮ ಚಕ್ಷುಸ್ಸಿಗೆ ಅಗೋಚರವಾಗಿರುವವಳು. ಇಂದ್ರಿಯಗಳಿಗೆ ಸಿಲುಕ ದವಳು.

**೬೫೦. ದೃಶ್ಯರಹಿತಾಯೈನಮಃ—**

ತನಗೆ ದರ್ಶನಾರ್ಹವಾದ ಬೇರೆ ಪದಾರ್ಥವಿಲ್ಲದವಳು. ಜಡವಲ್ಲದ ಚಿತ್‌ಸ್ವರೂಪಳು.

**೬೫೧. ವಿಜ್ಞಾತ್ರ್ಯೈನಮಃ—**

ತಿಳಿಯುವವಳು. ಇಂದ್ರಿಯಗಳ ಮೂಲಕ ತಿಳಿಯುವುದಕ್ಕೆ ವಿಜ್ಞಾನವೆಂದು ಹೆಸರು. ಆದುದರಿಂದ ಇಂದ್ರಿಯಗಳ ಮೂಲಕ ತಿಳಿದುಕೊಳ್ಳಲು ಯೋಗ್ಯತೆ ಇರುವ ಜ್ಞಾತೃವೆನಿಸುವ ಜೀವಸ್ವರೂಪಿಣಿಯೂ ತಾನೇ ಆಗಿರುವುದರಿಂದ ವಿಜ್ಞಾತ್ರಿಯು. ಪರಬ್ರಹ್ಮವನ್ನು ಜೀವನು ಅಭೇದದಿಂದ ಸಾಕ್ಷಾತ್ಕಾರ ಮಾಡಿ ಕೊಳ್ಳುತ್ತಾನಾದ್ದರಿಂದಲೂ ಜೀವನು ವಿಜ್ಞಾತೃವು. ಈ ವಿಜ್ಞಾತೃ ಶಬ್ದದ ಸ್ತ್ರೀಲಿಂಗವೇ ವಿಜ್ಞಾತ್ರೀ.

**೬೫೨. ವೇದವರ್ಜಿತಾಯ್ಯೈನಮಃ—**

ತಾನು ತಿಳಿದುಕೊಳ್ಳಬೇಕಾದ ವಸ್ತುಗಳಿಲ್ಲ. ಇಂದ್ರಿಯಗಳ ಮೂಲಕ ತಿಳಿಯಲ್ಪಡುವುದಕ್ಕೂ ಅತೀತಳು. ಜೀವನು ವಿಷಯಗಳನ್ನು ತಿಳಿದುಕೊಳ್ಳು ವಂತೆ ಪರಬ್ರಹ್ಮವನ್ನು ತಿಳಿದುಕೊಳ್ಳಲು ಸಾಧ್ಯವೇ ಇಲ್ಲ. ಉಪ್ಪು ನೀರನ್ನು ನೋಡಲು ಹೋದರೆ ಹೇಗೆ ನೀರೇ ಆಗುವುದೊ ಜೀವನು ಬ್ರಹ್ಮವನ್ನುನೋಡಲು ಹೋದಾಗ ಬ್ರಹ್ಮವೇ ಆಗುವನು.

**೬೫೩. ಯೋಗಿನ್ಯೈನಮಃ—**

ಯೋಗವೆಂದರೆ ಸಂಯೋಗ ಅಥವಾ ಸೇರುವಿಕೆಯೆಂದರ್ಥ. ಜೀವನು ಪರ ಬ್ರಹ್ಮನೊಡನೆ ಸೇರುವ ಧ್ಯಾನದ ಕಾರ್ಯಕ್ಕೆ ಯೋಗವೆಂದು ಹೆಸರು. ಇಂತಹ ಸೇರುವಿಕೆಯ ಕಾರ್ಯದ ಸ್ವರೂಪಿಣಿಯಾದುದರಿಂದ ಯೋಗಿನಿಯು

**೬೫೪. ಯೋಗದಾಯ್ಯೈನಮಃ—**

ಜೀವನು ಪರಬ್ರಹ್ಮನಾಗಲು ಅನುಷ್ಠಿಸಬೇಕಾದ ಯೋಗಮಾರ್ಗವನ್ನೆಂದರೆ ಧ್ಯಾನಾಭ್ಯಾಸದ ಕ್ರಮವನ್ನು ಭಕ್ತರಿಗೆ ಅನುಗ್ರಹಿಸಿಕೊಡುವವಳು. ಅಥವಾ ಅಷ್ಟಾಂಗಯೋಗಗಳಾದ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾ ಹಾರ, ಧ್ಯಾನ, ಧಾರಣ, ಸಮಾಧಿಗಳ ಅನುಷ್ಠಾನಕ್ರಮಗಳನ್ನು ಉಪದೇಶ ಮಾಡುವ ಗುರುವಿನ ತತ್ವದಲ್ಲಿರುವವಳು.

**೬೫೫. ಯೋಗ್ಯಾಯ್ಯೈನಮಃ—**

ಜೀವಬ್ರಹ್ಮ ಸಾಕ್ಷಾತ್ಕಾರವಾಗುವ ಯೋಗಗಳೆಂದರೆ ಧ್ಯಾನಮಾರ್ಗದ ಕಾರ್ಯ ದಲ್ಲಿ ಪ್ರವರ್ಧಮಾನವಾಗಿ ಅದರ ಕಾರ್ಯಗಳನ್ನು ಸಂಪೂರ್ಣವಾಗಿ ಯಾವನು ಅರಿತಿರುವನೋ ಅವನಿಗೇ ಯೋಗ್ಯನೆಂದು ಹೆಸರು. ಅಂದರೆ ಯೋಗಮಾರ್ಗ ವನ್ನು ಚೆನ್ನಾಗಿ ತಿಳಿದಿರುವವನಿಗೆ ಯೋಗ್ಯನೆಂದು ಹೆಸರಲ್ಲದೆ ಮತ್ತೊಬ್ಬರಿಗಲ್ಲ. ಇಂತಹ ಯೋಗ್ಯರ ಸ್ವರೂಪಿಣಿಯಾಗಿರುವವಳು.

**೬೫೬. ಯೋಗಾನನ್ದಾಯ್ಯೈನಮಃ—**

ದೇಹ ಮತ್ತು ಹೊರಗಿನ ವಿಷಯಗಳೂ ನಾನಲ್ಲವೆಂದು ಪರಬ್ರಹ್ಮವೇ ನಾನೆಂದೂ ಧ್ಯಾನಾಭ್ಯಾಸದಿಂದ ಅಂದರೆ ಯೋಗದಿಂದ ಲಭ್ಯವಾಗುವುದೇ ಆನಂದರೂಪವಾದ ಪರಬ್ರಹ್ಮಸಾಕ್ಷಾತ್ಕಾರವು. ಯೋಗವೆಂದರೆ ಜೀವಾತ್ಮ ಪರಮಾತ್ಮನ ಸೇರುವಿಕೆಯಿಂದ ಉಂಟಾಗುವ ಆನಂದವಾದುದರಿಂದ ಪರಬ್ರಹ್ಮ

ಸಾಕ್ಷಾತ್ಕಾರವೇ ಯೋಗಾನಂದವೆನಿಸುವುದು. ಇಂತಹ ಯೋಗಾನಂದಸ್ವರೂಪಿಣಿಯಾಗಿರುವವಳು.

ಪ್ರಪಂಚಮಾರ್ಗಕ್ಕೆ ಪ್ರಕಾಶವಾಗಿರುವ ಉ+ಮ್+ಅ=ಉಮಾ ಎನ್ನುವುದು ಪ್ರಣವಸ್ವರೂಪವಾದ ಓಂಕಾರವಾಗುವ ಶ್ರೀ ಉಮಾದೇವಿಯ ಮಹಿಮೆಯನ್ನೇ ೬೩೩ನೇ ನಾಮದಿಂದ ಇದುವರೆಗೂ ಪ್ರತಿಪಾದಿಸುತ್ತದೆ. ಪ್ರಣವಸ್ವರೂಪವಾಗುವುದೇ ಉಮೆಯು ಗೌರಿ ಎನಿಸಿ ಅನಂತರ ಈಶ್ವರನೊಡನೆ ಪಾಣಿಗ್ರಹಣ ಮಾಡಿಕೊಳ್ಳುವುದಾಗಿದೆ. ಈ ಪ್ರಣವಸ್ವರೂಪವಾಗಲು ಪ್ರಥಮದಲ್ಲಿ ೬೪೭ನೇ ನಾಮದಲ್ಲಿ ತಿಳಿಸಿರುವಂತೆ ಪ್ರಾಣಶಕ್ತಿಯು ಸ್ವಾಧೀನಕ್ಕೆ ಬಂದು ಪರಮಾತ್ಮನಲ್ಲಿ ಲೀನವಾಗುವ ಪ್ರಾಣಾಯಾಮ ಮತ್ತು ೬೫೩, ೬೫೪, ೬೫೬ ನೇ ನಾಮಗಳಲ್ಲಿ ತಿಳಿಸಿರುವ ಧ್ಯಾನಮಾರ್ಗಗಳಲ್ಲಿ ಹೋಗಿ ೬೪೫ನೇ ನಾಮದಲ್ಲಿ ತಿಳಿಸಿರುವಂತೆ ಸೋಹಂ ಭಾವದಿಂದ ಧ್ಯಾನಮಾಡಿ ಪರಬ್ರಹ್ಮಸ್ವರೂಪಿಣಿಯಾದ ಶ್ರೀದೇವಿಯನ್ನು ಸಾಕ್ಷಾತ್ಕಾರಮಾಡಿಕ್ಕೊಳ್ಳಬೇಕೆಂಬುದೇ ಮುಖ್ಯ ತತ್ವವಾಗಿದೆ. ಹಿಂದೆ ೨-೩ ಕಡೆಗಳಲ್ಲಿ ತಿಳಿಸಿರುವ ಮೂಲಾಧಾರಾದಿ ಚಕ್ರಗಳನ್ನು ಭೇದಿಸಿಕೊಂಡು ಸಹಸ್ರಾರಕಮಲವನ್ನು ಸೇರುವ ತತ್ವವೂ ಪ್ರಣವದ ತತ್ವವೂ ಒಂದೇ ಆಗಿರುತ್ತದೆ.

**೬೫೭. ಯುಗನ್ಧರಾಯೈನಮಃ—**

ಸಂಯೋಗವಾಗಿರುವಿಕೆಯನ್ನು ಧರಿಸುವುದಕ್ಕೆ ಯುಗನ್ಧರ ಎಂದು ಅರ್ಥ. ಇದರ ತತ್ವಾರ್ಥವೇನೆಂದರೆ ಹಿಂದಿನನಾಮದಲ್ಲಿ ತಿಳಿಸಿರುವಂತೆ ಯೋಗಾನನ್ದವಾದ ಜೀವಬ್ರಹ್ಮಸಾಕ್ಷಾತ್ಕಾರವಾದಾಗ ದೇಹವು ಮೃತಿಹೊಂದಿರುವುದಿಲ್ಲ. ಜೀವಂತನಾಗಿದ್ದೇ ದೇಹದಲ್ಲಿರುವ ಪಂಚಪ್ರಾಣಗಳು ಬುದ್ಧಿಯೊಡನೆ ಪರಬ್ರಹ್ಮನಲ್ಲಿ ಲೀನವಾಗಿ ಜೀವನು ಬ್ರಹ್ಮಸಾಕ್ಷಾತ್ಕಾರವನ್ನು ಪಡೆದಿರುವನು. ಇಂತಹ ಸಾಕ್ಷಾತ್ಕಾರದ ಸ್ಥಿತಿಯಲ್ಲಿ ಪರಬ್ರಹ್ಮನಲ್ಲಿ ಲೀನವಾಗಿರುವ ಪಂಚಪ್ರಾಣ, ಬುದ್ಧಿ ಮತ್ತು ಇಂದ್ರಿಯಶಕ್ತಿಗಳನ್ನು ಧರಿಸಿಯೂ, ಸಾಕ್ಷಾತ್ಕರಿಸಿಕ್ಕೊಂಡಿರುವ ಜೀವನನ್ನು ಪರಬ್ರಹ್ಮಸ್ವರೂಪದಲ್ಲೇ ಧರಿಸಿಯೂ ಇರುವ ಸ್ವರೂಪವಾಗಿರುವುದು. ಹೀಗೆ ಜೀವನನ್ನೂ ಪಂಚಪ್ರಾಣಗಳನ್ನೂ ಈ ಎರಡನ್ನೂ ಪರಬ್ರಹ್ಮಸ್ವರೂಪಿಣಿಯಾದ ಶ್ರೀದೇವಿಯೇ ಧರಿಸಿರುವುದರಿಂದ ಯುಗಂಧರ ಎನಿಸಲ್ಪಡುವಳು. (೨) ಕೃತ, ತ್ರೇತಾ, ದ್ವಾಪರ ಕಲಿಗಳೆಂಬ ನಾಲಕ್ಕು ಯುಗಗಳನ್ನೂ ಧರಿಸಿರುವವಳು.

**೬೫೮. ಇಚ್ಛಾಶಕ್ತಿ ಜ್ಞಾನಶಕ್ತಿ ಕ್ರಿಯಾಶಕ್ತಿ ಸ್ವರೂಪಿಣ್ಯೈನಮಃ—**

ಇಚ್ಛಾ, ಜ್ಞಾನ, ಕ್ರಿಯಾಶಕ್ತಿಗಳು ಶುದ್ಧಸತ್ವಗುಣಕ್ಕೆ ಸೇರಿ ಶುದ್ಧ ಸತ್ವಗುಣದ ವಿಭಾಗವಾಗಿ ದೇವತಾತ್ಮಕವಾದುದು. ರಜೋಗುಣ ತಮೋಗುಣಗಳು

ಇಚ್ಛಾಮಾತ್ರದವುಗಳಲ್ಲ. ಅವುಗಳ ಜ್ಞಾನವು ಅಜ್ಞಾನವೆನಿಸುವುದು. ರಜೋಗುಣದ ಕ್ರಿಯೆಯು ವಿಕ್ಷೇಪವೆನಿಸುವದು. ಆದುದರಿಂದ ಶ್ರೀದೇವಿಯು ದೇವತಾತ್ಮಕವಾದ ಇಚ್ಛಾ, ಜ್ಞಾನ, ಕ್ರಿಯಾಶಕ್ತಿಸ್ವರೂಪಿಣಿಯು.

**೬೫೯. ಸರ್ವಾಧಾರಾಯೈನಮಃ—**

ಬ್ರಹ್ಮಾಂಡದ ಸಕಲಕ್ಕೂ ಆಧಾರವಾಗಿರುವವಳು.

**೬೬೦. ಸುಪ್ರತಿಷ್ಠಾಯೈನಮಃ—**

ಬ್ರಹ್ಮಾಂಡದಲ್ಲೆಲ್ಲಾ ಚೆನ್ನಾಗಿ ನೆಲಸಿರುವವಳು.

**೬೬೧. ಸದಸದ್ರೂಪಧಾರಿಣ್ಯೈನಮಃ—**

ಪರಿಣಾಮಭೇದವಿಲ್ಲದಿರುವುದರಿಂದ ಸತ್ ಎನಿಸುವ ಶುದ್ಧ ಸತ್ವಗುಣವನ್ನು ಪರಿಣಾಮಭೇದ ಹೊಂದುವುದರಿಂದ ಅಸತ್ ಎನಿಸುವ ರಜೋಗುಣ ತಮೋಗುಣಗಳ ಕಾರ್ಯಗಳ ರೂಪಗಳನ್ನೂ ಧರಿಸುವವಳು. ಅಥವಾ ಸತ್‌ಸ್ವರೂಪಿಣಿಯಾದ ತಾನು ವ್ಯತ್ಯಾಸವಾಗದಂತೆ ಪರಬ್ರಹ್ಮಸ್ವರೂಪಿಣಿಯಾಗಿಯೇ ಇದ್ದು ಮಿಥ್ಯವಾದ ಪ್ರಪಂಚರೂಪವನ್ನು ಹೊಂದಿರುವವಳು.

**೬೬೨. ಅಷ್ಟಮೂರ್ತ್ಯೈನಮಃ—**

ಭೂಮಿ, ಜಲ, ಅಗ್ನಿ, ವಾಯು, ಆಕಾಶ, ಮನಸ್ಸು, ಬುದ್ಧಿ, ಅಹಂಕಾರ ಈ ಎಂಟೂ ಅಷ್ಟಪ್ರಕೃತಿಗಳು. ಇದು ಅಸತ್ತಾದುದು. ಇದನ್ನೇ ಶ್ರೀಕೃಷ್ಣ ಪರಮಾತ್ಮನು ಭಗವದ್ಗೀತೆಯಲ್ಲಿ ಹೇಳಿರುತ್ತಾನೆ. ಮೇಲಿನ ನಾಮದಲ್ಲಿ ತಿಳಿಸಿರುವ ಅಸತ್ತಿನ ವಿವರಣೆಯೇ ಇದಾಗಿರುತ್ತದೆ. ಇಂತಹ ಅಷ್ಟಪ್ರಕೃತಿರೂಪಿಣಿಯಾಗಿರುವವಳು. ಪಂಚಭೂತಗಳು, ಸೂರ್ಯ, ಚಂದ್ರ, ಯಜಮಾನ, ಇವೂ ಅಷ್ಟಮೂರ್ತಿಗಳು. ಈ ಅಷ್ಟಮೂರ್ತಿಸ್ವರೂಪಿಣಿಯು.

**೬೬೩. ಅಜಾಜೈತ್ರ್ಯೈನಮಃ—**

ಅಜಾ ಎಂದರೆ ರಜಸ್ತಮೋಗುಣಸ್ವರೂಪವಾದ ಮಲಿನ ಪ್ರಕೃತಿ. ಈ ಮಲಿನ ಪ್ರಕೃತಿಯನ್ನು ಗೆದ್ದವಳೆಂದರೆ ಮಲಿನ ಪ್ರಕೃತಿಗೂ ನಿಯಂತೃವಾಗಿ ಮಲಿನ ಪ್ರಕೃತಿಯನ್ನು ತನ್ನ ಸ್ವಾಧೀನದಲ್ಲಿಟ್ಟುಕೊಂಡಿರುವ ಶುದ್ಧಸತ್ವಮಾಯಾ ರೂಪಳಾದ ಈಶ್ವರೀಸ್ವರೂಪಿಣಿಯು.

**೬೬೪. ಲೋಕಯಾತ್ರಾವಿಧಾಯಿನ್ಯೈನಮಃ—**

ಪ್ರಪಂಚವು ಹೇಗೆ ಹೇಗೆ ನಡೆಯುತ್ತಿರಬೇಕೊ ಅದನ್ನು ವಿಧಾಯಕ ಮಾಡಿರುವವಳು.

**೬೬೫. ಏಕಾಕಿನ್ಯೈನಮಃ—**

"ನೇಹನಾನಾಸ್ತಿಕಿಂಚನ" ಎಂಬ ಶ್ರುತ್ಯ್ಯಾನುಸಾರ ಅದ್ವಿತೀಯ ಪರಬ್ರಹ್ಮ ಸ್ವರೂಪದಿಂದ ತಾನೇತಾನಾಗಿರುವವಳು. ತಾನೊಬ್ಬಳೇ ಪ್ರಪಂಚವನ್ನು ಸೃಷ್ಟಿಸಿ ಸ್ಥಿತಿಗೆ ತಂದು, ಅನಂತರ ಲಯವನ್ನು ಮಾಡುವವಳಾದುದರಿಂದ ಏಕಾಕಿನಿ ಎಂದು ದೇವೀಪುರಾಣದಲ್ಲೂ ಹೇಳಿದೆ.

**೬೬೬. ಭೂಮರೂಪಾಯೈನಮಃ—**

"ಯತ್ರನಾನ್ಯತ್ಪಶ್ಯತಿ ನಾನ್ಯಚ್ಛೃಣೋತಿ ನಾನ್ಯದ್ವಿಜಾನಾತಿಸಭೂಮಾ" ಎಂಬ ಶ್ರುತ್ಯಾಧಾರದಂತೆ ಯಾವುದರಲ್ಲಿ ಮತ್ತೊಂದು ಕಾಣದೆ ಕೇಳದೆ ಆನಂದ ಮಾತ್ರಸ್ವರೂಪವಾಗಿರುವುದೋ ಅದು ಭೂಮಶಬ್ದವಾಚ್ಯವಾದ ಬ್ರಹ್ಮಾನಂದವು. ಇಂತಹ ಆನಂದಸ್ವರೂಪಿಣಿಯು.

**೬೬೭. ನಿರ್ದ್ವೈತಾಯೈನಮಃ—**

ಜಗತ್ತು ಪರಬ್ರಹ್ಮನಿಗಿಂತ ಬೇರೆಯಾಗಿರುವುದು ಮತ್ತು ಬ್ರಹ್ಮವೇ ಬೇರೆ ಜೀವನೇ ಬೇರೆ ಎಂಬವುಗಳನ್ನೇ ದ್ವೈತವೆಂದು ಕೆಲವರು ಕಲ್ಪಿಸಿರುತ್ತಾರೆ. ಎರಡು ಎನ್ನುವುದು ಇಲ್ಲದೆ ಪರಬ್ರಹ್ಮಸ್ವರೂಪಿಣಿಯಾದ ದೇವಿಯೇ ಜಗತ್ತು ಮತ್ತು ಜೀವರೂಪವಾಗಿರುವುದು. ಈ ಸಹಸ್ರನಾಮಗಳಲ್ಲಿನ ಅನೇಕ ನಾಮ ಗಳಿಂದ ವ್ಯಕ್ತವಾಗುವುದು. ಆದುದರಿಂದ ಎರಡು ಎನ್ನುವುದೇ ಇಲ್ಲದೆ ಒಂದೇ ವಸ್ತುವಾಗಿರುವಂತಹ ಅದ್ವೈತಸ್ವರೂಪಿಣಿಯಾದ್ದರಿಂದ ಶ್ರೀದೇವಿಗೆ ನಿರ್ದ್ವೈತೆ ಎಂದು ಹೆಸರು.

**೬೬೮. ದ್ವೈತವರ್ಜಿತಾಯೈನಮಃ—**

ಭ್ರಾಂತಿಸ್ವರೂಪವಾದ ಅಜ್ಞಾನದಿಂದ ಜಗತ್ತು ಮತ್ತು ದೇಹ ಸತ್ಯವೆಂದು ತೋರುವುದೇ ಹೊರತು ವಾಸ್ತವವಾಗಿ ಸತ್ಯವಾದುದಲ್ಲ. ಆದುದರಿಂದ ಭ್ರಾಂತಿಯೇ ದ್ವೈತ. ಭ್ರಾಂತಿನಾಶವಾದರೆ ಅದ್ವೈತವೇ ನಿಲ್ಲುವುದು. ಆದುದ ರಿಂದ ಭ್ರಾಂತಿರಹಿತಸ್ವರೂಪಿಣಿಯು.

೭೭೯. **ಅನ್ನದಾಯೈನಮಃ—**

ಅನ್ನಪ್ರದಾತಳು. "ಅನ್ನಾತ್ಪುರುಷಃ" ಎಂಬ ಶ್ರುತಿವಚನದಂತೆ ಆಹಾರ ವನ್ನು ಸೃಷ್ಟಿಸಿಯೇ ಜೀವರನ್ನು ಸೃಷ್ಟಿಸಿರುವವಳು.

೭೮೦. **ವಸುದಾಯೈನಮಃ**—ಸಂಪತ್ತನ್ನು ಕೊಡುವವಳು.

೭೮೧. **ವೃದ್ಧಾಯೈನಮಃ—**

ಕಾಲವನ್ನು ನಿರ್ಧರಿಸಲಾರದಷ್ಟು ಪುರಾತನಳು. ಅಂದರೆ ಅನಾದಿಸ್ವರೂ ಪಿಣಿಯು. ಸರ್ವಸಂಪತ್ಸಮೃದ್ಧಳು.

೭೮೨. **ಬ್ರಹ್ಮಾತ್ಮೈಕ್ಯಸ್ವರೂಪಿಣ್ಯೈನಮಃ—**

ಜೀವಬ್ರಹ್ಮರಿಗೆ ಐಕ್ಯವನ್ನುಂಟುಮಾಡುವ ಜ್ಞಾನಸ್ವರೂಪಿಣಿಯು.

೭೮೩. **ಬೃಹತ್ಯೈನಮಃ—**

ಬಹು ದೊಡ್ಡ ವಸ್ತುವಾಗಿರುವವಳು. ಪೂಜ್ಯಭಾವದಲ್ಲಿ ಶ್ರೀದೇವಿಗಿಂತ ಪೂಜ್ಯವಾದ ವಸ್ತು ಮತ್ತೊಂದಿಲ್ಲವಾದುದರಿಂದ ದೊಡ್ಡ ವಸ್ತುವಾಗಿರುವವಳು. ಗಾತ್ರದಲ್ಲಿ ತೆಗೆದುಕೊಂಡರೆ ಸರ್ವವ್ಯಾಪಿಯಾಗಿ ಅಖಂಡವಾದುದರಿಂದ ಬೃಹತ್ಸ್ವರೂಪಿಣಿಯು.

೭೮೪. **ಬ್ರಾಹ್ಮಣ್ಯೈನಮಃ—**

"ಬ್ರಹ್ಮಣಾ ಆತ್ಮಾನಂ ಇತರಾಂಶ್ಚನಯತೀತಿ ಬ್ರಾಹ್ಮಣಃ" ಎಂಬ ಅರ್ಥದಂತೆ ಉಪಾಸಕನನ್ನು ಆ ಪರಬ್ರಹ್ಮದೊಡನೆ ಸೇರಿಸುವುದು ಬ್ರಾಹ್ಮಣವೆನಿಸುವುದು. ಅಂದರೆ ಜ್ಞಾನ ವಿದ್ಯಾಸ್ವರೂಪಿಣಿಯು. ಅಲ್ಲದೆ "ಬ್ರಹ್ಮವೇದಃ ತದರ್ಥಂ ಯಜ್ಞಾದ್ಯುಪಯೋಗಿಕಂ ನಯತೀತಿ—ಬ್ರಾಹ್ಮಣಃ" (ನಿಜಪ್ರಾಪಣೆ) ಎಂಬ ಅರ್ಥದಂತೆ ವೇದ ಮಂತ್ರವನ್ನು ಯಜ್ಞವೇ ಮುಂತಾದ ಕರ್ಮಕ್ಕೆ ಅನುಕೂಲವಾಗುವಂತೆ ಬೋಧಿಸುವುದು ಬ್ರಾಹ್ಮಣವೆನಿಸುವುದು. ಅಂದರೆ ಕರ್ಮಕಾಂಡದ ವಿದ್ಯಾಸ್ವರೂಪಿಣಿಯು. ಮೇಲೆ ತಿಳಿಸಿರುವ ಜ್ಞಾನ ಮತ್ತು ಕರ್ಮಕಾಂಡಗಳಿಗೆ ಅನುಸಾರವಾಗಿರುವ ಬ್ರಾಹ್ಮಣರ ಸ್ವರೂಪಿಣಿಯೂ ಆಗಿರುವವಳು.

೭೮೫. **ಬ್ರಾಹ್ಮ್ಯೈನಮಃ—**

ಪರಬ್ರಹ್ಮಶಕ್ತಿಯಾದ ಶ್ರೀ ಸರಸ್ವತೀದೇವಿಗೆ ಬ್ರಾಹ್ಮೀ ಎಂದು ಹೆಸರು. ಸಪ್ತಮಾತೃಕೆಯರಲ್ಲೂ ಪ್ರಧಾನ ದೇವತೆಯು.

೬೭೬. ಬ್ರಹ್ಮಾನನ್ದಾಯೈನಮಃ—

ಇದಕ್ಕಿಂತಲೂ ಹೆಚ್ಚಿನ ಆನಂದವೆಂಬುದು ಮತ್ತೊಂದಿಲ್ಲವಾದುದರಿಂದ ಶ್ರೀದೇವಿಯೇ ಬ್ರಹ್ಮಾನನ್ದಸ್ವರೂಪಿಣಿಯು. ಗಡಿಗೆಯೊಳಗಿರುವ ನೀರಿನಸ್ವರೂಪವೇ ಬ್ರಹ್ಮಾನಂದ. ಗಡಿಗೆಯ ಹೊರಪ್ರಾಕಾರದಲ್ಲಿರುವ ಶೈತ್ಯವೇ ಅಸ್ಮದಾದಿಗಳಿಗೆ ಸಂತೋಷವುಂಟಾಗುವ ಕಾಲದಲ್ಲಿ ಆಗುವ ವಿಷಯಾನಂದ. ನಮಗೆ ಬ್ರಹ್ಮಸಾಕ್ಷಾತ್ಕಾರವಾದಾಗ ಗಡಿಗೆಯೊಳಗಿನ ನೀರಿನಸ್ವರೂಪವಾದ ಬ್ರಹ್ಮಾನಂದವು ಲಭಿಸುವುದು.

೬೭೭. ಬಲಿಪ್ರಿಯಾಯೈನಮಃ—

ಸಾಮಂತರಾಜರು ಚಕ್ರವರ್ತಿಗೆ ಕೊಡುವ ಕಾಣಿಕೆಗೆ ಬಲಿ ಎಂದು ಅಮರದ ವ್ಯಾಖ್ಯಾನದಲ್ಲಿ ಅರ್ಥ ಬರೆದಿರುವುದು. ದೇವಸ್ಥಾನಕ್ಕೆ ಹೋದಾಗ ದೇವರಿಗೆ ಕಾಣಿಕೆಯಾಗಿ ದುಡ್ಡು ಮತ್ತು ವಸ್ತ್ರಾಭರಣಗಳನ್ನು ಕೊಡುತ್ತೇವೆ. ಊಟಮಾಡುವುದಕ್ಕಿಂತ ಮುಂಚೆ ನಾವು ತಿನ್ನುವುದನ್ನು ಚಿತ್ರ, ಚಿತ್ರಗುಪ್ತ, ಯಮ, ಧರ್ಮರಾಜ, ಸರ್ವಭೂತ ಇವರುಗಳಿಗೆ ನಮಸ್ಕರಿಸಿ ಚಿತ್ರಬಲಿ ಇಡುತ್ತೇವೆ. ಹೆಂಗಸರು ಅಡಿಗೆಮಾಡುವಾಗ ಒಂದು ಚುಟಿಕೆ ಅಕ್ಕಿಯನ್ನು ಯಜ್ಞೇಶ್ವರನಿಗೆ ಕಾಣಿಕೆಯಾಗಿ ಅರ್ಪಿಸಿ ಅನಂತರ ಅನ್ನಮಾಡುತ್ತಾರೆ. (ಮಾಂಸಾಹಾರಿಗಳು ತಾವು ತಿನ್ನುವ ಆಡು ಕುರಿ, ಮಹಿಷಿ ಮುಂತಾದವುಗಳನ್ನು ಕಾಣಿಕೆಗಾಗಿ ವಧೆ ಮಾಡಿ ಅರ್ಪಿಸುತ್ತಾರೆ. ಶ್ರೀದೇವಿಯು ಭಕ್ತಪರಾಧೀನಳಾದುದರಿಂದ ಸಾತ್ವಿಕ, ರಾಜಸಿಕ, ತಾಮಸ ಮಾರ್ಗಗಳಿಗನುಸಾರವಾಗಿ ಭಕ್ತರುಗಳಿಗೆ ಫಲವನ್ನು ಕೊಡುತ್ತಾಳೆ. ಕರ್ಮಮಾರ್ಗದಲ್ಲೂ ರಾಜಸತಾಮಸಗಳಿಗಿಂತ ಸಾತ್ವಿಕಮಾರ್ಗವೂ ಸಾತ್ವಿಕಾಹಾರವೂ ಸರ್ವಶ್ರೇಷ್ಠವಾದುದು. ಆದುದರಿಂದ ಸಾತ್ವಿಕವಾದ ಆಹಾರವನ್ನು ಕಾಣಿಕೆಯಾಗಿ ಕೊಡುವುದು ಉತ್ತಮೋತ್ತಮವು. ಶ್ರೀ ಕೃಷ್ಣಪರಮಾತ್ಮನು ಭಗವದ್ಗೀತೆಯಲ್ಲಿ ಯಾರು ಎಲೆಯನ್ನೋ ಹೂವನ್ನೊ ಹಣ್ಣನ್ನೊ ನೀರನ್ನೊ ನನಗೆ ಭಕ್ತಿಯಿಂದ ಕೊಡುತ್ತಾರೊ ಶುದ್ಧವಾದ ಮನಸ್ಸಿನಿಂದ ತಂದ ಅದನ್ನು ನಾನು ತೆಗೆದುಕೊಳ್ಳುತ್ತೇನೆಂದು ಹೇಳಿರುತ್ತಾನೆ. ಆದುದರಿಂದ ಇಂತಹ ಅಲ್ಪಕಾಣಿಕೆಯಲ್ಲೇ ದೇವರು ಸುಪ್ರೀತರಾಗುವಾಗ ಕ್ರೌರ್ಯಕಾರ್ಯವಾದ ಪ್ರಾಣಿಗಳ ಬಲಿಗಳನ್ನು ಕೊಡಬಾರದು.

ಶ್ರೀದೇವಿಗೆ ಕರ್ಮಮಾರ್ಗದ ಕಾಣಿಕೆ (ಬಲಿ) ಗಿಂತ ಜ್ಞಾನಮಾರ್ಗದ ಕಾಣಿಕೆಯು ಬಹುಪ್ರಿಯವಾದುದು. ಪಶುವೆಂದರೆ ಅಜ್ಞಾನ. ಮಹಿಷಿ ಎಂದರೆ ತಾಮಸರೂಪವಾದ ಭ್ರಾಂತಿ ಮತ್ತು ಆವರಣ. ನರನೆಂದರೆ ಮನುಷ್ಯರು ವಿಹರಿಸುತ್ತಿರುವ ವಿಷಯಾದಿಗಳ ಜ್ಞಾನ. ಈ ವಿಷಯಾದಿಗಳ ಜ್ಞಾನವನ್ನೂ

ಭ್ರಾಂತಿಯನ್ನೂ ಬಲಿಯೆಂದರೆ ಕಾಣಿಕೆಯಾಗಿ ಶ್ರೀದೇವಿಯು ಅಪೇಕ್ಷಿಸುವಳು. ಈ ಕಾಣಿಕೆಯಿಂದ ಭಕ್ತನಿಗೆ ಮೇಲಿನ ನಾಮದಲ್ಲಿ ತಿಳಿಸಿರುವ ಬ್ರಹ್ಮಾನಂದವನ್ನೇ ಅನುಗ್ರಹಿಸಿ ಕೊಡುವಳು.

೬೭೮. **ಭಾಷಾರೂಪಾಯೈನಮಃ—**

ಪ್ರಪಂಚದಲ್ಲಿರುವ ಸಕಲ ಪ್ರಾಣಿಗಳೂ ಉಚ್ಚರಿಸುವ ಭಾಷಾರೂಪ ವಾಗಿರುವವಳು. ಎಲ್ಲಾ ಭಾಷೆಗಳಿಗೂ ದೇವತಾತ್ಮಕವಾಗಿಯೂ ನಾದಬ್ರಹ್ಮದ ಸಾರವೆಲ್ಲಾ ಗರ್ಭಿತವಾಗಿಯೂ ಇರುವ ಮಹತ್ವವುಳ್ಳ ಸಂಸ್ಕೃತಭಾಷಾರೂಪಳು.

೬೭೯. **ಬೃಹತ್ಸೇನಾಯೈನಮಃ—**

ಬ್ರಹ್ಮಾಂಡವನ್ನೇ ರಕ್ಷಿಸುವಂತಹ ಸತ್ವಗುಣದ ದೊಡ್ಡಸೇನೆಯುಳ್ಳವಳು.

೬೮೦. **ಭಾವಾಭಾವವಿವರ್ಜಿತಾಯೈನಮಃ—**

ಭಾವನೆಯಿಂದಲೂ ಅಭಾವನೆಯಿಂದಲೂ ಬಿಡಲ್ಪಟ್ಟಿರುವವಳು. ಅಂದರೆ ಭಾವನೆಗೆ ದೊರಕುವವಳಲ್ಲ ಹಾಗಾದರೆ ಅಭಾವನಾಸ್ವರೂಪವಾದ ಶೂನ್ಯವೊ ಎಂದರೆ ಶೂನ್ಯರೂಪಳೂ ಅಲ್ಲ. ಉಪ್ಪುನೀರನ್ನು ಸೇರಲು ಹೋದರೆ ಹೇಗೆ ಉಪ್ಪುನೀರೇ ಆಗುವುದೋ ಅದರಂತೆ ಪರಬ್ರಹ್ಮಸ್ವರೂಪಿಣಿಯಾದ ಶ್ರೀದೇವಿಯೇ ನಾನೆಂಬ ಜ್ಞಾನದಿಂದ ಧ್ಯಾನದಲ್ಲಿ ಮುಳುಗಿದರೆ ಶ್ರೀದೇವಿಯೇ ನಾವಾಗುತ್ತೇವೆ. ಶೂನ್ಯವಿದ್ದ ಭಾಗದಲ್ಲಿ ನಾನು ಎಂಬ ಜ್ಞಾನವನ್ನು ಅದು ಧರಿಸಲಾರದು. ಆದುದ ರಿಂದ ಶೂನ್ಯವೂ ಅಲ್ಲ. (೨) ಶ್ರೀದೇವಿಗೆ ಭಾವರೂಪವಾದುದೂ ಇಲ್ಲ. ಅಭಾವ ರೂಪವಾದುದೂ ಇಲ್ಲ

೬೮೧. **ಸುಖಾರಾಧ್ಯಾಯೈನಮಃ—**

ಕಷ್ಟವಿಲ್ಲದೆ ವೆಚ್ಚವಿಲ್ಲದೆ ಪರಮಭಕ್ತಿಯೊಡಗೂಡಿದ ಸುಖಕರವಾದ ಜ್ಞಾನಮಾರ್ಗದಿಂದ ಆರಾಧಿಸಲ್ಪಡಬಹುದಾದವಳು

೬೮೨. **ಶುಭಕರ್ಯೈನಮಃ—**

ಐಹಿಕ ಮತ್ತು ಆಮುಷ್ಮಿಕ ಸುಖಗಳನ್ನು ಅನುಗ್ರಹಿಸುವವಳು.

೬೮೩. **ಶೋಭನಾಯೈ ಸುಲಭಾಯೈ ಗತ್ಯೈನಮಃ—**

ಅನಾಯಾಸವಾಗಿ ಮಂಗಳಕರವಾದ ಮಾರ್ಗದಿಂದ ಮೋಕ್ಷವನ್ನು ಅನುಗ್ರಹಿಸುವವಳು.

**೬೮೪. ರಾಜರಾಜೇಶ್ವರ್ಯೈನಮಃ—**

ಭೂಮಂಡಲವನ್ನಾಳುವ ರಾಜರು ಎಷ್ಟೋಜನರಿರುತ್ತಾರೆ. ದೇವತೆಗಳ ದೊರೆಯಾದ ಇಂದ್ರನಿರುತ್ತಾನೆ. ಭೂಮಂಡಲ ಮತ್ತು ದೇವಲೋಕಗಳಿಗೆಲ್ಲಾ ಒಡೆಯರಾದ ಬ್ರಹ್ಮ, ವಿಷ್ಣು, ಶಿವರುಗಳು ರಾಜರೆನಿಸುವರು. ಧನಕ್ಕೆ ಅಧಿಪತಿಯಾದ ಕುಬೇರನೂ ರಾಜರಾಜ ಎಂದು ಕರೆಯಲ್ಪಡುವನು. ಇಂತಹ ರಾಜರುಗಳಿಗೆಲ್ಲಾ ನಾಥಳಾಗಿರುವುದರಿಂದ ರಾಜರಾಜೇಶ್ವರಿಯು. ರಾಜನೆಂದರೆ ಚಂದ್ರ. ರಾಜನಿಗೆ ರಾಜನೆಂದರೆ ಚಂದ್ರನನ್ನು ಶಿರಸ್ಸಿನಲ್ಲಿ ಧರಿಸಿರುವ ಚಂದ್ರಶೇಖರ. ಈ ಚಂದ್ರಶೇಖರನಿಗೂ ಈಶ್ವರಿಯಾಗಿರುವ ಪರಬ್ರಹ್ಮಸ್ವರೂಪಿಣಿಯು.

**೬೮೫. ರಾಜ್ಯದಾಯಿನ್ಯೈನಮಃ—**

ಭೂಮಿಯಲ್ಲಿರುವ ರಾಜ್ಯ, ದೇವತೆಗಳ ರಾಜ್ಯ, ತ್ರಿಮೂರ್ತಿಗಳ ರಾಜ್ಯ, ಸ್ವರಾಜ್ಯವಾದ ಪರಬ್ರಹ್ಮಪದವಿ, ಇಂತಹ ರಾಜ್ಯಗಳನ್ನು ಅನುಗ್ರಹಿಸಿ ಕೊಡುವವಳು.

**೬೮೬. ರಾಜ್ಯವಲ್ಲಭಾಯೈನಮಃ—**

ಹದಿನಾಲ್ಕು ಲೋಕಗಳ ಸ್ವರೂಪವಾದ ರಾಜ್ಯಗಳಿಗೂ ನಾಥಳು.

**೬೮೭. ರಾಜತ್ಕೃಪಾಯೈನಮಃ—**

ನಿರಂತರವೂ ಪ್ರಕಾಶಮಾನವಾದ ದಯೆಯುಳ್ಳವಳು.

**೬೮೮. ರಾಜಪೀಠನಿವೇಶಿತನಿಜಾಶ್ರಿತಾಯೈನಮಃ—**

ತನ್ನ ಆಶ್ರಿತರಿಗೆ ರಾಜಪೀಠವನ್ನು ದಯಪಾಲಿಸುವವಳು.

**೬೮೯. ರಾಜ್ಯಲಕ್ಷ್ಮ್ಯೈನಮಃ—**

ರಾಜ್ಯಕ್ಕೆ ಬೇಕಾದ ಧನ ಧಾನ್ಯ ಮುಂತಾದ ಸಕಲ ಐಶ್ವರ್ಯಗಳ ಸ್ವರೂಪಿಣಿಯು. ರಾಜ್ಯಲಕ್ಷ್ಮೀಸ್ವರೂಪಿಣಿಯು.

**೬೯೦. ಕೋಶನಾಥಾಯೈನಮಃ—** ರಾಜ್ಯದಲ್ಲಿರುವ ಭಂಡಾರಕ್ಕೆ ಒಡೆಯಳು.

**೬೯೧. ಚತುರಂಗಬಲೇಶ್ವರ್ಯೈನಮಃ—**

ಅಶ್ವದಳ, ಗಜದಳ, ರಥದಳ, ಕಾಲುಬಲಗಳೆಂಬ ಈ ನಾಲಕ್ಕು ಬಲಗಳಿಗೆ ನಾಥಳು.

**೬೯೨. ಸಾಮ್ರಾಜ್ಯದಾಯಿನ್ಯೈನಮಃ—**

ಅನೇಕ ಸಾಮಂತರಾಜರುಗಳಿಂದ ಕಾಣಿಕೆಯನ್ನು ತೆಗೆದುಕ್ಕೊಳ್ಳುವ ಚಕ್ರವರ್ತಿಪದವಿಯನ್ನು ಅನುಗ್ರಹಿಸುವವಳು ಪರಬ್ರಹ್ಮಪದವಿಗೆ ಸಾಮ್ರಾಜ್ಯ ವೆಂದು ಶ್ರುತಿಯು ತಿಳಿಸುವುದರಿಂದ ಇಂತಹ ಪರಬ್ರಹ್ಮಪದವಿಯನ್ನು ಅನು ಗ್ರಹಿಸುವವಳು.

**೬೯೩. ಸತ್ಯಸನ್ಧಾಯೈನಮಃ**—ಸತ್ಯವಾದ ಪ್ರತಿಜ್ಞೆಯುಳ್ಳವಳು.

**೬೯೪. ಸಾಗರಮೇಖಲಾಯೈನಮಃ—**

ಸಮುದ್ರವನ್ನೇ ಸೊಂಟದ ಡಾಬನ್ನಾಗಿ ಮಾಡಿಕ್ಕೊಂಡು ಇರುವವಳು. ಅಂದರೆ ಭೂಮಿಗೆ ಸಮುದ್ರವು ಸೊಂಟದ ಡಾಬಿನಂತೆ ಇರುವುದು. ಆದುದ ರಿಂದ ಸಾಗರಮೇಖಲಾ ಎಂದರೆ ಭೂಮಾತೆಯು.

**೬೯೫. ದೀಕ್ಷಿತಾಯೈನಮಃ—**

ಸೋಮವುಳ್ಳ ಯಜ್ಞದಲ್ಲಿ ಕರ್ತನಾದವನು ದೀಕ್ಷಿತನೆನ್ನಲ್ಪಡುವನು. ಅಂದರೆ ಸೋಮಯಜ್ಞ ಮಾಡುವವನಿಗೆ ದೀಕ್ಷಿತನೆಂದು ಹೆಸರು. ಸೋಮ ವೆಂದರೆ ಅಮೃತ. ಆದುದರಿಂದ ಹಿಂದಿನ ನಾಮಕ್ಕೂ ಅನ್ವಯವಾಗುವ ತತ್ವವುಳ್ಳ ಸಮುದ್ರಮಥನರೂಪವಾದ ಯಜ್ಞಮಾಡಿ ಅದರಿಂದ ಅಮೃತವನ್ನು ಹೊಂದುವ ವಳು. ಅಮೃತೋತ್ಪತ್ತಿಮಾಡುವ ಕಾರ್ಯದ ದೀಕ್ಷಾಬದ್ಧಳಾಗಿರುವವಳು. ಈ ನಾಮದಲ್ಲಿ ಸಮುದ್ರಮಥನದ ಕಾರ್ಯವೆಲ್ಲಾ ಇರುವುದು.

**೬೯೬. ದೈತ್ಯಶಮನ್ಯೈನಮಃ—**

ಮೇಲಿನ ನಾಮದಲ್ಲಿ ತಿಳಿಸಿರುವ ಸಮುದ್ರಮಥನ ಕಾಲದಲ್ಲಿ ಅಮೃತವನ್ನು ಅಪಹರಿಸುತ್ತಿದ್ದ ರಾಕ್ಷಸರನ್ನು ಮೋಹಪಡಿಸಿ ಅಮೃತವನ್ನು ಹಿಂದಕ್ಕೆ ತಂದವ ಳಾದುದರಿಂದ ದೈತ್ಯರನ್ನು ನಾಶಮಾಡಿದವಳಾಗಿರುವಳು.

**೬೯೭. ಸರ್ವಲೋಕ ವಶಂಕರ್ಯೈನಮಃ—**

ಸಮುದ್ರಮಥನ ಕಾಲದಲ್ಲಿ ರಾಕ್ಷಸರಿಂದ ಅಮೃತವನ್ನು ಕಿತ್ತುಕ್ಕೊಂಡು ದೇವತೆಗಳಿಗೆ ಕೊಡಲು ಧರಿಸಿದ ಸರ್ವಲೋಕವನ್ನೂ ಮೋಹಪಡಿಸುವಂತಹ ಮೋಹಿನೀಸ್ವರೂಪಿಣಿಯಾಗಿರುವವಳು.

**೬೯೮. ಸರ್ವಾರ್ಥದಾತ್ರ್ಯೈನಮಃ—**

ಸಂಪತ್ತನ್ನೂ ಮೋಕ್ಷವನ್ನೂ ಅನುಗ್ರಹಿಸಿಕೊಡುವವಳು. ೬೮೪ ನೇ ನಾಮದಿಂದ ಇದುವರೆಗೂ ಶ್ರೀ ಲಕ್ಷ್ಮೀದೇವಿಯ ಮಹಿಮೆಯನ್ನು ತಿಳಿಸುವುದು. ಶ್ರೀ ಲಕ್ಷ್ಮೀದೇವಿಯೂ ಶ್ರೀ ಲಲಿತಾದೇವಿಯೂ ಭಿನ್ನರಲ್ಲ. ಒಬ್ಬಳೇ ಆಗಿರುವಳು.

**೬೯೯. ಸಾವಿತ್ರ್ಯೈನಮಃ—**

ಜಗತ್ ಸೃಷ್ಟಿಕರ್ತಳು. (೨) ಸ್ವಯಂಪ್ರಕಾಶವಾದ ಪರಬ್ರಹ್ಮಸ್ವರೂಪಿಣಿಯು. ತೇಜಸ್ಸಿಗೆ ಅಧಿದೇವತೆಯಾದ ಸೂರ್ಯಶಕ್ತಿರೂಪಿಣಿಯು. ಶ್ರೀಸಾವಿತ್ರಿಗೂ ಶ್ರೀ ಲಲಿತಾದೇವಿಗೂ ಭೇದವಿಲ್ಲ. ಒಬ್ಬಳೇ ಆಗಿರುತ್ತಾಳೆ.

**೭೦೦. ಸಚ್ಚಿದಾನಂದರೂಪಿಣ್ಯೈನಮಃ—**

ತೇಜಸ್ಸಿಗೆ ಅಧಿದೇವತೆಯಾಗಿ ಸೂರ್ಯರೂಪಿಣಿಯಲ್ಲಿರುವ ಸಾವಿತ್ರಿಯು ಸಚ್ಚಿದಾನಂದಸ್ವರೂಪವಾದ ಪರಬ್ರಹ್ಮಸ್ವರೂಪಿಣಿಯು. (ಸತ್ ಎಂದರೆ ತ್ರಿಕಾಲದಲ್ಲೂ ಯಾವ ಬಾಧೆಯೂ ಇಲ್ಲದೆ ಇರುವಿಕೆ. ಚಿತ್ ಎಂದರೆ ಜ್ಞಾನಸ್ವರೂಪ. ಆನಂದವೆಂದರೆ ದುಃಖ ಸಂಪರ್ಕವಿಲ್ಲದ ಸುಖ).

**೭೦೧. ದೇಶಕಾಲಾಪರಿಚ್ಛಿನ್ನಾಯೈನಮಃ—**

ಶ್ರೀ ಸಾವಿತ್ರೀದೇವಿಯು ದೇಶ ಮತ್ತು ಕಾಲಗಳ ಅಳತೆಗೆ ಸಿಕ್ಕತಕ್ಕವಳಲ್ಲ.

**೭೦೨. ಸರ್ವಗಾಯೈನಮಃ—**

ಶ್ರೀ ಸಾವಿತ್ರೀದೇವಿಯು ಸರ್ವವ್ಯಾಪಕಳು ಮತ್ತು ಸರ್ವವಸ್ತುಗಳಲ್ಲೂ ಸತ್ತಾರೂಪವಾಗಿರುವವಳು.

**೭೦೩. ಸರ್ವಮೋಹಿನ್ಯೈನಮಃ—**

ಶ್ರೀ ಸಾವಿತ್ರಿಯು ತನ್ನ ತೇಜಸ್ಸಿನಿಂದ ಸರ್ವವನ್ನೂ ಆಕರ್ಷಿಸುವವಳು. ಅಂದರೆ ಸವಿತೃಸ್ವರೂಪವಾದ ಸೂರ್ಯತೇಜಸ್ಸನ್ನು ಚರಾಚರ ರೂಪವಾದ ಜಗತ್ತೇ ಮೋಹಿಸುವುದೆಂಬ ಅಭಿಪ್ರಾಯವಾಗಿದೆ.

೬೯೯ ನೇ ನಾಮದಿಂದ ಇದುವರಿಗೆ ಶ್ರೀ ಸಾವಿತ್ರೀ ಮಹಿಮೆಯನ್ನು ಪ್ರತಿಪಾದಿಸುವುದು.

**೭೦೪. ಸರಸ್ವತ್ಯೈನಮಃ—**

ಓಂಕಾರಸ್ವರೂಪವಾದ ಪರಬ್ರಹ್ಮಸ್ವರೂಪಿಣಿಯು. ಸೃಷ್ಟಿಗೋಸ್ಕರ ಓಂಕಾರದ

ಕಳಾ ಮತ್ತು ನಾದರೂಪವಾಗಿ ತನ್ನಿಂದ ತಾನೇ ಆವಿರ್ಭವಿಸಿ ಹೊರಕ್ಕೆ ಹರಿದು ಬರುವವಳಾದ್ದರಿಂದ ಸರಸ್ವತೀ ಎನಿಸಿಕೊಂಡಿರುವವಳು. ಸೃಷ್ಟಿ, ಸ್ಥಿತಿ ಮತ್ತು ಲಯಕಾರ್ಯಗಳ ಜ್ಞಾನಕ್ಕೆ ಅಧಿದೇವತೆಯು. ವಿದ್ಯಾ ಮತ್ತು ನಾದಕ್ಕೆ ಅಭಿಮಾನಿದೇವತೆಯು. ಶ್ರೀ ಲಲಿತಾದೇವಿಯೇ ಶ್ರೀ ಸರಸ್ವತೀದೇವಿಯು.

**೭೦೫. ಶಾಸ್ತ್ರಮಯ್ಯೈನಮಃ—**

ಶ್ರೀ ಸರಸ್ವತೀ ದೇವಿಯು ಶಬ್ದ ಮತ್ತು ಅರ್ಥವೆಂದರೆ ಜ್ಞಾನಪ್ರತಿಪಾದಕವಾದ ಸಂಹಿತಾ, ಬ್ರಾಹ್ಮಣ, ಉಪನಿಷತ್ ಸ್ವರೂಪವಾದ ವೇದಗಳ ಮತ್ತು ಪುರಾಣವೇ ಮೊದಲಾದ ಎಲ್ಲಾ ಶಾಸ್ತ್ರಗಳ ಸ್ವರೂಪಿಣಿಯು. (೨) ಬ್ರಹ್ಮಾಂಡದ ಸೃಷ್ಟಿ, ಸ್ಥಿತಿ, ಲಯದ ಕಾರ್ಯಗಳ ಸಕಲ ವಿಚಾರ ಜ್ಞಾನವೂ ಶ್ರೀ ಸರಸ್ವತೀ ದೇವಿಯ ಹಸ್ತದಲ್ಲಿರುವ ಪುಸ್ತಕದಲ್ಲೇ ಇರುವುದರಿಂದ ಜಗತ್ತಿನ ಸಕಲ ವಿದ್ಯಾ ಭಂಡಾರವೂ ಅವಳೇ ಆಗಿರುತ್ತಾಳೆ. ಆದುದರಿಂದ ಶ್ರೀ ಸರಸ್ವತೀದೇವಿಯು ಶಾಸ್ತ್ರಮಯಿ.

**೭೦೬. ಗುಹಾಂಬಾಯೈನಮಃ—**

ಶ್ರೀ ಕುಮಾರಸ್ವಾಮಿಗೆ (ಸುಬ್ರಹ್ಮಣ್ಯೇಶ್ವರನಿಗೆ) ಜನನಿಯು. ತಾರಕಾಸುರನನ್ನು ಸಂಹರಿಸಲು ಶ್ರೀ ಕುಮಾರಸ್ವಾಮಿಯ ಅವತಾರವಾಗಿರುವುದು. "ತಮೋನಾಶಯತೀತಿ ತಾರಃ" ಎಂಬ ಅರ್ಥದಂತೆ ತಾರಕಾಸುರನ ತತ್ವದಲ್ಲಿರುವ ಅಜ್ಞಾನವನ್ನು ಹೋಗಲಾಡಿಸಲು ಷಣ್ಮುಖೀಮುದ್ರೆಯಿಂದ ಸಮಾಧಿಯ ಅಭ್ಯಾಸಮಾಡುವುದೇ ಷಣ್ಮುಖಸ್ವಾಮಿಯು ತಾರಕಾಸುರನನ್ನು ನಿಗ್ರಹಿಸಿದ ತತ್ವವಾಗಿದೆ. ಈ ಷಣ್ಮುಖೀಮುದ್ರೆಯೇ ತಾರಕೋಪದೇಶದ ತತ್ವ. ಈ ಷಣ್ಮುಖೀ ಮುದ್ರೆಯೇ ತೇಜೋನಾದಧ್ಯಾನದ ಸೋಪಾನವೆನಿಸಿ ಅಧಿಕಾರಿಯು ಅಂತರ್ಮುಖದಲ್ಲಿ ಆನಂದಪರವಶವಾದ ಓಂಕಾರನಾದಾನುಸಂಧಾನವನ್ನು ಮಾಡುತ್ತಾ ನಾದಕ್ಕೂ ಅತೀತವಾದ ಪರಬ್ರಹ್ಮ ಸ್ವರೂಪಿಣಿಯಾದ ಶ್ರೀದೇವಿಯನ್ನು ಹೊಂದುವನು. ಆದುದರಿಂದ ಶ್ರೀದೇವಿಯು ನಾದಕ್ಕೂ ಅತೀತವಾಗಿ ಗೋಪ್ಯವಾಗಿರುವವಳಾದುದರಿಂದ ಗುಹಾಂಬಾ ಎನಿಸಿಕೊಂಡಿರುವಳು ಮತ್ತು ಶ್ರೀ ಕುಮಾರಸ್ವಾಮಿಗೂ ಜನನಿಯಾಗಿರುವಳು. ಈ ತತ್ವಸಮರ್ಥನೆಗೆ " ಯೋವೇದನಿಹಿತಂ ಗುಹಾಯಾಂ ಪರಮೇವ್ಯೋಮನ್ " ಎಂಬ ಶ್ರುತ್ಯಾಧಾರವಿರುವುದು.

**೭೦೭. ಗುಹ್ಯರೂಪಿಣ್ಯೈನಮಃ—**

ಶ್ರೀ ಸರಸ್ವತೀದೇವಿಯು ಬಹು ಗೋಪ್ಯರೂಪವಾಗಿರುವವಳು. ಇಂದ್ರಿಯಗಳಿಗೆ ಸಿಲುಕದ ಪರಬ್ರಹ್ಮಸ್ವರೂಪಿಣಿಯಾದುದರಿಂದ ಶ್ರೀ ದೇವಿಯು ಗೋಪ್ಯ

ರೂಪವುಳ್ಳವಳಾಗಿರುವಳು. ಅಲ್ಲದೆ ಶಾಸ್ತ್ರಗಳಲ್ಲಿರುವ ಶಬ್ದಗಳಿಗೆ ಸ್ಥೂಲವಾದ ಶಬ್ದಾರ್ಥವಲ್ಲದೆ ಗೋಪ್ಯವಾದ ಅರ್ಥಗಳಿವೆ. ಶ್ರೀದೇವಿಯ ಅನುಗ್ರಹವಿಲ್ಲದೆ ಗೋಪ್ಯವಾದ ಭಾವಾರ್ಥಗಳು ಸ್ಫುರಣೆಯಾಗುವುದಿಲ್ಲವಾದುದರಿಂದ ವಿದ್ಯಾಸ್ವರೂಪಿಣಿಯಾದ ಶ್ರೀದೇವಿಯು ಗೋಪ್ಯಸ್ವರೂಪಿಣಿಯು. ಅಲ್ಲದೆ ಷಣ್ಮುಖೀಮುದ್ರೆಯಿಂದ ಅಂತರ್ಮುಖದಲ್ಲಿ ಕೇಳುವ ಓಂಕಾರನಾದವೂ ಇದರ ಅಂತರ್ಗತವಾಗಿರುವ ಕಳೆಯೂ ಅನಾಹತವೆನಿಸಿ ಗೋಪ್ಯವಾದುದು. ನಾವು ಹೊರಗೆ ಕೇಳುವ ಶಬ್ದಗಳೆಲ್ಲಾ ಆಹತವೆಂದರೆ ಒಂದು ವಸ್ತುವಿನೊಡನೆ ಮತ್ತೊಂದು ವಸ್ತುವು ಕಲೆತು ಉಂಟಾಗುವ ಶಬ್ದವಾಗಿದೆ. ಅನಾಹತನಾದವು ಆಕಾಶಾಂತರ್ಗತವಾದುದು. ಇದನ್ನು ಒಳಗಡೆ ಇರುವ ಜ್ಞಾನಶ್ರೋತ್ರದಿಂದ ಕೇಳತಕ್ಕದ್ದಾಗಿದೆ. ಹೊರಗಿನ ಇಂಪಾದ ನಾದಗಳಲ್ಲೇ ಬಹು ಆನಂದವಿರುವಾಗ ಓಂಕಾರನಾದದ ಆನಂದವನ್ನು ವರ್ಣಿಸಲು ಸಾಧ್ಯವೇ ಇಲ್ಲ. ನಾವು ಹೊರಗೆ ಕೇಳುವ ಶಬ್ದಗಳು ಆಕಾಶಾಂತರ್ಗತವಾದ ಕಳೆಯಿಂದ ಉತ್ಪತ್ತಿಯಾಗಿ ಪುನಃ ಅಲ್ಲೇ ಲಯವನ್ನು ಪಡೆಯುವುವು. ಆಕಾಶಾಂತರ್ಗತವಾಗಿರುವ ಓಂಕಾರನಾದ ಕಳೆಗಳನ್ನು ಕೇಳಲು ಸಾಧಾರಣರಿಗೆ ಸಾಧ್ಯವಿಲ್ಲವಾದುದರಿಂದ ನಾದಬ್ರಹ್ಮಸ್ವರೂಪಿಣಿಯಾದ ಶ್ರೀ ಸರಸ್ವತೀದೇವಿಯು ಗೋಪ್ಯಸ್ವರೂಪಿಣಿಯು. ಈಗಿನ ಕಾಲದಲ್ಲಿ ರೇಡಿಯೋ ಯಂತ್ರದ ಮೂಲಕ ಸಾವಿರಾರು ಮೈಲಿಗಳ ದೂರದಲ್ಲಿ ಉಚ್ಚರಿಸುವ ಶಬ್ದವನ್ನು ನಾವು ಕೇಳಿದರೂ ಆಕಾಶಾಂತರ್ಗತವಾಗಿ ಸ್ವಾಭಾವಿಕವಾಗಿರುವ ಓಂಕಾರನಾದವನ್ನು ಯಾವ ಯಂತ್ರದಿಂದಲೂ ಕೇಳಲು ಸಾಧ್ಯವಿಲ್ಲ. ಈ ಗೋಪ್ಯವಾದ ಓಂಕಾರನಾದಕ್ಕೆ ಅಭಿಮಾನಿಯಾಗಿ ಷಣ್ಮುಖಸ್ವಾಮಿಯು ಇರುವ ತತ್ವವನ್ನನುಸರಿಸಿ ಇವನಿಗೆ ಗುಹನೆಂದು ಹೆಸರು ಬಂದಿದೆ.

### ೭೦೮. ಸರ್ವೋಪಾಧಿ ವಿನಿರ್ಮುಕ್ತಾಯೈನಮಃ—

ಶ್ರೀ ಸರಸ್ವತೀದೇವಿಯು ಸರ್ವಉಪಾಧಿಗಳೆಂದರೆ ಸಕಲ ವಿಧವಾದ ನಿಮಿತ್ತಗಳಿಂದಲೂ ತೊಂದರೆಗಳಿಂದಲೂ ಬಿಡಲ್ಪಟ್ಟಿರುವವಳು. ಅಂದರೆ ಪರಬ್ರಹ್ಮವೇ ನಾನೆಂಬ ವಿದ್ಯೆಯಿಂದ ಷಣ್ಮುಖೀಮುದ್ರೆಯಲ್ಲಿ ಗೋಚರವಾಗುವ ನಾದಾನುಸಂಧಾನದಿಂದ ಸಕಲ ಅಜ್ಞಾನದ ತೊಂದರೆಗಳೂ ತೊಲಗಿ ಪರಬ್ರಹ್ಮಸಾಕ್ಷಾತ್ಕಾರವಾಗುವುದೆಂಬ ತತ್ವವು.

### ೭೦೯. ಸದಾಶಿವ ಪತಿವ್ರತಾಯೈನಮಃ—

ನಾದ ಮತ್ತು ವಿದ್ಯಾಸ್ವರೂಪಿಣಿಯಾದ ಶ್ರೀ ಸರಸ್ವತೀದೇವಿಯು ಪತಿಯಾದ ಸದಾಶಿವನೆಂದರೆ ಪರಬ್ರಹ್ಮನನ್ನೇ ಅನುವರ್ತಿಸಿಕೊಂಡಿರುವವಳು. ಅಂದರೆ ವಿದ್ಯೆಯು ಪರಬ್ರಹ್ಮತ್ವಕ್ಕೆಂದರೆ ಮೋಕ್ಷಕ್ಕೆ ಅನುಸಾರವಾಗಿದ್ದರೆ ವಿದ್ಯೆ

ಯೆನಿಸಿಕೊಳ್ಳುವುದೇ ವಿನಹ ಇತರ ವಿದ್ಯೆಗಳು ವಿದ್ಯೆಗಳೆನಿಸಿಕೊಳ್ಳುವುದಿಲ್ಲ. ಅಲ್ಲದೆ ಷಣ್ಮುಖೀಮುದ್ರೆಯಿಂದ ಕೇಳುವ ಓಂಕಾರನಾದವು ಪರಬ್ರಹ್ಮನನ್ನು ಅನುವರ್ತಿಸಿಕೊಂಡು ಹೋಗಿ ಪರಬ್ರಹ್ಮತ್ವವನ್ನೇ ಕೊಡುವುದಾದುದರಿಂದ ನಾದಬ್ರಹ್ಮಸ್ವರೂಪಿಣಿಯಾದ ಶ್ರೀದೇವಿಯು ಸದಾಶಿವ ಪತಿವ್ರತಾಸ್ವರೂಪಿಣಿ ಯಾಗಿರುವಳು.

### ೭೧೦. ಸಂಪ್ರದಾಯೇಶ್ವರ್ಯೈನಮಃ—

ಶ್ರೀ ಸರಸ್ವತೀದೇವಿಯು ಅನೂಚಾನವಾಗಿ ಬಂದ ಮೋಕ್ಷದ ಗುರಿಗನು ಸಾರವಾದ ಆಚರಣೆಗಳಿಗೆ ಒಡೆಯಳು. ಅಂದರೆ ಧರ್ಮ, ಅರ್ಥ, ಕಾಮ, ಮೋಕ್ಷಗಳ ದಾರಿಗಳು ಶಾಸ್ತ್ರಗಳಿಂದ ವಿಧಿಸಲ್ಪಟ್ಟು ಅನೂಚಾನವಾಗಿ ಆಚರಣೆ ಯಲ್ಲಿರುವುವೋ ಅಂತಹವುಗಳನ್ನು ಗ್ರಹಿಸಬೇಕಲ್ಲದೆ ಹೊಸ ಸಿದ್ಧಾಂತಗಳನ್ನು ಗ್ರಹಿಸಬಾರದು. ಆದುದರಿಂದ ಸನಾತನವಾಗಿ ಬಂದ ಸತ್ಸಂಪ್ರದಾಯಗಳನ್ನು ಅನುಗ್ರಹಿಸುವವಳು.

### ೭೧೧. ಸಾಧುವೇನಮಃ—

ಶ್ರೀ ಸರಸ್ವತೀದೇವಿಯು ಕೊಂಚವೂ ಕಠಿಣತ್ವವಿಲ್ಲದೆ ಬಹು ಸೌಮ್ಯವಾದ ಮೂರ್ತಿಯು. ವಿದ್ಯೆಯನ್ನು ಕಲಿತಿರುವುದಕ್ಕೆ ಗುರುತೇನೆಂದರೆ, ವಿನಯ, ಸಾಧುತನ, ಸಂತುಷ್ಟಿ ಮುಂತಾದ ದೈವೀಸಂಪತ್ತುಗಳಿದ್ದರೇನೆ ವಿದ್ಯೆಯೆನಿಸಿ ಕೊಳ್ಳುವುದು. ಅಲ್ಲದೆ ಷಣ್ಮುಖೀಮುದ್ರೆಯಿಂದ ಅಭ್ಯಾಸಮಾಡುವ ಓಂಕಾರ ನಾದಾನುಸಂಧಾನವೂ ಬ್ರಹ್ಮಾನಂದವನ್ನುಂಟುಮಾಡುವುದರಿಂದ ಸಾಧಕನು ಸಾಧುವೆನಿಸುವನು. ಆದುದರಿಂದ ಶ್ರೀ ಸರಸ್ವತೀದೇವಿಯು ಸೌಮ್ಯವಾದ ಮೂರ್ತಿಯು.

### ೭೧೨. ಯ್ಯೈನಮಃ—

ಈ + ನಮಃ = ಯ್ಯೈನಮಃ ಎಂದಾಗಿರುವುದು ಶ್ರೀದೇವಿಯು ಈ ಎಂಬ ಒಂದು ಅಕ್ಷರಸ್ವರೂಪಿಣಿಯು. ಈ ಎಂಬ ಅಕ್ಷರವು ಹ್ರೀಂ ಬೀಜಾಕ್ಷರದಲ್ಲಿ (ಹ +ರ+ಈ+ ೦) ಪರಬ್ರಹ್ಮದ ಸೃಷ್ಟಿ, ಸ್ಥಿತಿ, ಲಯಗಳ ಸಂಕಲ್ಪಸ್ವರೂಪ ವಾಗಿಯೂ, ಶ್ರೀಲಲಿತಾ ಮಂತ್ರದಲ್ಲಿ ಈಶ್ವರಸೋಪಾನದಲ್ಲಿ ಮನ್ಮಥಕಳೆ ಯಾಗಿಯೂ ಇರುವುದು. ಇದರ ವಿವರವನ್ನು ಶ್ರೀಲಲಿತಾಮಂತ್ರದ ರಹ ಸ್ಯಾರ್ಥದಲ್ಲಿ ಬರೆದಿರುವುದನ್ನು ಪಠಿಸಿ ತಿಳಿದುಕೊಳ್ಳಬಹುದು. ಅಂದರೆ ಶ್ರೀ ಸರಸ್ವತೀದೇವಿಯು ಸೃಷ್ಟಿ, ಸ್ಥಿತಿ ಮತ್ತು ಮೋಕ್ಷದ ಸಂಕಲ್ಪಸ್ವರೂಪಿಣಿಯು.

**೭೧೩. ಗುರುಮಣ್ಡಲರೂಪಿಣ್ಯೈನಮಃ—**

"ನಾರಾಯಣ ಸಮಾರಂಭಾಂ ಶಂಕರಾಚಾರ್ಯ ಮಧ್ಯಮಾಂ | ಅಸ್ಮದಾಚಾರ್ಯಪರ್ಯಂತಾಂ ವಂದೇ ಗುರು ಪರಂಪರಾಂ ||" ಎಂಬ ವಚನದಂತೆ ಶ್ರೀಮನ್ನಾರಾಯಣ ಮೊದಲುಗೊಂಡು ನಮಗೆ ಉಪದೇಶಮಾಡಿದ ಗುರುಗಳ ವರೆಗಿನ ಪರಂಪರೆಗಳಿಗೆ ಮಂಡಲವೆಂದು ಹೆಸರು. ಶ್ರೀ ಸರಸ್ವತಿಯು ಇಂತಹ ಸಕಲ ಗುರುಗಳ ರೂಪವಾಗಿ ಇರುವವಳು. ಅಲ್ಲದೆ ವಿದ್ಯೆಗೂ ನಾದಕ್ಕೂ ಅಧಿದೇವತೆಯಾಗಿ ಮಾತೆಯು ಸ್ವರೂಪವಾಗಿರುವ ಶ್ರೀ ಸರಸ್ವತೀದೇವಿಗಿಂತ ಹೆಚ್ಚಿನ ಬೇರೆ ಗುರುವಿಲ್ಲವಾದುದರಿಂದ ಗುರುಮಣ್ಡಲರೂಪಿಣಿ ಎನಿಸುವಳು.

**೭೧೪. ಕುಲೋತ್ತೀರ್ಣಾಯೈನಮಃ—**

ಕುಲ ಎಂದರೆ ಪ್ರಪಂಚವೆಂಬ ಅರ್ಥವೆಂದು ಹಿಂದೆಯೇ ತಿಳಿಸಿರುತ್ತದಷ್ಟೆ! ಶ್ರೀ ಸರಸ್ವತೀದೇವಿಯು ಪ್ರಪಂಚಮಾರ್ಗದಲ್ಲಿರುವವರನ್ನು ಆ ಮಾರ್ಗದಿಂದ ತಪ್ಪಿಸಿ ಉದ್ಧಾರಮಾಡುವವಳು. ಹೀಗೆ ಉದ್ಧಾರಮಾಡುವ ಗುರುಸ್ವರೂಪಳೆಂದು ಪ್ರತಿಪಾದನೆ ಮಾಡುವುದಕ್ಕೋಸ್ಕರಲೇ ಹಿಂದಿನ ನಾಮದಲ್ಲಿ ಗುರುಮಣ್ಡಲ ರೂಪಿಣೀ ಎಂದು ಬಂದಿರುವುದು. (ಅಂತರ್ಭಾವಿತ ನಿಜಾರ್ಥ).

**೭೧೫. ಭಗಾರಾಧ್ಯಾಯೈನಮಃ—**

ಶ್ರೀ ಸರಸ್ವತೀದೇವಿಯು ಸೂರ್ಯನಿಂದ ಅರ್ಚಿಸಲ್ಪಡುವವಳು. (೨) ಶ್ರೀ ಸರಸ್ವತೀದೇವಿಯು ಸೂರ್ಯಾಂತರ್ಗತವಾಗಿರುವುದರಿಂದ ಸೂರ್ಯನ ಮೂಲಕವಾಗಿ ನಮ್ಮಗಳಿಂದ ಅರ್ಚಿಸಲ್ಪಡುವವಳು. ಹೇಗೆಂದರೆ ಓಂಕಾರನಾದವು ನಮ್ಮಲ್ಲಿರುವ ಸೂರ್ಯತೇಜಸ್ಸಿನ ಅಂತರ್ಗತವಾಗಿರುವುದರಿಂದ ತೇಜೋನಾದ ವಿದ್ಯಾಸೋಪಾನವೆನಿಸಿ ಪೂಜಾರ್ಹವಾದುದು. (೩) ಭಗವೆಂದರೆ ಶಕ್ತಿಯೆಂದರ್ಥವಾಗುವುದರಿಂದ ಐಂ ಶಕ್ತಿ ಬೀಜಮಂತ್ರದಿಂದ ಆರಾಧಿಸಲ್ಪಡುವವಳು.

**೭೧೬. ಮಾಯಾಯೈನಮಃ—**

ಶ್ರೀ ಸರಸ್ವತೀದೇವಿಯು "ಶುದ್ಧಸತ್ವಪ್ರಧಾನ ಮಾಯಾ" ಎಂದರೆ ಶುದ್ಧ ಸತ್ವಗುಣ ಅಥವಾ ಕಳಾಸ್ವರೂಪವಾಗಿರುವವಳು. ಮಾಯಾ ಎಂದರೆ ಜ್ಞಾನವೆಂದು ಯಾಸ್ಕರು ನಿರುಕ್ತದಲ್ಲಿ ಬರೆದಿರುವರು. ಇಲ್ಲಿ ಮಾಯಾ ಎಂದರೆ ಅಜ್ಞಾನವಲ್ಲ. ರಜಸ್ತಮೋಗುಣಗಳೊಡನೆ ಬೆರೆಯದೇ ಇರುವ ಶುದ್ಧಸತ್ವವೆನಿಸುವ ದೇವತಾತ್ಮಕವಾದ ಜ್ಞಾನ.

**೨೧೭. ಮಧುಮತ್ಯೈನಮಃ—**

ಶ್ರೀ ಸರಸ್ವತೀದೇವಿಯು ಅಮೃತವುಳ್ಳವಳು ಮತ್ತು ಆನಂದಸ್ವರೂಪಳು. ಅನೇಕ ಹುವ್ವುಗಳಲ್ಲಿ ಸಾರವಾಗಿರುವುದೇ ಮಕರಂದ. ಈಮಕರಂದಗಳೆಲ್ಲಾ ಸೇರಿರುವುದೇ ಮಧು. ಇದರಂತೆ ವಿದ್ಯಾನಂದ, ಯೋಗಾನಂದ ಮುಂತಾದ ಅನೇಕ ವಿಧವಾದ ಆನಂದಗಳು ಸೇರಿ ಅವುಗಳಿಗೆ ಮೂಲರೂಪವಾದ ಬ್ರಹ್ಮಾನಂದಸ್ವರೂಪಿಣಿಯು.

೨೦೪ ನೇ ನಾಮದಿಂದ ಇದುವರೆಗೂ ಶ್ರೀ ಸರಸ್ವತೀದೇವಿಯ ಮಹಿಮಾ ಪ್ರತಿಪಾದಕವಾಗಿರುವುದು.

**೨೧೮. ಮಹ್ಯೈನಮಃ—**

ಮಹೀ ಎಂದರೆ ಭೂಮಿ. ಭೂಮಾತೆಯ ಸ್ವರೂಪದಲ್ಲಿರುವವಳು. ಶ್ರೀ ಲಲಿತಾದೇವಿಯೇ ಭೂದೇವಿಯು.

**೨೧೯. ಗಣಾಂಬಾಯೈನಮಃ—**

ಭೂದೇವಿಯು ಭೂಲೋಕದ ಸಮಸ್ತ ಪ್ರಾಣಿಗಳ ಸಮೂಹಕ್ಕೂ ಜನನಿಯು.

**೨೨೦. ಗುಹ್ಯಕಾರಾಧ್ಯಾಯೈನಮಃ—**

ಭೂಮಿಯಲ್ಲಿ ಗುಟ್ಟಾಗಿರುವ ಚಿನ್ನ, ಬೆಳ್ಳಿ ಮೊದಲಾದ ಅನೇಕ ವಿಧವಾದ ಖನಿಜ ಸಂಪತ್ತುಗಳಿವೆ. ಈ ಖನಿಜಸಂಪತ್ತುಗಳನ್ನು ಕಾಪಾಡಿಕೊಂಡಿರುವ ಅಭಿಮಾನಿದೇವತಾಶಕ್ತಿಗಳಿಗೆ ಗುಹ್ಯಕರೆಂದು ಅಮರದ ವ್ಯಾಖ್ಯಾನದಲ್ಲಿ ಹೇಳಿದೆ. ಆದುದರಿಂದ ಇಂತಹ ಖನಿಜಸಂಪತ್ತುಗಳ ಅಭಿಮಾನಿಶಕ್ತಿಗಳಿಂದ ಪೂಜಿಸಲ್ಪಡುವವಳು. ಭೂಮಾತೆಯು.

**೨೨೧. ಕೋಮಲಾಂಗ್ಯೈನಮಃ—**

ಭೂಮಾತೆಯು ಕೊಮಲವಾದ ದೇಹವುಳ್ಳವಳು.

**೨೨೨. ಗುರುಪ್ರಿಯಾಯೈನಮಃ—**

ಭೂದೇವಿಯು ಭಾರವಾದ ವಸ್ತುಗಳಲ್ಲಿ ಪ್ರಿಯಳು. ಇಲ್ಲಿ ಗುರು ಎಂದರೆ ಭಾರವೆಂದು ಅರ್ಥ. ಭೂಮಿಯು ಭಾರವಾದ ವಸ್ತು. ಭೂ ತತ್ವದ ಅಭಿಮಾನಿ ದೇವತೆಯಾದ ಭೂ ಮಾತೆಗೆ ಭಾರವಾದದ್ದು ಪ್ರಿಯವಾಗಿರುವುದು ಸ್ವಾಭಾವಿಕವು.

**೭೨೩. ಸ್ವತಂತ್ರಾಯೈನಮಃ—**

ಭೂದೇವಿಯು ಸಾಕ್ಷಾತ್ ಪರಬ್ರಹ್ಮಸ್ವರೂಪಿಣಿಯೇ ಆಗಿರುವುದರಿಂದ ಮತ್ತೊಬ್ಬರಿಗೆ ಅಧೀನಳಲ್ಲ ತಂತ್ರವೆಂದರೆ ತನು-ವಿಸ್ತಾರೆ ಎಂಬ ಅರ್ಥದಂತೆ ಸ್ವ ಎಂದರೆ ಪರಬ್ರಹ್ಮವೇ ವಿಸ್ತಾರವಾಗಿ ಭೂಸ್ವರೂಪವಾಗಿರುವುದೆಂಬ ಅರ್ಥ ವಾಗಿರುವುದು. ತಂತ್ರ ಎಂದರೆ ತತ್ರಿ-ಧಾರಿಣೆ ಎಂಬ ಅರ್ಥದಂತೆ ಸ್ವ-ತನ್ನನ್ನು ತಾನೇ ಧರಿಸಿರುವಳು. ಅಂದರೆ ಸರ್ವವ್ಯಾಪಕವಾದ ಬ್ರಹ್ಮವೇ ತನ್ನನ್ನೆಂದರೆ ಭೂಮಿಯನ್ನು ಧರಿಸಿರುವುದರಿಂದ ಭೂದೇವಿಯು ಸ್ವತಂತ್ರಳು.

**೭೨೪. ಸರ್ವತಂತ್ರೇಶ್ಯೈನಮಃ—**

ಭೂದೇವಿಯು ಸರ್ವಲೋಕಗಳನ್ನೂ ಧರಿಸಿರುವ ಯಜಮಾನಿಯು. ಇಲ್ಲಿ ತಂತ್ರವೆಂದರೆ ಧರಿಸುವುದೆಂದು ಅರ್ಥ. ಇದಕ್ಕೆ "ಪೃಥ್ವೀತ್ವಯಾ ಧೃತಾಲೋಕಾಃ" ಎಂಬ ಆಧಾರವಾಕ್ಯವೂ ಇರುವುದು. ಅಲ್ಲದೆ ಲೋಕಗಳಲ್ಲಿನ ಕ್ರಿಯಾ ಅಂದರೆ ಪ್ರಾಣಿಗಳ ವಿಸ್ತಾರವಾದ ಕರ್ಮಗಳಿಗೆಲ್ಲಾ ಭೂದೇವಿಯು ನಾಥಳು. ಇಲ್ಲಿ ತಂತ್ರ ವೆಂದರೆ ತನು-ವಿಸ್ತಾರೆ ಎಂಬ ಅರ್ಥದಂತೆ ಕ್ರಿಯೆಯೆ ವಿಸ್ತಾರವಾಗಿರುವುದು. ಈ ತತ್ವಸಮರ್ಥನೆಗೆ ೨೦೭ ನೇ ನಾಮದ ವಿವರವನ್ನು ನೋಡುವುದು. ವಾಮಕೇಶ್ವ ರಾದಿ ೬೪ ತಂತ್ರಗಳನ್ನೇ ಸರ್ವತಂತ್ರವೆನ್ನುವುದಕ್ಕೆ ಅರ್ಥವೆಂದು ಭಾಸ್ಕರರಾಯರು ಬರೆದಿರುತ್ತಾರೆ. ಅದು ಇಲ್ಲಿಗೆ ಅನ್ವಯವಾಗುವುದೇ ಇಲ್ಲ.

೭೧೮ ನಾಮದಿಂದ ಇದುವರೆಗೂ ಭೂದೇವಿಯ ಮಹಿಮೆಯನ್ನು ಪ್ರತಿ ಪಾದಿಸುವುದು. ಈ ಭೂಮಾತೆಯ ತತ್ವಗಳು ನಮ್ಮಲ್ಲಿರುವ ಶ್ರೀಕುಂಡಲಿನೀ ಶಕ್ತಿಗೂ ಬ್ರಹ್ಮಾಂಡ ಪಿಂಡಾಂಡಗಳಂತೆ ಅನ್ವಯವಾಗುವುದು.

**೭೨೫. ದಕ್ಷಿಣಾಮೂರ್ತಿರೂಪಿಣ್ಯೈನಮಃ—**

ಶ್ರೀದಕ್ಷಿಣಾಮೂರ್ತಿಸ್ವರೂಪಿಣಿಯಾಗಿರುವವಳು. ಸನಕಸನಂದನಾದಿ ಮಹರ್ಷಿಗಳು ಬ್ರಹ್ಮಸಾಕ್ಷಾತ್ಕಾರದಸ್ವರೂಪದ ನಿಶ್ಚಯವನ್ನು ತಿಳಿದುಕೊಳ್ಳಲಾರದೆ ಸಂಶಯವನ್ನು ಹೊಂದಿ ಪರಮೇಶ್ವರನನ್ನು ಪ್ರಾರ್ಥಿಸಲು ಈಶ್ವರನು ವಟವೃಕ್ಷದ ಬುಡದಲ್ಲಿ ದಕ್ಷಿಣಾಭಿಮುಖವಾಗಿ ಹದಿನಾರು ವಯಸ್ಸಿನ ಯುವಕನಾಗಿ ತುರೀ ಯಾನುಭವದ ಸಮಾಧಿಸ್ಥಿತನಾಗಿ ಸನಕಾದಿ ಮಹರ್ಷಿಗಳಿಗೆ ಗುರುಸ್ವರೂಪನಾಗಿ ದರ್ಶನವನ್ನು ದಯಪಾಲಿಸಿದನು. ಬ್ರಹ್ಮಸಾಕ್ಷಾತ್ಕಾರರೂಪವಾದ ಸಮಾಧಿಯ ಸ್ವರೂಪವಾದ ಚಿನ್ಮುದ್ರೆಯಿಂದ ಶಿಷ್ಯರುಗಳಿಗೆ ದರ್ಶನವನ್ನು ದಯಪಾಲಿಸಿದ ಕೂಡಲೆ ಶಿಷ್ಯರಲ್ಲಿದ್ದ ಸಂಶಯವೆಲ್ಲಾ ಪರಿಹಾರವಾಗಿ ಬ್ರಹ್ಮಜ್ಞಾನೋದಯ ವಾಯಿತು. ಪರಾಶಕ್ತಿಯಾದ ಶ್ರೀಲಲಿತಾದೇವಿಯೇ ಸರ್ವಲೋಕಕ್ಕೂ ಗುರುವಾದ

ಶ್ರೀ ದಕ್ಷಿಣಾಮೂರ್ತಿ ಸ್ವರೂಪಿಣಿಯಾಗಿರುವಳು. ಶ್ರೀ ದಕ್ಷಿಣಾಮೂರ್ತಿಯ ಅವತಾರದ ತತ್ವವು ನಮ್ಮಲ್ಲೂ ಜೀವನ್ಮುಕ್ತನ ಸ್ವರೂಪಕ್ಕೆ ಅನ್ವಯವಾಗುವುದು. ಜೀವನ್ಮುಕ್ತಸ್ಥಿತಿಯನ್ನು ಪಡೆಯುವ ಮಾರ್ಗಕ್ಕೆ ಉತ್ತರ ಮಾರ್ಗವೆಂದು ಹೆಸರು. ಇದಕ್ಕೆ "ಅಥೋತ್ತರೇಣ ತಪಸಾ" ಎಂಬ ಶ್ರುತ್ಯಾಧಾರವಿದೆ. ಆದುದರಿಂದ ಜೀವನ್ಮುಕ್ತನಾಗುವವರೆಗೆ ಉತ್ತರದ ಮುಖ. ಜೀವನ್ಮುಕ್ತನಾದವನಿಗೆ ದಕ್ಷಿಣದ ಮುಖ. ಪರಮೇಶ್ವರನು ಸ್ವತಃ ಜೀವನ್ಮುಕ್ತನೇ ಆದುದರಿಂದ ದಕ್ಷಿಣಾಭಿಮುಖವಾಗಿದ್ದು ಉತ್ತರಾಭಿಮುಖವಾಗಿ ಹೋಗುವವರಿಗೆಂದರೆ ಮೋಕ್ಷಮಾರ್ಗಾವಲಂಬಿಗಳಿಗೆ ಅನುಗ್ರಹಿಸುವನು.

**೭೨೬. ಸನಕಾದಿಸಮಾರಾಧ್ಯಾಯೈನಮಃ—**

ಸನಕಾದಿ ಮಹರ್ಷಿಗಳಿಂದ ಪೂಜಿಸಲ್ಪಡುವವಳು. ದಕ್ಷಿಣಾಮೂರ್ತ್ಯವತಾರವಾಗಿದ್ದಾಗ ಸನಕಾದಿ ಮಹರ್ಷಿಗಳು ಸೇವೆಮಾಡುತ್ತಿದ್ದರು ಜೀವನ್ಮುಕ್ತನನ್ನು ಕರ್ಮ ಜ್ಞಾನಮಾರ್ಗಾವಲಂಬಿಗಳಾದ ಜನರು ಸೇವಿಸುವರು.

**೭೨೭. ಶಿವಜ್ಞಾನಪ್ರದಾಯಿನ್ಯೈನಮಃ—**

ಮಂಗಳಕರವಾದ ಬ್ರಹ್ಮಜ್ಞಾನಪ್ರದಾತಳು. ಅವತಾರವೆತ್ತಿದ್ದ ಶ್ರೀ ದಕ್ಷಿಣಾಮೂರ್ತಿಯ ಸ್ವರೂಪವೇ ಬ್ರಹ್ಮಜ್ಞಾನದಾಯಕವಾಗಿತ್ತು. ಜೀವನ್ಮುಕ್ತನ ಸ್ವರೂಪವೂ ಬ್ರಹ್ಮಜ್ಞಾನವನ್ನು ಅನುಗ್ರಹಿಸಿಕೊಡುವಂತಹುದಾಗಿದೆ.

**೭೨೮. ಚಿತ್ಕಲಾಯೈನಮಃ—**

ಜ್ಞಾನವಿದ್ಯಾಸ್ವರೂಪಿಣಿಯು. ಇಲ್ಲಿ ಚಿತ್ ಎಂದರೆ ಜ್ಞಾನ. ಕಳಾ ಎಂದರೆ ವಿದ್ಯ. ಶ್ರೀದಕ್ಷಿಣಾಮೂರ್ತ್ಯವತಾರದ ಸ್ವರೂಪವೇ ಜ್ಞಾನವಿದ್ಯಾಸ್ವರೂಪವಾಗಿರುವುದು. ಜೀವನ್ಮುಕ್ತನ ಸ್ವರೂಪವೇ ಜ್ಞಾನವಿದ್ಯಾಸ್ವರೂಪವಾಗಿರುವುದು.

**೭೨೯. ಆನನ್ದಕಲಿಕಾಯೈನಮಃ—**

ಅರಳಲು ಬರುತ್ತಿರುವ ಬಲಿತ ಹುವ್ವಿನ ಮೊಗ್ಗಿಗೆ ಕಲಿಕಾ ಎಂದು ಹೆಸರು. ಕಲ್ಯತೆ ಪ್ರಸೂನಮಿತಿ ಶಬ್ದ್ಯತೆ ಕಲಿಕಾ (ಕಲ-ಶಬ್ದಸಂಖ್ಯಾನಯೋಃ) ಪುಷ್ಪವಾಗುವುದೆಂದು ಹೇಳುವುದು. ಇದರಂತೆ ಆನಂದಕ್ಕೆ ಆಶ್ರಯಸ್ವರೂಪಳಾದ ಶ್ರೀದೇವಿಯು ಆನಂದವನ್ನು ಹೊಂದುವಂತೆ ಅನುಗ್ರಹಿಸುವವಳಾದುದರಿಂದ ಆನಂದಕಲಿಕಾ ಎನಿಸಿಕೊಂಡಿರುವಳು. ಇದರಂತೆಯೇ ಶ್ರೀ ದಕ್ಷಿಣಾಮೂರ್ತ್ಯವತಾರದ ಸ್ವರೂಪವೂ ಬ್ರಹ್ಮಾನಂದಕ್ಕೆ ಆಶ್ರಯಸ್ವರೂಪವಾಗಿ ಬ್ರಹ್ಮಾನಂದವನ್ನು

ಹೊಂದುವಂತೆ ಅನುಗ್ರಹಿಸುವುದಾಗಿತ್ತು. ಇದರಂತೆ ಜೀವನ್ಮುಕ್ತನೂ ಬ್ರಹ್ಮಾನಂದವನ್ನು ಹೊಂದುವಂತೆ ಅನುಗ್ರಹಿಸುವನು.

**೭೩೦. ಪ್ರೇಮರೂಪಾಯೈನಮಃ—**

ಪ್ರೀತಿಯಸ್ವರೂಪಿಣಿಯು. ಶ್ರೀ ದಕ್ಷಿಣಾಮೂರ್ತಿಯ ಅವತಾರದ ಸ್ವರೂಪವು ಸಕಲರಿಗೂ ಪ್ರೀತಿಯನ್ನೂ ಪರಮಭಕ್ತಿಯನ್ನೂ ಉಂಟುಮಾಡುವುದಾಗಿತ್ತು. ಜೀವನ್ಮುಕ್ತ ಸ್ವರೂಪವೂ ಪ್ರೀತಿಯನ್ನೂ ಭಕ್ತಿಯನ್ನೂ ಉಂಟುಮಾಡುವಂತಹುದು.

**೭೩೧. ಪ್ರಿಯಂಕರ್ಯೈನಮಃ—**

ಸುಖವನ್ನುಂಟುಮಾಡುವವಳು. ಶ್ರೀ ದಕ್ಷಿಣಾಮೂರ್ತಿಯು ಅಜ್ಞಾನ ಪರಿಹರವಾಗುವ ಸುಖವನ್ನುಂಟುಮಾಡುವವನು. ಜೀವನ್ಮುಕ್ತನೂ ಸುಖವನ್ನುಂಟು ಮಾಡುವವನು.

**೭೩೨. ನಾಮಪಾರಾಯಣಪ್ರೀತಾಯೈನಮಃ—**

ನಾಮಪಠಣ ಮತ್ತು ಮನನಮಾಡುವುದರಿಂದ ಪ್ರೀತೆಯಾಗತಕ್ಕವಳು. ಪರಬ್ರಹ್ಮನ ನಾಮಗಳನ್ನು ಕೇಳುತ್ತ ಕೇಳುತ್ತ ಶ್ರೀ ದಕ್ಷಿಣಾಮೂರ್ತಿಯೂ ಜೀವನ್ಮುಕ್ತರೂ ಆನಂದಪರವಶರಾಗಿ ಲೋಕಜ್ಞಾನವನ್ನೇ ಮರೆತು ಬ್ರಹ್ಮಾನಂದದಲ್ಲಿ ಮುಳುಗುವರು.

೭೨೫ ನೇ ನಾಮದಿಂದ ಇದುವರೆಗೆ ಶ್ರೀ ದಕ್ಷಿಣಾಮೂರ್ತಿಯ ಅವತಾರದ ಮಹಿಮೆಯು ಬಂದಿರುವುದು.

**೭೩೩. ನಂದಿವಿದ್ಯಾಯೈನಮಃ—**

ಗಾನ ಮತ್ತು ನೃತ್ಯವಿದ್ಯಾಸ್ವರೂಪಿಣಿಯು. ಗಾನವನ್ನು ಅನುಸರಿಸಿಯೇ ನೃತ್ಯವಿರುವುದರಿಂದ ನೃತ್ಯವೆಂದರೆ ಗಾನವೂ ಸೇರಿರುತ್ತದೆ. ನಂದಿಯು ಪಾರ್ವತೀ ಪರಮೇಶ್ವರರ ಒಡ್ಡೋಲಗದಲ್ಲಿ ಗಾನ ಮತ್ತು ನೃತ್ಯಮಾಡತಕ್ಕವನು.

**೭೩೪. ನಟೇಶ್ವರ್ಯೈನಮಃ—**

ಗಾನ ಮತ್ತು ನೃತ್ಯವಿದ್ಯಗಳಿಗೆ ನಾಥಳು. ಶ್ರೀ ನಟರಾಜನ ಪತ್ನಿಯು.

**೭೩೫. ಮಿಥ್ಯಾಜಗದಧಿಷ್ಠಾನಾಯೈನಮಃ—**

ಶಾಶ್ವತವಲ್ಲದ ಇಂದ್ರಜಾಲದಂತಿರುವ ಜಗತ್ತಿಗೆ ಆಧಾರವಾಗಿರುವವಳು. ಜಗತ್ತು ಮತ್ತು ದೇಹಗಳು ಶಾಶ್ವತವಲ್ಲ. ಇಂದ್ರಜಾಲಕನ ಮಾಯದಂತೆ ಕಲ್ಪಿತ

ವಾದ್ದರಿಂದ ಮಿಥ್ಯವಾದುದು. ಜಗತ್ತು ಹೇಗೆಹೇಗೆ ಸೃಷ್ಟಿಯಾಗುತ್ತಾ ಬರುವುದೋ ಹಾಗೆ ಹಾಗೆ "ತತ್ಸೃಷ್ಟ್ವಾತದೇ ವಾನುಪ್ರಾವಿಶತ್" ಎಂಬ ಶ್ರುತ್ಯಾಧಾರದಂತೆ ಜಗತ್ತಿನಲ್ಲಿ ಅಂತರ್ಯಾಮಿರೂಪದಿಂದ ಆಧಾರವಾಗಿರುವಳು. ಸೃಷ್ಟಿಯ ಕ್ರಮವು ಶ್ರೀದೇವಿಯ ನೃತ್ಯದ ಕ್ರಮವಾಗಿರುತ್ತದೆ. ಓಂಕಾರಗಾನವಿದ್ಯೆಯನ್ನು ಅನುಸರಿಸಿಕ್ಕೊಂಡು ನಾದಬ್ರಹ್ಮದಿಂದ ಸೃಷ್ಟಿಯಾಗಿ ಅದರಲ್ಲಿ ಅಂತರ್ಯಾಮಿಯಾಗಿ ನಿಲ್ಲುವಿಕೆಯೇ ಶ್ರೀದೇವಿಯ ಗಾನ ಮತ್ತು ನೃತ್ಯವಾಗಿರುವುದು.

**೭೩೬. ಮುಕ್ತಿದಾಯೈನಮಃ**—ಮೋಕ್ಷವನ್ನು ಅನುಗ್ರಹಿಸುವವಳು.

**೭೩೭. ಮುಕ್ತಿರೂಪಿಣ್ಯೈನಮಃ—**

ಮೋಕ್ಷಸ್ವರೂಪವಾದ ಪರಬ್ರಹ್ಮಸ್ವರೂಪಿಣಿಯು.

**೭೩೮. ಲಾಸ್ಯಪ್ರಿಯಾಯೈನಮಃ—**

ಸ್ತ್ರೀ ಕರ್ತೃಕವಾದ ನೃತ್ಯದಲ್ಲಿ ಪ್ರೀತಿಯುಳ್ಳವಳು.

**೭೩೯. ಲಯಕರ್ಯೈನಮಃ—**

ಲಯಮಾಡುವವಳು. ಈ ನಾಮದಲ್ಲಿ ಲಯಮಾಡುವವಳೆಂದರೆ ಜಗತ್ತನ್ನು ನಾಶಪಡಿಸುವವಳು. ೭೩೭ ನೇ ನಾಮದಲ್ಲಿ ತಿಳಿಸಿರುವ ಮೋಕ್ಷವು ಮನುಷ್ಯರಿಗೆ ಮಾತ್ರ ಸಲ್ಲತಕ್ಕದ್ದು. ಜಗತ್ತು ಲಯವಾಗುವ ಕ್ರಮವೂ ಶ್ರೀದೇವಿಯ ಲಯಕ್ರಮದ ಓಂಕಾರಗಾನವನ್ನು ಅನುಸರಿಸಿದ ನೃತ್ಯವಾಗಿರುವುದು. ಮೋಕ್ಷಕ್ರಮದಲ್ಲೂ ಹಿಂದೆ ತಿಳಿಸಿರುವಂತೆ ಓಂಕಾರನಾದಾನುಸಂಧಾನದ ಗಾನವೂ ಈ ಗಾನವನ್ನು ಅನುಸರಿಸಿದ ಶಕ್ತಿಗಳ ನೃತ್ಯವೂ ನಮ್ಮಲ್ಲೂ ಇದ್ದೇ ಇರುವುದು. ಈ ನೃತ್ಯಸ್ವರೂಪವೇ ಷಟ್ಚಕ್ರಗಳ ಭೇದನೆಯಾಗಿರುವುದು.

**೭೪೦. ಲಜ್ಜಾಯೈನಮಃ—**

ಲಜ್ಜಾಸ್ವರೂಪಳು. ಶ್ರೀದೇವಿಯು ಕಾಳರಾತ್ರಿಯ ಅವತಾರದಿಂದ ಜಗತ್ತನ್ನೆಲ್ಲಾ ಲಯಮಾಡಿಕ್ಕೊಂಡು ಕೋಪದಿಂದಿರಲು ಶ್ರೀದೇವಿಯ ಕೋಪವನ್ನು ಶಾಂತಮಾಡಲು ಶ್ರೀದೇವಿಯ ದಾರಿಗೆ ಸರಿಯಾಗಿ ಅಡ್ಡಲಾಗಿ ಈಶ್ವರನು ಮಲಗಿದನು. ದಾರಿಯಲ್ಲಿ ಮಲಗಿರುವ ಈಶ್ವರನನ್ನು ಶ್ರೀದೇವಿಯ ಕಾಲು ಸ್ಪರ್ಶಮಾಡಿತು. ಆಗ ಶ್ರೀದೇವಿಗೆ ಲಜ್ಜೆಯಾಗಿ ಕೋಪವನ್ನು ತ್ಯಜಿಸಿ ಶಾಂತಮೂರ್ತಿಯಾದಳು. ಸ್ಥೂಲಜಗತ್ತನ್ನೆಲ್ಲಾ ಲಯಮಾಡಿಕ್ಕೊಂಡು ಆನಂದವಾದ ಸೂಕ್ಷ್ಮವಾದ ಶಕ್ತಿಮಾತ್ರಸ್ವರೂಪವಾದ ಕಳಾಸ್ಥಿತಿಗೆಂದರೆ ಈಶ್ವರಸ್ಥಿತಿಗೆ ಬರು

ಏಕೆಯೆ ಶ್ರೀದೇವಿಯ ಲಜ್ಜಾಸ್ಥಿತಿಯು, ಮತ್ತು ಕೋಪಪರಿಹಾರದ ತತ್ವವೂ ಆಗಿದೆ. ಈ ತತ್ವವು ನಮ್ಮಲ್ಲಿ ಅಜ್ಞಾನ ನಿವೃತ್ತಿಯಾಗಿ ಅಖಂಡಾಕಾರವಾದ ಕಳಾಸ್ಥಿತಿಯಲ್ಲಿ ನಿಲ್ಲುವ ಸೋಪಾನವಾಗಿದೆ.

**೭೪೧. ರಮ್ಭಾದಿವನ್ದಿತಾಯೈನಮಃ—**

ರಂಭೆಯೇ ಮೊದಲಾದವರಿಂದ ವಂದಿಸಲ್ಪಡುವವಳು. ದೇವಲೋಕ ದಲ್ಲಿರುವ ರಂಭೆ ಊರ್ವಶಿ ಮುಂತಾದ ಗಾನ ನೃತ್ಯಗಳಲ್ಲಿ ಪ್ರಸಿದ್ಧಿಯನ್ನು ಪಡೆದಿರುವ ಗಂಧರ್ವರುಗಳಿಂದ ಪೂಜಿಸಲ್ಪಡುವವಳು. ಇದರಿಂದ ನಟೇಶ್ವರಿಯಾದ ಶ್ರೀದೇವಿಯು ಎಂತಹ ನೃತ್ಯಗಾನದವಳೆಂಬುದನ್ನು ವಾಚಕರೇ ಯೋಚಿಸಬೇಕು. ಅಂದರೆ ಓಂಕಾರನಾದವು ಪ್ರಪಂಚದ ಸಕಲ ಗಾನ ನೃತ್ಯ ವಿದ್ಯೆಗಳಿಗೆ ಪೂಜಾರ್ಹ ವಾದುದಾಗಿದೆ.

**೭೪೨. ಭವದಾ ವಸುಧಾವೃಷ್ಟ್ಯೈನಮಃ—**

ಸಂಸಾರತಾಪವೆಂಬ ಕಾಡ್ಗಿಚ್ಚಿಗೆ ಅಮೃತಸ್ವರೂಪವಾದ ಸುವೃಷ್ಟಿ ಯನ್ನುಂಟುಮಾಡಿ ಶಾಂತಿಯನ್ನುಂಟುಮಾಡುವವಳು. (೨) ಐಹಿಕ ಮತ್ತು ಆಮುಷ್ಮಿಕ ಸುಖಗಳೆರಡನ್ನೂ ಅನುಗ್ರಹಿಸುವವಳು.

**೭೪೩. ಪಾಪಾರಣ್ಯದವಾನಲಾಯೈನಮಃ—**

ಪಾಪಸಮುದಾಯಗಳೆಂಬ ಗೊಂಡಾರಣ್ಯವನ್ನು ಕಾಡ್ಗಿಚ್ಚು ಕಾಡನ್ನು ದಹಿಸುವಂತೆ ನಾಶಮಾಡುವವಳು.

**೭೪೪. ದೌರ್ಭಾಗ್ಯತೂಲವಾತೂಲಾಯೈನಮಃ—**

ಬಿರುಗಾಳಿಯು ಹತ್ತಿಯನ್ನು ಅತಿವೇಗದಿಂದ ಹಾರಿಸಿಕ್ಕೊಂಡು ಹೋಗು ವಂತೆ ದಾರಿದ್ರ್ಯವನ್ನು ಬಹು ಕ್ಷಿಪ್ರದಲ್ಲಿ ಹೋಗಲಾಡಿಸುವವಳು.

**೭೪೫. ಜರಾಧ್ವಾನ್ತ ರವಿಪ್ರಭಾಯೈನಮಃ—**

ಕ್ಷಯಿಸುವುದೆಂಬ ಕಗ್ಗತ್ತಲೆಗೆ ಪ್ರಕಾಶಮಾನವಾದ ಸೂರ್ಯನಂತೆ ಇರುವವಳು.

**೭೪೬. ಭಾಗ್ಯಾಬ್ಧಿಚನ್ದ್ರಿಕಾಯೈನಮಃ—**

ಬೆಳದಿಂಗಳೆಂದರೆ ಚನ್ದ್ರಕಿರಣವು ಸಮುದ್ರವನ್ನು ವೃದ್ಧಿಗೊಳಿಸುವಂತೆ ಭಕ್ತರಿಗೆ ಭಾಗ್ಯವನ್ನು ವೃದ್ಧಿಗೊಳಿಸುವವಳು.

**೭೪೭. ಭಕ್ತಚಿತ್ತಕೇಕಿಘನಾಘನಾಯೈನಮಃ—**

ಭಕ್ತರ ಮನಸ್ಸೆಂಬ ನವಿಲಿಗೆ ಮಳೆಗಾಲದ ಗುಡುಗಿನಂತಿರುವವಳು. ಅಂದರೆ ಮೋಡವು ನವಿಲುಗಳಿಗೆ ಹೇಗೆ ಸಂತೋಷವನ್ನೂ ತೃಪ್ತಿಯನ್ನೂ ಉಂಟು ಮಾಡುವುದೊ ಹಾಗೆ ಭಕ್ತರಿಗೆ ಪ್ರಿಯವನ್ನುಂಟುಮಾಡಿ ರಕ್ಷಕಳಾಗಿರುವವಳು.

**೭೪೮. ರೋಗಪರ್ವತದಂಭೋಳಯೇನಮಃ—**

ರೋಗವೆಂಬ ಪರ್ವತಕ್ಕೆ ವಜ್ರಾಯುಧದಂತೆ ಇರುವವಳು. ಅಂದರೆ ವಜ್ರಾಯುಧವು ಪರ್ವತವನ್ನು ನಾಶಮಾಡುವಂತೆ ರೋಗಗಳನ್ನು ಪರಿಹರಿಸು ವವಳು.

**೭೪೯. ಮೃತ್ಯುದಾರುಕುಠಾರಿಕಾಯೈನಮಃ—**

ಮೃತ್ಯುವೆಂಬ ಮರಕ್ಕೆ ಕೊಡಲಿಯಂತಿರುವವಳು. ಅಂದರೆ ಮೃತ್ಯುವೆಂಬ ಮರವನ್ನು ಕೊಡಲಿಯಿಂದ ಕತ್ತರಿಸುವವಳು.

೭೪೧ ನೇ ನಾಮದಿಂದ ಇದುವರೆಗೆ ಓಂಕಾರನಾದಾನುಸಂಧಾನದಿಂದ ಉಂಟಾಗುವ ಫಲವನ್ನು ನೃತ್ಯಗಾನಗಳಿಗೆ ನಾಥಳಾದ ಶ್ರೀದೇವಿ ನಟೇಶ್ವರಿಯನ್ನು ಭಕ್ತಿಯಿಂದ ಉಪಾಸನೆಮಾಡುವುದರಿಂದ ಉಂಟಾಗುವ ಫಲವನ್ನು ಸೂಚಿಸುವುದು.

**೭೫೦. ಮಹೇಶ್ವರ್ಯೈನಮಃ—**

ಜಗತ್ತಿಗೆಲ್ಲಾ ಮಹಾಮಹಿಮಾಶಾಲಿಯಾದ ಒಡೆಯಳು.

**೭೫೧. ಮಹಾಕಾಳ್ಯೈನಮಃ—**

ಮಹಾಮಹಿಮಾರೂಪವಾಗಿರುವ ಗಾನ ಮತ್ತು ನೃತ್ಯವಿದ್ಯಾಸ್ವರೂಪಿಣಿ ಯಾಗಿ ನೃತ್ಯಗಾನಗಳಿಂದಲೇ ಜಗತ್ತಿನ ಮಹಾಪ್ರಳಯವನ್ನು ಮಾಡುವವಳು. ಕಾಲಸ್ವರೂಪವನ್ನು ನುಂಗುವವಳಾದ್ದರಿಂದ ಮಹಾಕಾಳಿಯು. ಜೀವನ್ಮುಕ್ತನಿಗೆ ಮಹಾಪ್ರಳಯದ ತತ್ವವಾದ ವಿದೇಹಮುಕ್ತಿಯನ್ನು ಕೊಡುವವಳು.

**೭೫೨. ಮಹಾಗ್ರಾಸಾಯೈನಮಃ—**

ಮಹತ್ತರವಾದ ತುತ್ತಿನಿಂದ ನುಂಗುವವಳು. ಅಂದರೆ ಜಗತ್ತನ್ನು ಬಹು ದೊಡ್ಡದಾದ ತುತ್ತಿನಂತೆ ನುಂಗುವವಳು.

**೭೫೩. ಮಹಾಶನಾಯೈನಮಃ—**

ಸಕಲವನ್ನೂ ಭಕ್ಷಿಸುವವಳು. ಕೊಂಚವನ್ನೂ ಬಿಡದೆ ಆತ್ಯಂತಿಕವಾಗಿ ಜಗತ್ತನ್ನೆಲ್ಲಾ ಭಕ್ಷಿಸುವವಳು. ಅಂದರೆ ಪೃಥ್ವಿಯನ್ನು ತುತ್ತಿನಂತೆ ಭಕ್ಷಿಸಿ ಜಲರೂಪಕ್ಕೂ, ಜಲವನ್ನು ತುತ್ತಿನಂತೆ ಭಕ್ಷಿಸಿ ಅಗ್ನಿರೂಪಕ್ಕೂ, ಅಗ್ನಿಯನ್ನು ಭಕ್ಷಿಸಿ ವಾಯುರೂಪಕ್ಕೂ ವಾಯುವನ್ನು ಭಕ್ಷಿಸಿ ಆಕಾಶರೂಪಕ್ಕೂ ಆಕಾಶವನ್ನು ನುಂಗಿ ಕಳಾಸ್ವರೂಪಕ್ಕೂ ಕಳೆಯೂಕೂಡ ಪರಬ್ರಹ್ಮವಾಗಿ ಪರಬ್ರಹ್ಮಸ್ವರೂಪಿಣಿಯಾದ ತಾನೊಬ್ಬಳೇ ಉಳಿಯುವವರಿಗೆ ಸಕಲವನ್ನೂ ತುತ್ತಿನಂತೆ ಭಕ್ಷಿಸಿ ನುಂಗುವಳು. ಈ ತತ್ವಗಳೇ ೭೫೨ ಮತ್ತು ೭೫೩ ನೇ ನಾಮಗಳ ಅರ್ಥವಿವರಣೆಯಾಗಿರುತ್ತದೆ.

**೭೫೪. ಅಪರ್ಣಾಯೈನಮಃ—**

ಶ್ರೀದೇವಿಯು ಜಗತ್ತನ್ನು ನುಂಗುವಾಗ ಶೇಷಾಂಶವನ್ನು ಕೊಂಚವೂ ಬಿಡದಂತೆ ಸರ್ವವನ್ನೂ ನುಂಗುವುದರಿಂದ ಅಪರ್ಣೆ ಎನಿಸುವಳು. ಪರ್ಣ ಎಂದರೆ ಪಿಪರ್ತಿವೃಕ್ಷಂ ಇತಿಪರ್ಣಂ (ಪಾಲನ ಪೂರ್ಣಯೋಃ) ಎಂಬ ಅಮರದ ವ್ಯುತ್ಪತ್ತಿಯಂತೆ ಕಾಪಾಡುವುದು ಮತ್ತು ಪೂರ್ಣಮಾಡುವುದು. ಅಪರ್ಣ ಎಂದರೆ ಕಾಪಾಡುವುದೇ ಇಲ್ಲದಿರುವ ಮತ್ತು ಶೇಷಾಂಶವೇ ಇಲ್ಲದಿರುವ ಸ್ಥಿತಿ. ಅಂದರೆ ಶ್ರೀದೇವಿಯು ಪ್ರಪಂಚವನ್ನು ಭಕ್ಷಿಸುವಾಗ ಶೇಷಾಂಶವೇ ಇಲ್ಲದಿರುವಂತೆ ನುಂಗುತ್ತಾಳೆ. ಯಾವಾಗ ಕೊಂಚವನ್ನೂ ಬಿಡದಂತೆ ನುಂಗುತ್ತಾಳೊ ಕಾಪಾಡಬೇಕಾದ ಪ್ರಪಂಚವೇ ಇರುವುದಿಲ್ಲ. ಓಂಕಾರ ನಾದಾನುಸಂಧಾನದಿಂದ ಲಭ್ಯವಾದ ಜೀವನ್ಮುಕ್ತನಿಗೆ ದೇವಋಣ, ಋಷಿಋಣ, ಪಿತೃಋಣ, ಮಾತೃಋಣ ಮುಂತಾಗಿ ಯಾವ ಋಣ ಶೇಷಗಳಿದ್ದರೂ ಪರಿಹರವಾಗಿ ಶೇಷಾಂಶವು ಕೊಂಚವೂ ಇರುವುದಿಲ್ಲವೆಂಬುದನ್ನು (ಋಣ-ಸಾಲ, ಅಪ-ಹೋಗಲಾಡಿಸು) ಸೂಚಿಸುವದಕ್ಕೋಸ್ಕರಲೂ, ಪ್ರಪಂಚದ ಶೇಷಾಂಶವನ್ನು ಬಿಡದೆ ಭಕ್ಷಿಸಿ ಲಯಮಾಡುವ ತತ್ವಸೂಚನೆಗೋಸ್ಕರಲೂ ಶ್ರೀದೇವಿ ನಟೇಶ್ವರಿಯು ಅಪರ್ಣಾಸ್ವರೂಪಳೆನಿಸುವಳು.

೭೩೩ ನೇ ನಾಮದಿಂದ ಇದುವರೆಗೆ ಶ್ರೀದೇವಿಯು ನಟೇಶ್ವರೀ ಅಂದರೆ ಮಹಾಕಾಳಿ ಅವತಾರಮಾಡಿ ನಡೆಸಿದ ಕಾರ್ಯಗಳ ಮಹಿಮೆಯು ಬಂದಿರುವುದು. ಮುಂದಿನ ನಾಮದಿಂದ ಶ್ರೀದೇವಿಯು ಚಂಡ ಮುಂಡರೆಂಬ ರಾಕ್ಷಸರನ್ನು ನಿಗ್ರಹಿಸಲು ಶ್ರೀ ಚಾಮುಂಡೇಶ್ವರಿಯಾಗಿ ಅವತಾರಮಾಡಿದ ಮಹಿಮೆಯು ಬರುವುದು.

**೭೫೫. ಚಣ್ಡಿಕಾಯೈನಮಃ**—ನಿಗ್ರಹಸಮರ್ಥನಾದ **ಈ**ಶ್ವರನ ರಾಣಿಯು.

**೭೫೬. ಚಣ್ಡಮುಣ್ಡಾಸುರನಿಷೂದಿನ್ಯೈನಮಃ**—

ಚಂಡ ಮತ್ತು ಮುಂಡರೆಂಬ ರಾಕ್ಷಸರನ್ನು ನಿಗ್ರಹಿಸುವವಳು. **ಚಂಡ** ವೆಂದರೆ ಕೋಪ. ಅಂದರೆ ಅವಿದ್ಯೆಯಲ್ಲಿನ ರಜೋಗುಣಸ್ವರೂಪ. **ಮುಂಡ** ನೆಂದರೆ ಪಟ್ಟುತಲೆಯವನು. ಅಂದರೆ ಅವಿದ್ಯೆಯಲ್ಲಿನ ತಮೋಗುಣಸ್ವರೂಪ. **ಚಂಡ** ಮುಂಡರ ನಿಗ್ರಹದ ಚರಿತ್ರೆಯು ನಮ್ಮಲ್ಲಿನ ಅವಿದ್ಯೆಯನ್ನು ನಿಗ್ರಹಿಸಿ ಮೋಕ್ಷವನ್ನು ಪಡೆಯುವ ತತ್ವಕ್ಕೂ ಅನ್ವಯವಾಗುವುದು.

**೭೫೭. ಕ್ಷರಾಕ್ಷರಾತ್ಮಿಕಾಯೈನಮಃ**—

ಕ್ಷರವೆಂದರೆ ಪರಿಣಾಮಭೇದದಿಂದ ನಾಶವಾಗತಕ್ಕ ಜಗತ್ತಿನ ಮತ್ತು ಅಕ್ಷರ ವೆಂದರೆ ನಾಶವಾಗದೇ ಶಾಶ್ವತವಾಗಿರುವ ಪರಬ್ರಹ್ಮಸ್ವರೂಪಿಣಿಯು.

**೭೫೮. ಸರ್ವಲೋಕೇಶ್ಯೈನಮಃ**—ಸರ್ವಲೋಕಗಳಿಗೂ ಪ್ರಭುವು.

**೭೫೯. ವಿಶ್ವಧಾರಿಣ್ಯೈನಮಃ**—ಜಗತ್ತನ್ನು ಧರಿಸಿರುವವಳು.

**೭೬೦. ತ್ರಿವರ್ಗದಾತ್ರ್ಯೈನಮಃ**—

ಧರ್ಮಾರ್ಥಕಾಮಗಳ ಸುಖವನ್ನು ಕೊಡುವವಳು. ಪ್ರಪಂಚಸುಖವನ್ನೂ, ಸ್ವರ್ಗಸುಖವನ್ನೂ, ಮೋಕ್ಷಸುಖವನ್ನೂ ಅನುಗ್ರಹಿಸುವವಳು.

**೭೬೧. ಸುಭಗಾಯೈನಮಃ**—ಪರಮೈಶ್ವರ್ಯಶಾಲಿನಿಯು. ಸೂರ್ಯರೂಪಳು.

**೭೬೨. ತ್ರ್ಯಮ್ಬಕಾಯೈನಮಃ**—

ಸೂರ್ಯ ಚಂದ್ರಾಗ್ನಿಗಳ ಸ್ವರೂಪವಾದ ಮೂರು ಕಣ್ಣುಗಳುಳ್ಳವಳು.

**೭೬೩. ತ್ರಿಗುಣಾತ್ಮಿಕಾಯೈನಮಃ**–ಸತ್ವರಜಸ್ತಮೋಗುಣಗಳ ಸ್ವರೂಪಿಣಿಯು.

**೭೬೪. ಸ್ವರ್ಗಾಪವರ್ಗದಾಯೈನಮಃ**—

ಶಾಶ್ವತಸುಖವಲ್ಲದ ಸ್ವರ್ಗಸುಖವನ್ನೂ ಶಾಶ್ವತವಾದ ಮೋಕ್ಷವನ್ನೂ ಕೊಡುವವಳು.

**೭೬೫. ಶುದ್ಧಾಯೈನಮಃ**—

ಉಪಾಧಿರಹಿತವಾಗಿ ಅಂದರೆ ಯಾವ ತೊಂದರೆಯೂ ಇಲ್ಲದೆ ನಿರ್ಮಲ ವಾಗಿರುವವಳು.

**೭೬೬. ಜಪಾಪುಷ್ಪನಿಭಾಕೃತ್ಯೈನಮಃ—**

ಕೆಂಪುದಾಸವಾಳದ ಹುವ್ವಿನಂತೆ ಕೆಂಪಾದ ದೇಹವುಳ್ಳವಳು.

**೭೬೭. ಓಜೋವತ್ಯೈನಮಃ—**

ಸಪ್ತಧಾತುಗಳನ್ನೊಳಗೊಂಡ ಇಂದ್ರಿಯಗಳ ಸೂಕ್ಷ್ಮಶಕ್ತಿಸ್ವರೂಪಿಣಿಯಾಗಿರುವವಳು.

**೭೬೮. ದ್ಯುತಿಧರಾಯೈನಮಃ—ಪ್ರಕಾಶವನ್ನು ಧರಿಸಿರುವವಳು.**

**೭೬೯. ಯಜ್ಞರೂಪಾಯೈನಮಃ—**

ಅಗ್ನಿಯಲ್ಲಿ ಮಾಡುವ ಹೋಮವು, ದೇವತಾಜಪ, ಅರ್ಚನೆ, ಧ್ಯಾನ ಮುಂತಾದವುಗಳನ್ನು ಯಜ್ಞವೆಂದು ಹೇಳುವರು. ಜಗತ್ ಸೃಷ್ಟಿ, ಸ್ಥಿತಿ, ಲಯ ಗಳ ಕಾರ್ಯಗಳನ್ನೂ ಯಜ್ಞವೆಂದು ಕರೆಯಲ್ಪಡುವುದು. ಇಂತಹ ಯಜ್ಞ ಸ್ವರೂಪಳು. (೨) "ಯಜ್ಞೋ ವೈ ವಿಷ್ಣುಃ" ಎಂಬ ಶ್ರುತಿವಾಕ್ಯದಂತೆ ವಿಷ್ಣು ಸ್ವರೂಪಳೂ ಆಗಿರುವವಳು.

**೭೭೦. ಪ್ರಿಯವ್ರತಾಯೈನಮಃ—**

ದೇವತಾ ವ್ರತಾನುಷ್ಠಾನಗಳಲ್ಲಿ ಪ್ರೀತಿಯುಳ್ಳವಳು. ವ್ರತವೆಂದರೆ ನಿಯಮವಾಗಿರುವಿಕೆ. ಇದರಲ್ಲೂ ಪ್ರೀತಿಯುಳ್ಳವಳು.

**೭೭೧. ದುರಾರಾಧ್ಯಾಯೈನಮಃ—**

ಆರಾಧನೆ ಮಾತ್ರದಿಂದ ಸುಲಭವಾಗಿ ಲಭ್ಯವಲ್ಲದವಳು. ಅಂದರೆ ದೇವತಾ ರಾಧನೆಯಲ್ಲಿ ಶ್ರೀದೇವಿಗೆ ಪ್ರೀತಿಯೇನೋ ಇರುವುದು. ಆದರೆ ಆರಾಧನೆ ಮಾತ್ರಕ್ಕೆ ದೊರಕುವವಳಲ್ಲ. ಅಂದರೆ ಕರ್ಮಮಾರ್ಗಕ್ಕೆ ದೊರಕುವಳಲ್ಲವಾದುದರಿಂದ ಜ್ಞಾನಮಾರ್ಗದಿಂದ ಲಭ್ಯಳು.

**೭೭೨. ದುರಾಧರ್ಷಾಯೈನಮಃ—**

ಇಂದ್ರಿಯಗಳನ್ನು ಗೆಲ್ಲಲಾರದವರಿಗೆ ದೊರೆಯತಕ್ಕವಳಲ್ಲ. ಹಿಂದಿನ ನಾಮದ ವಿವರಣೆಯನ್ನು ಇಲ್ಲಿಗೂ ಅನ್ವಯಮಾಡಿಕೊಳ್ಳಬೇಕು.

**೭೭೩. ಪಾಟಲೀಕುಸುಮಪ್ರಿಯಾಯೈನಮಃ—**

ಪಾದರೀಗಿಡದ ಹುವ್ವಿನಲ್ಲಿ ಪ್ರೀತಿಯುಳ್ಳವಳು. ಕೊಂಚ ಕೆಂಪುಬಣ್ಣ

ಮಿಶ್ರವಾದ ಬಿಳಿಯಬಣ್ಣವುಳ್ಳದ್ದು ಪಾಟಲಿ. ಈಶ್ವರನಿಗೆ ಬಿಲ್ವಪತ್ರೆಯು ಹೇಗೆ ಪ್ರಿಯವೋ ಹಾಗೆಯೆ ಶ್ರೀದೇವಿಗೆ ಪಾಟಲೀಪುಷ್ಪವು ಪ್ರಿಯವೆಂದು ಪದ್ಮಪುರಾಣ ದಲ್ಲಿ ಹೇಳಿದೆ. ಪಾಟಲಿ ಎಂದರೆ ವಿಸ್ತಾರವಾಗುವುವೆಂದರ್ಥವು. ವಿಸ್ತಾರವಾಗುವು ದಾಗಿಯೂ ಬಹು ಹೆಚ್ಚಾದ ಮಕರಂದವುಳ್ಳದ್ದಾಗಿಯೂ ಇರುವುದೇ ಅಖಂಡಾಕಾರ ವಾಗುವಿಕೆಯನ್ನುಂಟು ಮಾಡುವುದಾಗಿಯೂ ಅಮೃತಮಯವಾಗುವದಾಗಿಯೂ ಇರುವ ಬ್ರಹ್ಮವೇ ನಾನೆಂಬ ವಾಸನೆಯಲ್ಲಿ ನಿಲ್ಲುವಿಕೆಯೆ ಪಾಟಲೀಕುಸುಮದ ತತ್ವಾರ್ಥವಾಗಿರುವುದು. ಇಂತಹದೂ ಶ್ರೀದೇವಿಗೆ ಪ್ರಿಯವಾದುದು.

೭೭೪. **ಮಹತ್ಯೈನಮಃ—**

ಪೂಜ್ಯವಾದ ವಸ್ತುವಾಗಿರುವವಳು. ಅಳತೆಗೆ ಒಳಪಡದವಳು.

೭೭೫. **ಮೇರುನಿಲಯಾಯೈನಮಃ—**

ಭೂಮಂಡಲಕ್ಕೆ ಅಧೋಭಾಗದಲ್ಲಿ (ದಕ್ಷಿಣ ಮೇರುವಿನಲ್ಲಿ) ಆದಿಶೇಷ ಶಕ್ತಿಯಾಗಿ ನೆಲಸಿರುವವಳು. ನಮ್ಮಲ್ಲೂ ಮೂಲಾಧಾರದಲ್ಲಿ ನೆಲಸಿರುವವಳು. ಉತ್ತರ ಮೇರುವೆಂದರೆ ಬ್ರಹ್ಮಾಂಡಕ್ಕೆಲ್ಲಾ ಮೇಲ್ಭಾಗವಾದ ಕಳಾಸ್ವರೂಪದಲ್ಲಿ ನೆಲಸಿರುವವಳು. ನಮ್ಮಲ್ಲೂ ಭ್ರೂಮಧ್ಯದಲ್ಲಿರುವ ದಹರಾಕಾಶದಲ್ಲಿ ನೆಲ ಸಿರುವವಳು.

೭೭೬. **ಮನ್ದಾರಕುಸುಮಪ್ರಿಯಾಯೈನಮಃ—**

ಕಂಚಿವಾಳದ ಪುಷ್ಪದಲ್ಲಿ ಪ್ರಿಯಳು.

೭೭೭. **ವೀರಾರಾಧ್ಯಾಯೈನಮಃ—**

ರಣವೀರಾಗ್ರಣಿಗಳಾದ ದೇವತೆಗಳಿಂದಲೂ ಕ್ಷತ್ರಿಯರಿಂದಲೂ ಪೂಜಿಸ ಲ್ಪಡುವವಳು. ವೀರತ್ವವು ಪ್ರಾಣಶಕ್ತಿಗೆ ಸೇರಿದುದು. ಇಂತಹ ಪ್ರಾಣಶಕ್ತಿ ಯಿಂದಲೂ ಸೇವಿಸಲ್ಪಡುವ ಆತ್ಮಸ್ವರೂಪಳು.

೭೭೮. **ವಿರಾಡ್ರೂಪಾಯೈನಮಃ—**

ಪೂರ್ಣಭರಿತವಾದ ಬ್ರಹ್ಮಾಂಡವೇ ದೇಹವಾಗಿ ಉಳ್ಳವಳು.

೭೭೯. **ವಿರಜಸೇನಮಃ—**

ಪಾಪರಹಿತಳು. ರಜೋಗುಣಸಂಪರ್ಕವಿಲ್ಲದಿರುವ ಶುದ್ಧಸತ್ವವಾಗಿರುವ ವಳು. ನಿರ್ಮಲರೂಪಳು.

**೭೮೦. ವಿಶ್ವತೋಮುಖ್ಯೈನಮಃ—**

"ವಿಶ್ವತಶ್ಚಕ್ಷುರುತವಿಶ್ವತೋಮುಖಃ" ಎಂಬ ಶ್ರುತ್ಯಾಧಾರದಂತೆ ಸರ್ವತ್ರ ಮುಖವುಳ್ಳವಳು.

**೭೮೧. ಪ್ರತ್ಯಗ್ರೂಪಾಯೈನಮಃ—**

ಸರ್ವದರಲ್ಲಿಯೂ ಅಂತರ್ಯಾಮಿಯಾಗಿರುವವಳು. ಇದಕ್ಕೆ "ಪರಾಂಚಿಖಾನಿವ್ಯತೃಣತ್ಸ್ವಯಂ ಭೂಸ್ತಸ್ಮಾತ್ಪರಾಙ್ ಪಶ್ಯತಿ ನಾನ್ತರಾತ್ಮನ್" ಎಂಬ ಶ್ರುತ್ಯಾಧಾರವಿರುವುದು.

**೭೮೨. ಪರಾಕಾಶಾಯೈನಮಃ—**

"ಪರಮೇವ್ಯೋಮನ್ಪ್ರತಿಷ್ಠಿತಾ" ಎಂಬ ಶ್ರುತ್ಯಾಧಾರದಂತೆ ಆಕಾಶಾಂತರ್ಗತವಾಗಿರುವ ಕಳಾಸ್ವರೂಪಿಣಿಯು ಮತ್ತು ಪರಬ್ರಹ್ಮಸ್ವರೂಪಿಣಿಯು.

**೭೮೩. ಪ್ರಾಣದಾಯೈನಮಃ—**

ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನಗಳೆಂಬ ಪಂಚಪ್ರಾಣಗಳಿಗೂ, ಇಂದ್ರಿಯಗಳಿಗೂ, ಅಂತಃಕರಣಕ್ಕೂ ಶಕ್ತಿಯನ್ನು ಕೊಟ್ಟಿರುವವಳು.

**೭೮೪. ಪ್ರಾಣರೂಪಿಣ್ಯೈನಮಃ—**

ಮೇಲಿನ ನಾಮದಲ್ಲಿ ತಿಳಿಸಿರುವ ಪ್ರಾಣ, ಅಪಾನ, ಮುಂತಾದ ರೂಪಗಳಾಗಿಯೂ ಇರುವವಳು.

**೭೮೫. ಮಾರ್ತಾಣ್ಡಭೈರವಾರಾಧ್ಯಾಯೈನಮಃ—**

ಕಷ್ಟಪರಿಹಾರಕನಾದ ಸೂರ್ಯನಿಂದ ಅರ್ಚಿಸಲ್ಪಡುವವಳು. ತೇಜಃಪುಂಜನಾದ ಕಷ್ಟಪರಿಹಾರಕನಾದ ರಾಕ್ಷಸ ಸಂಹಾರಕ್ಕೋಸ್ಕರ ಭೈರವಾವತಾರವೆತ್ತಿದ್ದ ಈಶ್ವರನಿಂದ ಆರಾಧಿಸಲ್ಪಟ್ಟವಳು.

**೭೮೬. ಮನ್ತ್ರಿಣೀನ್ಯಸ್ತ ರಾಜ್ಯಧುರೇನಮಃ—**

ಶ್ಯಾಮಲಾಂಬ ಮುಂತಾದ ಮನ್ತ್ರಿಣಿಯರಲ್ಲಿ ರಾಜ್ಯಭಾರವನ್ನು ವಹಿಸಿರುವವಳು. ವೇದಮನ್ತ್ರಗಳ ಅಭಿಮಾನಿದೇವತಾಶಕ್ತಿಗಳಿಗೆ ವಿಶ್ವದ ರಾಜ್ಯಭಾರವನ್ನು ವಹಿಸಿರುವವಳು.

೭೮೭. **ತ್ರಿಪುರೇಶ್ಯೈನಮಃ—**

ಸ್ವರ್ಗ, ಮರ್ತ್ಯ, ಪಾತಾಳಗಳಾದ ಮೂರುಲೋಕಗಳಿಗೂ ನಾಥಳು.

೭೮೮. **ಜಯತ್ಸೇನಾಯೈನಮಃ—**

ರಜಸ್ತಮೋಗುಣಗಳ ರೂಪವಾದ ಶತ್ರುಗಳನ್ನು ಜಯಿಸುವಂತಹ ದೇವತಾತ್ಮಕವಾದ ಸೇನೆಯುಳ್ಳವಳು.

೭೮೯. **ನಿಸ್ತ್ರೈಗುಣ್ಯಾಯೈನಮಃ—**ಸತ್ವರಜಸ್ತಮೋಗುಣಗಳಿಗೂ ಅತೀತಳು.

೭೯೦. **ಪರಾಪರಾಯೈನಮಃ—**

ಪರೋಕ್ಷದಲ್ಲೂ ಮತ್ತು ಪ್ರತ್ಯಕ್ಷದಲ್ಲೂ ಇರುವವಳು. ವಾಕ್ಯಾರ್ಥದಿಂದ ಬೋಧಿಸಲ್ಪಟ್ಟ ಭಾವನಾರೂಪವಾದ ಪರೋಕ್ಷಜ್ಞಾನಸ್ವರೂಪಳು ಮತ್ತು ಲಕ್ಷ್ಯಾರ್ಥದಿಂದ ಹೊಂದುವ ಸ್ವರೂಪಾನುಭವವಾದ ಅಪರೋಕ್ಷಜ್ಞಾನಸ್ವರೂಪಳು. ಶ್ರೇಷ್ಠವಾದ ಪರಬ್ರಹ್ಮಸ್ವರೂಪಿಣಿಯು ಮತ್ತು ಕನಿಷ್ಠವಾದ ಪ್ರಪಂಚಸ್ವರೂಪಿಣಿಯು.

೭೯೧. **ಸತ್ಯಜ್ಞಾನಾನನ್ದರೂಪಾಯೈನಮಃ—**

ತ್ರಿಕಾಲದಲ್ಲೂ ಯಾವ ಬಾಧೆಯು ಮತ್ತು ಚ್ಯುತಿಯು ಇಲ್ಲದೆಯೂ ಸ್ವಯಂಪ್ರಕಾಶವಾಗಿಯೂ ಆನಂದರೂಪವಾಗಿಯೂ ಇರುವ ಪರಬ್ರಹ್ಮಸ್ವರೂಪಿಣಿಯು.

೭೯೨. **ಸಾಮರಸ್ಯಪರಾಯಣಾಯೈನಮಃ—**

ಜೀವನು ತನ್ನ ಪರಬ್ರಹ್ಮತ್ವವನ್ನು ಪಡೆಯುವದರಲ್ಲಿ ಆಸಕ್ತಿಯುಳ್ಳವಳು. (೨) ಪೃಥಿವ್ಯಾದಿ ಪಂಚಭೂತಗಳೂ ಏರದೇ ಕುಗ್ಗದೇ ಸಮರಸಭಾವದಲ್ಲಿರುವಂತೆ ಮಾಡಿ ಜಗತ್ತನ್ನು ನಡೆಸುತ್ತಿರುವ ನಿಯಾಮಕಸ್ವರೂಪಿಣಿಯು. (೩) ಸಾಮಗಾನಪ್ರಿಯಳು.

೭೯೩. **ಕಪರ್ದಿನ್ಯೈನಮಃ—**

ಜಟಾಜೂಟಧಾರಿಯಾದ ಈಶ್ವರನ ಪತ್ನಿಯು. ಸ್ತೋತ್ರಪ್ರಿಯಳು. ಭೂದೇವಿಯು.

**೭೯೪. ಕಲಾಮಾಲಾಯೈನಮಃ—**

ಷೋಡಶಸ್ವರಾಕ್ಷರಗಳು ಉದಾತ್ತಾದಿ ನಾಲಕ್ಕು ಸ್ವರಭೇದಗಳಿಂದುಂಟಾಗುವ ೬೪ ಕಳೆಗಳನ್ನೂ ಧರಿಸಿರುವವಳು. ಅಲ್ಲದೆ ಶ್ರೀ ಶಂಕರಾಚಾರ್ಯರವರು ಸೌಂದರ್ಯ ಲಹರಿಯಲ್ಲಿ ತಿಳಿಸಿರುವಂತೆ ಭೂತತ್ವವಾದ ಮೂಲಾಧಾರ ಚಕ್ರದಲ್ಲಿ ೫೬, ಜಲದ ತತ್ವವಾದ ಸ್ವಾಧಿಷ್ಠಾನದಲ್ಲಿ ೫೨, ಅಗ್ನಿತತ್ವವಾದ ಮಣಿಪೂರಚಕ್ರದಲ್ಲಿ ೬೨, ವಾಯುತತ್ವವಾದ ಅನಾಹತಚಕ್ರದಲ್ಲಿ ೫೪, ಆಕಾಶತತ್ವವಾದ ವಿಶುದ್ಧಚಕ್ರದಲ್ಲಿ ೭೨, ಅಂತಃಕರಣದ ತತ್ವವಾದ ಆಜ್ಞಾಚಕ್ರದಲ್ಲಿ ೬೪, ಹೀಗಿರುವ ೩೬೦ ಕಳೆಗಳನ್ನೂ ಧರಿಸಿರುವವಳು ವಿದ್ಯೆಯನ್ನು ಪುಷ್ಪಮಾಲಿಕೆಯಂತೆ ಧರಿಸಿರುವವಳು.

**೭೯೫. ಕಾಮದುಹೇನಮಃ—**

ಕಾಮಧೇನುಸ್ವರೂಪಿಣಿಯು. ಭಕ್ತರಿಗೆ ಇಷ್ಟಾರ್ಥವನ್ನು ಅನುಗ್ರಹಿಸುವವಳು.

**೭೯೬. ಕಾಮರೂಪಿಣ್ಯೈನಮಃ—**

"ಸೋಽಕಾಮಯತ ಬಹುಸ್ಯಾಂ ಪ್ರಜಾಯೆ ಯೇತಿ" ಎಂಬ ಶ್ರುತಿವಚನಾನುಸಾರ ಪರಬ್ರಹ್ಮನ ಸೃಷ್ಟಿಸಂಕಲ್ಪಸ್ವರೂಪಿಣಿಯು. ಕಾರಣಕ್ಕೆಲ್ಲಾ ಕಾರಣಳು. ಮನ್ಮಥಸ್ವರೂಪಿಣಿಯು. ಇಚ್ಛಾನುಸಾರವಾದ ರೂಪವನ್ನು ಧರಿಸುವವಳು. ಸೌಂದರ್ಯವತಿಯು.

**೭೯೭. ಕಲಾನಿಧಯೇನಮಃ—**

ಚಂದ್ರನ ಸ್ವರೂಪಿಣಿಯು. ಜ್ಞಾನಭಂಡಾರಸ್ವರೂಪಳು. ಮಧುರವಾಗಿಯೂ ಅಸ್ಫುಟವಾಗಿಯೂ ಆನಂದಮಯವಾಗಿಯೂ ಇರುವ ಸೂಕ್ಷ್ಮವಾದ ನಾದಕ್ಕೆ ಗಣಿರೂಪದಲ್ಲಿರುವವಳು. ಸ್ವರವ್ಯಂಜನ ಸಂಯೋಗದಿಂದ ಉಂಟಾಗುವ ಸಕಲ ಕಲೆಗೂ ನಿಧಿಯಾಗಿರುವಳು.

**೭೯೮. ಕಾವ್ಯಕಲಾಯೈನಮಃ—**

ಪರಬ್ರಹ್ಮನಿಗೆ ಕವಿ ಎಂದು ಶ್ರುತಿಪ್ರಮಾಣವಿರುವುದು. ಬ್ರಹ್ಮಾಂಡದ ಸೃಷ್ಟಿ, ಸ್ಥಿತಿ, ಲಯಸ್ವರೂಪವಾದ ಕವಿತಾ ವಿದ್ಯಾಸ್ವರೂಪಿಣಿಯು. ಕವಿನಿರ್ಮಿತ ಗ್ರಂಥಕ್ಕೆ ಕಾವ್ಯವೆಂದು ಹೆಸರು. ದೇವತಾಸಂಬಂಧವನ್ನುಂಟುಮಾಡುವ ಸ್ವರಗಳೊಡಗೂಡಿದ ವೇದಮಂತ್ರವು ಪ್ರಥಮವಾದುದು. ಎರಡನೆಯದಾದ ಶ್ಲೋಕರೂಪವಾದ ಕಾವ್ಯವನ್ನು ವಾಲ್ಮೀಕಿಮಹರ್ಷಿಗಳಿಗೆ ಪ್ರೇರಿಸಿ ಪ್ರಥಮದಲ್ಲಿ

ರಾಮಾಯಣರೂಪವಾಗಿ ಹೊರಪಡಿಸಿದವಳು ಶ್ರೀದೇವಿಯು. "ಪ್ರವೃತ್ತೇಯಂ ಸರಸ್ವತೀ" ಎಂಬದಾಗಿ ರಾಮಾಯಣದಲ್ಲಿಯೇ ಹೇಳಿರುವುದು. ಆದುದರಿಂದ ಕಾವ್ಯವಿದ್ಯೆಯುಂಟಾದುದು ಶ್ರೀದೇವಿಯಿಂದಲೇ.

**೭೯೯. ರಸಜ್ಞಾಯೈನಮಃ—**

ಅಕ್ಷರಗಳನ್ನು ಪದಗಳನ್ನು ಸಂದರ್ಭಕ್ಕೆ ಸರಿಯಾಗಿ ಆನಂದವಾಗುವಂತೆ ಜೋಡಿಸುವ ಅಭಿರುಚಿಗೆ ಸಂತೋಷಪಡುವವಳು. ಅಕ್ಷರ ಶಕ್ತಿಗಳು ಒಂದ ಕ್ಕೊಂದು ಸಂಯೋಗವಾಗಿ ಆನಂದವನ್ನುಂಟುಮಾಡುವಂತೆ ನಾದಬ್ರಹ್ಮದ ಸೃಷ್ಟಿ ಕಾರ್ಯಕ್ಕೆ ಸಂತೋಷಪಡುವವಳು. "ರಸೋವೈಸಃ" ಎಂಬ ಶ್ರುತಿಪ್ರಮಾಣ ದಂತೆ ಅಮೃತ ಮತ್ತು ಆನಂದದಲ್ಲಿ ಅಭಿರುಚಿಯುಳ್ಳವಳು.

**೮೦೦. ರಸಶೇವಧಯೇನಮಃ—**

ಸರ್ವದರಲ್ಲಿಯೂ ಸಾರವಾಗಿರತಕ್ಕ ರಸದ ನಿಧಿಯಸ್ವರೂಪಳು

**೮೦೧. ಪುಷ್ಟಾಯೈನಮಃ**—ಸ್ವಯಂಪೂರ್ಣಳು.

**೮೦೨. ಪುರಾತನಾಯೈನಮಃ—**

ಸಕಲಕ್ಕೂ ಆದಿಯಾಗಿರುವುದರಿಂದ ಪುರಾತನಳಾಗಿರುವವಳು.

**೮೦೩. ಪೂಜ್ಯಾಯೈನಮಃ—**

ತ್ರಿಮೂರ್ತಿಗಳಿಗೂ ಆದಿಯಾಗಿರುವುದರಿಂದ ಆರಾಧಿಸಲು ಸೇವಿಸಲು ಯೋಗ್ಯಳಾದವಳು.

**೮೦೪. ಪುಷ್ಕರಾಯೈನಮಃ**—ಪೋಷಿಸುವವಳು. ಅಮೃತಸ್ವರೂಪಳು.

**೮೦೫. ಪುಷ್ಕರೇಕ್ಷಣಾಯೈನಮಃ—**

ದಯಾಪೂರಿತವಾಗಿ ಅನುಗ್ರಹಮಾಡುವ ನೋಟವುಳ್ಳವಳು. ಕಮಲ ದೋಪಾದಿಯಲ್ಲಿ ನೇತ್ರವುಳ್ಳವಳು.

**೮೦೬. ಪರಸ್ಮೈಜ್ಯೋತಿಷೇನಮಃ—**

"ನತತ್ರ ಸೂರ್ಯೋಭಾತಿ ನಚಂದ್ರತಾರಕಂ ನೇಮಾವಿದ್ಯುತೋಭಾಂತಿ ಕುತೋಯಮಗ್ನಿಃ" ಎಂಬ ಶ್ರುತ್ಯಾಧಾರದಂತೆ ನಾವು ಕಾಣುವ ಪ್ರಕಾಶಕ್ಕೆಲ್ಲಾ ಪ್ರಕಾಶಕೊಡುವ ಸ್ವಯಂಪ್ರಕಾಶವಾದ ಪರಬ್ರಹ್ಮಸ್ವರೂಪಿಣಿಯು.

**೮೦೭. ಪರಸ್ಮೈಧಾಮ್ನೇನಮಃ—**

ಪುನರಾವರ್ತಿ ಇಲ್ಲದ ಬಹು ಹೆಚ್ಚಿನದಾದ ಸ್ವಯಂ ಜ್ಯೋತಿಸ್ವರೂಪ ಮತ್ತು ಸರ್ವವ್ಯಾಪಕವಾದ ವಾಸಸ್ಥಾನವಾಗಿರುವವಳು. ಅಂದರೆ ಪರಬ್ರಹ್ಮಪದವಿಯ ಸ್ವರೂಪಿಣಿಯು. ಈ ತತ್ವಕ್ಕೆ "ನತದ್ಭಾಸಯ ತೇಸೂರ್ಯೋ ನಶಶಾಂಕೋನ ಪಾವಕಃ। ಯದ್ಗತ್ವಾನನಿವರ್ತಂತೇ ತದ್ಧಾಮ ಪರಮಂಮಮ॥" ಎಂಬ ಶ್ರೀ ಕೃಷ್ಣ ಪರಮಾತ್ಮನ ಭಗವದ್ಗೀತಾ ವಾಕ್ಯವು ಆಧಾರವಾಗಿದೆ.

**೮೦೮. ಪರಮಾಣವೇನಮಃ—**

"ಅಣೋರಣೀಯಾನ್ಮಹತೋ ಮಹೀಯಾನ್" ಎಂಬ ಶ್ರುತ್ಯಾಧಾರದಂತೆ ಅರಿಯಲಸಾಧ್ಯವಾದ ಸೂಕ್ಷ್ಮಾತ್ಸೂಕ್ಷ್ಮತರಸ್ವರೂಪಿಣಿಯು.

**೮೦೯. ಪರಾತ್ಪರಾಯೈನಮಃ—**

ಶ್ರೇಷ್ಠಕ್ಕಿಂತಲೂ ಶ್ರೇಷ್ಠವಾದವಳು. ಶ್ರೇಷ್ಠರೆನಿಸುವ ತ್ರಿಮೂರ್ತಿಗಳಿಗಿಂತಲೂ ಶ್ರೇಷ್ಠವಾದ ಪರಬ್ರಹ್ಮಸ್ವರೂಪಿಣಿಯು.

**೮೧೦. ಪಾಶಹಸ್ತಾಯೈನಮಃ—**

ಎಡದ ಕೈಯಿನಲ್ಲಿ ಪಾಶವನ್ನುಧರಿಸಿರುವವಳು. ಇದರ ಅರ್ಥವನ್ನು ಹಿಂದೆಯೆ ಬರೆದಿರುವುದು.

**೮೧೧. ಪಾಶಹನ್ತ್ರ್ಯೈನಮಃ**—ಅಜ್ಞಾನದ ಪಾಶವನ್ನು ನಾಶಮಾಡುವವಳು.

**೮೧೨. ಪರಮಂತ್ರವಿಭೇದಿನ್ಯೈನಮಃ—**

ಮಾರಣ ಶೂನ್ಯ ಮುಂತಾದ ರಾಕ್ಷಸೀಸ್ವಭಾವಕ್ಕೆ ಸೇರಿದ ಇತರರ ದುಷ್ಟ ಮಂತ್ರಗಳ ಶಕ್ತಿಗಳನ್ನೆಲ್ಲಾ ಧ್ವಂಸಮಾಡುವವಳು.

**೮೧೩. ಮೂರ್ತಾಯೈನಮಃ—**

ಸಗುಣಸ್ವರೂಪಳು. ದೇವತಾ ಅವತಾರಗಳ ಆಕಾರಸ್ವರೂಪಿಣಿಯು.

**೮೧೪. ಅಮೂರ್ತಾಯೈನಮಃ—**

ಆಕಾರರಹಿತಳು. ನಿರ್ಗುಣ ಬ್ರಹ್ಮಸ್ವರೂಪಿಣಿಯು.

**೮೧೫. ಅನಿತ್ಯತೃಪ್ತಾಯೈನಮಃ—**

ಅನಿತ್ಯವಾದ ಜಗತ್ತನ್ನು ಭಕ್ಷಿಸಿ ತೃಪ್ತಿಪಡುವವಳು. ಅನಿತ್ಯವಾದ ಅಜ್ಞಾನವನ್ನು ನಾಶಮಾಡಿ ಸಂತೋಷಪಡುವವಳು. "ಪತ್ರಂಪುಷ್ಪಂ ಫಲಂತೋಯಂ ಯೋಮೇಭಕ್ತ್ಯಾ ಪ್ರಯಚ್ಛತಿ" ಎಂಬ ಭಗವದ್ಗೀತಾ ವಚನದಂತೆ ಅನಿತ್ಯವಾದ ಪತ್ರ, ಪುಷ್ಪ, ಫಲಗಳಿಂದಲೂ ತೃಪ್ತಿಪಡುವವಳು. ಅ ಎಂದರೆ ಪರಬ್ರಹ್ಮ, ಆದರಲ್ಲಿ ನಿತ್ಯತೃಪ್ತಳು.

**೮೧೬. ಮುನಿಮಾನಸಹಂಸಿಕಾಯೈನಮಃ—**

ಪ್ರಪಂಚ ವ್ಯವಹಾರದಲ್ಲಿ ಇದ್ದರೂ ಅದಕ್ಕೆ ಅಂಟದೆ ಮೌನವಾಗಿರುವ ಬ್ರಹ್ಮನಿಷ್ಠನಿಗೆ ಮುನಿಯೆಂದು ಹೆಸರು. ಹಂಸೆಯು ಸರೋವರದಲ್ಲಿ ನಲಿದಾಡುತ್ತಾ ಸಂಚರಿಸುತ್ತಿರುವಂತೆ ಬ್ರಹ್ಮನಿಷ್ಠನ ಮನಸ್ಸೆಂಬ ಸರೋವರದಲ್ಲಿ ನಲಿದಾಡುತ್ತಾ ಸಂತೋಷವಾಗಿರುವವಳು.

**೮೧೭. ಸತ್ಯವ್ರತಾಯೈನಮಃ—**

ಅನಿತ್ಯವಲ್ಲದ ಶಾಶ್ವತವಾದ ಪರಬ್ರಹ್ಮಪದವಿಯನ್ನು ಅನುಸರಿಸಿರುವ ಆಚರಣೆಯುಸ್ವರೂಪದವಳು.

**೮೧೮. ಸತ್ಯರೂಪಾಯೈನಮಃ—**

ಶಾಶ್ವತವಾದ ತ್ರಿಕಾಲದಲ್ಲೂ ಯಾವ ಬಾಧೆಯೂ ಇಲ್ಲದೆ ಏಕಸ್ವರೂಪಿಯಾಗಿರುವ ಪರಬ್ರಹ್ಮಸ್ವರೂಪಿಣಿಯು.

**೮೧೯. ಸರ್ವಾನ್ತರ್ಯಾಮಿಣ್ಯೈನಮಃ—**

ಚರಾಚರ ರೂಪವಾದ ಬ್ರಹ್ಮಾಂಡದಲ್ಲೆಲ್ಲಾ ಒಳಗಡೆ ಇದ್ದುಕೊಂಡು ಪ್ರಕಾಶಿಸುತ್ತಿರುವವಳು.

**೮೨೦. ಸತ್ಯೈನಮಃ—**

ಪತಿವ್ರತಾಧರ್ಮದಲ್ಲಿ ಚೆನ್ನಾಗಿ ನಿರತವಾಗಿರುವ ಹೆಂಗಸು ಸತಿಯೆನ್ನಲ್ಪಡುವಳು. ಶ್ರೀದೇವಿಯು ದಕ್ಷಪುತ್ರಿಯಾಗಿ ಅವತರಿಸಿ ಸತಿ ಎಂಬ ನಾಮವನ್ನು ಪಡೆದು ಈಶ್ವರನ ಪತ್ನಿಯಾದಳು. ಸತ್ಯಸ್ವರೂಪವಾದ ಪರಬ್ರಹ್ಮಸ್ವರೂಪಿಣಿಯು.

**೮೨೧. ಬ್ರಹ್ಮಾಣ್ಯೈನಮಃ—**

"ಬ್ರಹ್ಮಪುಚ್ಛಂ ಪ್ರತಿಷ್ಠಾ ಮತ್ತು ಬ್ರಹ್ಮಣ ಆಣೀಸ್ಥಃ" ಎಂಬ ಶ್ರುತಿ ವಚನಗಳಂತೆ ಪರಬ್ರಹ್ಮನ ಏಕದೇಶದಲ್ಲಿರುವ ಪರಬ್ರಹ್ಮಶಕ್ತಿಸ್ವರೂಪಿಣಿಯು.

**೮೨೨. ಬ್ರಹ್ಮಣೇನಮಃ—**

ಪರಬ್ರಹ್ಮಸ್ವರೂಪಿಣಿಯು. ಹಿಂದಿನ ನಾಮದಲ್ಲಿ ಶ್ರೀದೇವಿಯು ಪರಬ್ರಹ್ಮ ಶಕ್ತಿಯೆಂದು ಈ ನಾಮದಲ್ಲಿ ಶ್ರೀದೇವಿಯು ಪರಬ್ರಹ್ಮಸ್ವರೂಪಿಣಿಯೆಂದೂ ತಿಳಿಸಿದೆ. ಬ್ರಹ್ಮ ಬೇರೆ ಶಕ್ತಿ ಬೇರೆಯಲ್ಲ. ಪರಬ್ರಹ್ಮವೆಂದರೆ ಶಕ್ತ ಮತ್ತು ಶಕ್ತಿಗಳೆರಡೂ ಸೇರಿ ಒಂದಾಗಿರುವ ಸ್ವರೂಪವಾಗಿರುವುದರಿಂದ ಶಕ್ತಿ, ಶಕ್ತ ಎಂಬ ಎರಡು ವಿಧಗಳಿಂದಲೂ ಪರಬ್ರಹ್ಮ ಒಂದೇಯೆಂದು ೮೨೧ ಮತ್ತು ೮೨೨ ನೇ ನಾಮಗಳು ಪ್ರತಿಪಾದಿಸುತ್ತವೆ.

**೮೨೩. ಜನನ್ಯೈನಮಃ**—ಬ್ರಹ್ಮಾಂಡವನ್ನು ಸೃಷ್ಟಿಸುವವಳು. ಜಗನ್ಮಾತೆಯು.

**೮೨೪. ಬಹುರೂಪಾಯೈನಮಃ—**

ಸೃಷ್ಟಿಸಿದ ಬ್ರಹ್ಮಾಂಡದ ಸಕಲರೂಪಳು ಸೃಷ್ಟಿ, ಸ್ಥಿತಿ, ಲಯಗಳಿಗೋಸ್ಕರ ಅನೇಕ ಅವತಾರಗಳನ್ನೆತ್ತಿರುವವಳು.

**೮೨೫. ಬುಧಾರ್ಚಿತಾಯೈನಮಃ**—ಜ್ಞಾನಿಗಳಿಂದ ಪೂಜಿಸಲ್ಪಡುವವಳು.

**೮೨೬. ಪ್ರಸವಿತ್ರ್ಯೈನಮಃ—**

ಬೀಜದಲ್ಲಿದ್ದ ವೃಕ್ಷಗಳ ಸಕಲಸಾರವೂ ಹೊರಕ್ಕೆ ಉದಯಿಸಿ ಫಲಭರಿತ ವಾದ ವೃಕ್ಷವು ಹೇಗಾಗುವುದೋ ಹಾಗೆ ಬೀಜರೂಪದಲ್ಲಿದ್ದ ಸಕಲ ಚರಾಚರ ರೂಪವಾದ ಜಗತ್ತನ್ನೂ ಹೊರಗೆಡುವವಳು. ಅಂದರೆ ಸೃಷ್ಟಿಸುವವಳು. ಇದಕ್ಕೆ "ಧಾತಾಯಥಾ ಪೂರ್ವಮಕಲ್ಪಯತ್ ದಿವಂಚ ಪೃಥವೀಂಚಾನ್ತರಿಕ್ಷ ಮಥೋ ಸುವಃ" ಎಂಬ ಶ್ರುತ್ಯಾಧಾರವಿರುವುದು.

**೮೨೭. ಪ್ರಚಂಡಾಯೈನಮಃ—**

ಅತ್ಯಂತದರ್ಪದವಳು ಬಹು ಬುದ್ಧಿವಂತಳು ಬಹು ಕುಶಲತೆಯುಳ್ಳವಳು.

**೮೨೮. ಆಜ್ಞಾಯೈನಮಃ—**

ಆಜಾಸ್ವರೂಪಳು. ನಿಯಾಮಕಳು. ಇವಳ ಆಜ್ಞೆಗೆ ಹೆದರಿ ವಾಯು,

ಸೂರ್ಯ ಮೊದಲಾಗಿ ಬ್ರಹ್ಮಾಂಡದಲ್ಲಿನ ಸಕಲವೂ ತಮ್ಮ ತಮ್ಮ ಕಾರ್ಯಗಳನ್ನು ಮಾಡುತ್ತವೆಂದು ಶ್ರುತಿಯು ತಿಳಿಸುವುದು.

**೮೨೯. ಪ್ರತಿಷ್ಠಾಯೈನಮಃ—**

ಸೃಷ್ಟಿಸಿದ ಬ್ರಹ್ಮಾಂಡಕ್ಕೆಲ್ಲ ಅಸ್ತಿಭಾರದಂತೆ ಮೂಲಾಧಾರಳು. ಬ್ರಹ್ಮಾಂಡ ರೂಪವಾಗಿ ಚೆನ್ನಾಗಿ ನೆಲೆಸಿರುವವಳು.

**೮೩೦. ಪ್ರಕಟಾಕೃತ್ಯೈನಮಃ—**

ವೃಕ್ಷವು ಹೇಗೆ ಬೀಜದ ವಿವರವಾದ ಆಕಾರವಾಗಿರುವುದೋ ಹಾಗೆ ವಿವರವಾದ ಬ್ರಹ್ಮಾಂಡಸ್ವರೂಪದ ಆಕಾರವಾಗಿರುವವಳು. ವಿರಾಟ್ಸ್ವರೂಪಿಣಿಯು.

**೮೩೧. ಪ್ರಾಣೇಶ್ವರ್ಯೈನಮಃ—**

ಸಕಲವಸ್ತುಗಳ ಜೀವಿತಕ್ಕೂ ನಾಥಳು. "ಪ್ರಾಣಸ್ಯ ಪ್ರಾಣಃ" ಎಂಬ ಶ್ರುತ್ಯಾಧಾರದಂತೆ ಪಂಚಪ್ರಾಣ, ಇಂದ್ರಿಯ, ಅಂತಃಕರಣ, ಇವುಗಳಿಗೂ ಪ್ರಭುವು.

**೮೩೨. ಪ್ರಾಣದಾತ್ರ್ಯೈನಮಃ—**

"ಸರ್ವೇಪ್ರಾಣಾ ಅನುತ್ಕ್ರಾಮಂತಿ" ಎಂಬ ಶ್ರುತ್ಯಾಧಾರದಂತೆ ಸಕಲವಸ್ತುಗಳ ಜೀವಿತವನ್ನೂ ಪಂಚಪ್ರಾಣ ಮತ್ತು ಇಂದ್ರಿಯಗಳನ್ನೂ ಪೋಷಿಸತಕ್ಕವಳು.

**೮೩೩. ಪಂಚಾಶತ್ಪೀಠರೂಪಿಣ್ಯೈನಮಃ—**

ಅಕಾರಾದಿ ಕ್ಷಕಾರಾಂತವಾಗಿರುವ ಐವತ್ತು ಅಕ್ಷರಗಳಲ್ಲಿ ನೆಲೆಸಿರುವವಳು. ಅಂದರೆ ಅಕ್ಷರಶಕ್ತಿಯಾಗಿರುವವಳು.

**೮೩೪. ವಿಶೃಂಖಲಾಯೈನಮಃ—**

ಪ್ರಪಂಚದಿಂದಲೂ ಮತ್ತಾವುದರಿಂದಲೂ ಬದ್ಧಳಾಗದೆ ನಿರ್ಲಿಪ್ತವಾಗಿರುವವಳು.

**೮೩೫. ವಿವಕ್ತಸ್ಥಾಯೈನಮಃ—**

ಪ್ರಪಂಚಕ್ಕೆ ಯಾವ ಸಂಬಂಧವೂ ಇಲ್ಲದಂತೆ ಏಕಾಂತವಾಗಿ ತಾನೇ ತಾನಾಗಿ ವಾಸವಾಗಿರುವವಳು.

**೮೩೬. ವೀರಮಾತ್ರೇನಮಃ—**

ರಣಾಗ್ರಿಗಳಾದ ಕ್ಷತ್ರಿಯರಿಗೆ ಮಾತೆಯಾಗಿರುವವಳು. ಮೋಕ್ಷವನ್ನು ಪಡೆಯ ಬೇಕೆಂದು ಅಜ್ಞಾನದೊಡನೆ ಹೋರಾಡುತ್ತಿರುವ ಧೀರರನ್ನು ಪೋಷಿಸುವವಳು.

**೮೩೭. ವಿಯತ್ಪ್ರಸ್ವೈನಮಃ—**

ಜಗತ್ತೆಲ್ಲಾ ಆಕಾಶದೊಳಗಿರುವುದು. ಇಂತಹ ಆಕಾಶವನ್ನೇ ಸೃಷ್ಟಿಸಿರುವವಳು. ಈ ತತ್ವಕ್ಕೆ "ಆತ್ಮನ ಆಕಾಶಸ್ಸಂಭೂತಃ" ಅಂದರೆ ಪರಬ್ರಹ್ಮನಿಂದ ಆಕಾಶವು ಸೃಷ್ಟಿಸಲ್ಪಟ್ಟಿತು ಎಂಬ ಶ್ರುತ್ಯಾಧಾರವಿದೆ.

**೮೩೮. ಮುಕುಂದಾಯೈನಮಃ—**

ಮೋಕ್ಷವನ್ನು ಅನುಗ್ರಹಿಸುವವಳು. ಶ್ರೀ ಕೃಷ್ಣಸ್ವರೂಪಿಣಿಯು.

**೮೩೯. ಮುಕ್ತಿನಿಲಯಾಯೈನಮಃ—**

ಮೋಕ್ಷಸ್ವರೂಪವಾದ ಪರಮಪದದಸ್ವರೂಪಿಣಿಯು.

**೮೪೦. ಮೂಲವಿಗ್ರಹರೂಪಿಣ್ಯೈನಮಃ—**

ಆದಿಶಕ್ತಿಸ್ವರೂಪಿಣಿಯಾಗಿರುವವಳು. ಆಕಾರಕ್ಕೆ ಪ್ರಥಮರೂಪಳಾಗಿರುವ ಮಾತೆಯ ಸ್ವರೂಪಿಣಿಯು.

**೮೪೧. ಭಾವಜ್ಞಾಯೈನಮಃ—**

ಭಾವಶಬ್ದಕ್ಕೆ ಇರುವಿಕೆ, ಸ್ವಭಾವ, ಅಭಿಪ್ರಾಯ, ಆಕಾರ, ಹುಟ್ಟುವಿಕೆ, ಜ್ಞಾನಿ, ಗರ್ಭಕೋಶ, ಸಂಪತ್ತು, ಮರುಕ, ವಿನೋದ, ರಾಜ್ಯ, ಧರ್ಮ, ಧ್ಯಾನ, ಈಶ್ವರ, ಭಕ್ತಿ ಮುಂತಾದ ಅನೇಕ ಅರ್ಥಗಳಿವೆ. ಆದುದರಿಂದ ಬ್ರಹ್ಮಾಂಡದ ಸೃಷ್ಟಿ, ಸ್ಥಿತಿ, ಲಯಗಳ ವಿಚಾರಗಳ ಸಕಲಭಾವಗಳನ್ನೂ ಅರಿತಿರುವವಳು.

**೮೪೨. ಭವರೋಗಘ್ನ್ಯೈನಮಃ—**

ಜನನ ಮರಣರೂಪವಾದ ಪ್ರಪಂಚದಲ್ಲಿನ ಬಂಧನ, ಕಷ್ಟ, ರೋಗಗಳನ್ನು ಪರಿಹರಿಸುವವಳು.

**೮೪೩. ಭವಚಕ್ರಪ್ರವರ್ತಿನ್ಯೈನಮಃ—**

ಭಂಡಿಯ ಚಕ್ರವು ತಿರುಗುತ್ತಿರುವಹಾಗೆ ಜಗತ್ತು ತನ್ನ ಕಾರ್ಯದಲ್ಲಿ ನಡೆಯುತ್ತಿರುವಂತೆ ನಿಯಮಿಸಿರುವವಳು. ದೇಹ ವ್ಯಾಪಾರಕ್ಕೋಸ್ಕರ ದೇಹದ

ಷಟ್ಚಕ್ರಗಳ ಕಾರ್ಯಗಳೆಂದರೆ ಪಂಚಕೋಶಗಳ ಕಾರ್ಯಗಳು ಯಂತ್ರದಂತೆ ನಡೆಯು ವಂತೆ ನಿಯಮಿಸಿರುವವಳು.

**೮೪೪. ಛನ್ದಸ್ಸಾರಾಯೈನಮಃ—**

ಛನ್ದಸ್ಸೆಂದರೆ ವೇದ. ವೇದಗಳಿಂದ ಮುಖ್ಯವಾಗಿ ತಿಳಿಯುವುದು ಮತ್ತು ತಿಳಿದುಕೊಳ್ಳಬೇಕಾದುದು ಪರಬ್ರಹ್ಮಸ್ವರೂಪವೊಂದೇ ಸತ್ಯವಾದುದೆಂತಲೂ ಈ ಪರಬ್ರಹ್ಮವೇ ನಾನೆಂತಲೂ ತಿಳಿದು ಅನುಭವಕ್ಕೆ ತಂದುಕೊಳ್ಳುವುದೇ ವೇದದ ಸಾರವಾಗಿರುವುದು. ಆದುದರಿಂದ ವೇದದ ಸಾರಭೂತವಾಗಿರುವ ಪರಬ್ರಹ್ಮ ಸ್ವರೂಪಿಣಿಯಾಗಿರುವವಳು.

ಛನ್ದಸ್ಸೆಂದರೆ ಆಹ್ಲಾದವೆಂದು ಅರ್ಥವಾಗುವುದರಿಂದಲೂ ಆಹ್ಲಾದವು ಆನಂದಾಂಶಕ್ಕೆ ಸೇರಿರುವುದರಿಂದಲೂ ವಿದ್ಯಾನಂದ, ಯೋಗಾನಂದ, ವಿಷಯಾ ನಂದಗಳಿಗೆಲ್ಲಾ ಮೂಲವಾದ ಬ್ರಹ್ಮಾನಂದಸ್ವರೂಪಿಣಿಯು.

ಛನ್ದಸ್ಸೆಂದರೆ ಮಾತ್ರ ಅಕ್ಷರ ಗಣಸಂಖ್ಯೆಯನ್ನು ಕ್ಲಿಪ್ತಮಾಡಿ ಪಾದ ಸ್ವರೂಪವನ್ನು ನಿರ್ಣಯಿಸುವುದೆಂದು ಅರ್ಥವಿರುವುದರಿಂದ ಕಾಲ, ಕ್ರಿಯಾ, ಪರಿಮಾಣರೂಪವಾದ ವಸ್ತುತತ್ವವಾದ ಈ ಜಗತ್ತಿನಸಾರವು ಪರಬ್ರಹ್ಮಸ್ವರೂಪಿಣಿ ಯಾದ ಶ್ರೀದೇವಿಯೇ ಆಗಿರುತ್ತಾಳೆ.

**೮೪೫. ಶಾಸ್ತ್ರಸಾರಾಯೈನಮಃ —**

ವೇದದ ವಿವಿಧ ವಿಚಾರಗಳಲ್ಲಿ ಆಯಾಯ ಪ್ರಕರಣಗಳ ವಿಚಾರಗಳನ್ನು ಪ್ರತ್ಯೇಕಪ್ರತ್ಯೇಕವಾಗಿ ತಿಳಿಸುವುದಕ್ಕೆ ಸಾಸ್ತ್ರವೆಂದು ಹೆಸರು. ವ್ಯಾಕರಣಶಾಸ್ತ್ರ, ಛಂದಶಾಸ್ತ್ರ, ಜೋತಿಷಶಾಸ್ತ್ರ, ಮೀಮಾಂಸಾಶಾಸ್ತ್ರ, ನ್ಯಾಯಶಾಸ್ತ್ರ, ಭೂಗರ್ಭಶಾಸ್ತ್ರ, ಶಿಲ್ಪಿಶಾಸ್ತ್ರ ಮುಂತಾದ ಅನೇಕ ವಿಚಾರಗಳನ್ನೊಳಗೊಂಡ ಆಯಾಯ ಶಾಸ್ತ್ರಗಳಿವೆ. ಮೊಸರನ್ನು ಕಡೆದು ಬೆಣ್ಣೆಯನ್ನು ತೆಗೆಯುವಂತೆ ಸಕಲಶಾಸ್ತ್ರಗಳ ಸಾರಭೂತವೂ ಪರಬ್ರಹ್ಮವೇ ಸತ್ಯವಾದುದೆಂತಲೂ ಅದನ್ನು ನಾವು ಹೊಂದಬೇಕೆಂತಲೂ ತಿಳಿ ಸುವ ಸಾರವಾಗಿದೆಯೇ ಹೊರತು ಅನ್ಯಥಾ ಇಲ್ಲ. ಆದುದರಿಂದ "ಶಾಸ್ತ್ರಯೋ ನಿತ್ವಾತ್" ಎಂಬ ಬ್ರಹ್ಮಸೂತ್ರದ ವಚನದಂತೆ ಸಕಲಶಾಸ್ತ್ರಗಳ ಸಾರವೂ ಪರಬ್ರಹ್ಮವೇ ಸತ್ಯವಾದುದೆಂತಲೂ ಅದನ್ನು ನಾವು ಹೊಂದಬೇಕೆಂತಲೂ ತಿಳಿಸುವ ಸಾರವಾಗಿರುವುದೇ ಹೊರತು ಅನ್ಯಥಾ ಅಲ್ಲ. ಆದುದರಿಂದ ಎಲ್ಲಾ ಶಾಸ್ತ್ರಗಳ ಸಾರಭೂತವಾಗಿರುವವಳೇ ಪರಬ್ರಹ್ಮಸ್ವರೂಪಿಣಿಯಾದ ಶ್ರೀದೇವಿಯು.

**೮೪೬. ಮನ್ತ್ರಸಾರಾಯೈನಮಃ—**

ಮನ್ತ್ರವೆಂದರೆ "ಮನನತ್ರಾಣಾತ್ ಮನ್ತ್ರಃ" ಎಂಬ ಅರ್ಥದಂತೆ ಉದಾತ್ತ ಅನುದಾತ್ತ, ಸ್ವರಿತ, ಪ್ರಚಯಗಳೆಂಬ ಸ್ವರಗಳ ಶಕ್ತಿಗಳಿಂದ ಅಂದರೆ ಸ್ವರದಲ್ಲಿರುವ ನಾದದ ತ್ರಾಣದಿಂದ ಮತ್ತು ಬೀಜಾಕ್ಷರಗಳಲ್ಲಿರುವ ನಾದದ ಶಕ್ತಿಗಳಿಂದ ಆಕಾಶಾಂತರ್ಗತವಾಗಿ ಕಳಾಸ್ವರೂಪದಲ್ಲಿರುವ ದೇವತಾಶಕ್ತಿಗಳೊಡನೆ ಸಂಬಂಧಿಸುವುದನ್ನು ಉಂಟುಮಾಡುವುದರಿಂದ ನಾದದಶಕ್ತಿಗಳಿಗೆ ಮನ್ತ್ರವೆಂದು ಹೆಸರು. ಈ ನಾದದಶಕ್ತಿಯನ್ನು ಬಿಟ್ಟರೆ ಪದದಲ್ಲಿನ ಅಕ್ಷರಶಕ್ತಿಗಳು ಮಾತ್ರ ಇರುತ್ತವೆ. ಆದುದರಿಂದ ಅಕ್ಷರಶಕ್ತಿಗಳು ಸ್ವರಶಕ್ತಿಗಳೊಡನೆ ಕಲೆತರೇನೇ ಮಂತ್ರವೆನಿಸಿಕೊಳ್ಳುವುದು. ಮಂತ್ರಗಳಲ್ಲಿರುವ ಇಂತಹ ನಾದೋಪಾಸನೆಯ ಸಾರವೂ ನಾದ ಮತ್ತು ಕಳೆಗೂ ಅತೀತವಾಗಿರುವ ಪರಬ್ರಹ್ಮಸ್ವರೂಪಿಣಿಯಾದ ಶ್ರೀದೇವಿಯನ್ನು ಹೊಂದಬೇಕೆನ್ನುವುದೇ ಆದುದರಿಂದ ಶ್ರೀದೇವಿಯು ಮಂತ್ರಸಾರಸ್ವರೂಪಿಣಿಯಾಗಿರುವವಳು. ಶ್ರೀ ಕೃಷ್ಣಪರಮಾತ್ಮ, ತುಂಬುರ, ನಾರದ ಮುಂತಾದ ಮಹರ್ನಿಯರುಗಳಿಂದ ಗಾನಮಾಡಲ್ಪಟ್ಟಿರುವ ನಮ್ಮ ಸಂಗೀತಶಾಸ್ತ್ರದಸಾರವೂ ಗಾನವಿದ್ಯೆಯ ನಾದೋಪಾಸನೆಯ ಮೂಲಕ ಚಿದ್ವಸ್ತುವಾದ ಶ್ರೀದೇವಿಯನ್ನು ಹೊಂದಬೇಕೆಂಬುದೇ ಆಗಿದೆ.

**೮೪೭. ತಲೋದರ್ಯೈನಮಃ—**

ಬಹು ಸಣ್ಣದಾದ ಸೊಂಟವುಳ್ಳವಳು. ಬಹು ತೆಳ್ಳಗಿರುವ ಹೊಟ್ಟೆಯುಳ್ಳವಳು.

**೮೪೮. ಉದಾರಕೀರ್ತ್ಯೈನಮಃ—**

ಎಲ್ಲೆಲ್ಲೂ ವ್ಯಾಪಿಸಿರುವ ಉತ್ಕೃಷ್ಟವಾದ ಕೀರ್ತಿಯುಳ್ಳವಳು.

**೮೪೯. ಉದ್ದಾಮವೈಭವಾಯೈನಮಃ—**

ಅಮಿತವಾದ ಮತ್ತು ದಿವ್ಯವಾದ ಮಹಿಮೆಯೂ ಕೀರ್ತಿಯೂ ಗೌರವವೂ ಸಂಪತ್ತೂ ಉಳ್ಳವಳಾಗಿರುವವಳು.

**೮೫೦. ವರ್ಣರೂಪಿಣ್ಯೈನಮಃ—**

ಅಕ್ಷರಗಳ ಸ್ವರೂಪಿಣಿಯು. ಬಣ್ಣಗಳ ಕಾಂತಿಯುಸ್ವರೂಪಿಣಿಯು. ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ವರ್ಣಸ್ವರೂಪಳು.

**೮೫೧. ಜನ್ಮಮೃತ್ಯು ಜರಾತಪ್ತ ಜನವಿಶ್ರಾನ್ತಿ ದಾಯಿನ್ಯೈನಮಃ—**

ಹುಟ್ಟು, ಸಾವು, ಮುಪ್ಪುಗಳ ತೊಂದರೆಯಿಂದ ಬೆಂದು ಬಳಲುತ್ತಿರುವ ವರಿಗೆ ಶಾಶ್ವತವಾದ ವಿಶ್ರಾಂತಿ ಸುಖವನ್ನು ಅನುಗ್ರಹಿಸಿ ಕೊಡುವವಳು.

**೮೫೨. ಸರ್ವೋಪನಿಷದುದ್ಘುಷ್ಟಾಯೈನಮಃ—**

ಪರಬ್ರಹ್ಮವೇ ಸತ್ಯವಾದುದೆಂತಲೂ ಅಂತಹ ಪರಬ್ರಹ್ಮಪದವನ್ನು ಸಾಕ್ಷಾತ್ಕರಿಸಿಕೊಳ್ಳಬೇಕೆಂದು ಎಲ್ಲಾ ಉಪನಿಷತ್ತುಗಳಿಂದ ಉದ್ಘೋಷಿಸಲ್ಪಡುವ ಪರಬ್ರಹ್ಮಸ್ವರೂಪಿಣಿಯಾಗಿರುವಳು. ಎಲ್ಲಾ ಉಪನಿಷತ್ತುಗಳೆಂದರೆ ದಶೋಪನಿಷತ್ಮಾತ್ರವೇ ಅಲ್ಲ. ಎಲ್ಲಾ ಉಪನಿಷತ್ತುಗಳೂ ಸೇರಿದರೇನೆ ಸರ್ವೋಪನಿಷತ್ತು ಎನಿಸಿಕೊಳ್ಳುತ್ತದೆ. ಶ್ರೀರಾಮಚಂದ್ರನೆ ಮುಕ್ತಿಕೋಪನಿಷತ್ತಿನಲ್ಲಿ ೧೦೮ ಉಪನಿಷತ್ತುಗಳ ವಿಚಾರವನ್ನು ತಿಳಿಸಿರುತ್ತಾನೆ.

**೮೫೩. ಶಾನ್ತ್ಯತೀತಕಳಾತ್ಮಿಕಾಯೈನಮಃ—**

ಆಕಾಶಾಂತರ್ಗತವಾಗಿರುವ ಓಂಕಾರದ ಕಳೆಗೆ ಶಾಂತ್ಯತೀತವೆಂದು ಹೆಸರು. ಶಾಂತ್ಯತೀತವೆಂದರೆ ಶಾಂತಿಸ್ಥಿತಿಗಿಂತಲೂ ಅತೀತವಾದುದೆಂದು ಅರ್ಥ. ಸ್ವಾಭಾವಿಕವಾಗಿ ಶಾಂತಕಾಲವಾಗಿರುವ ಬೆಳಗಿನ ಮತ್ತು ಸಾಯಂಕಾಲದ ಹೊತ್ತಿನಲ್ಲಿ ನಿರ್ಜನವಾದ ಮತ್ತು ಯಾವ ಗಲಭೆಗಳೂ ಇಲ್ಲದ ಸ್ಥಳಕ್ಕೆ ಹೋದಾಗ ಆಕಾಶ ಮೊದಲುಗೊಂಡು ಸರ್ವವೂ ಶಾಂತಿಸ್ಥಿತಿಯಲ್ಲಿರುವುದು ನಮಗೆ ಗೋಚರವಾಗುವುದು. ಈ ಶಾಂತಿಸ್ವಭಾವಕ್ಕಿಂತಲೂ ಅತೀತವಾಗಿರುವುದು ಮತ್ತು ಕಾರಣವಾಗಿರುವುದು ಆಕಾಶಾಂತರ್ಗತವಾಗಿರುವ ಆನಂದಮಯವಾಗಿರುವ ಕಳಾಸ್ವರೂಪವು. ಮನುಷ್ಯನಲ್ಲೂ ಶಾಂತಿಸ್ವಭಾವಕ್ಕಿಂತ ಅತೀತವಾದುದು ಕಳಾಸೋಪಾನವಾದ ಉನ್ಮನೀಸೋಪಾನವು. ಆದುದರಿಂದ ಶ್ರೀದೇವಿಯು ಆಕಾಶಾಂತರ್ಗತವಾದ ಕಳಾಸ್ವರೂಪಿಣಿಯು ಮತ್ತು ಉನ್ಮನೀಸ್ವರೂಪಿಣಿಯು.

**೮೫೪. ಗಮ್ಭೀರಾಯೈನಮಃ—**

ದೇವತ್ವವನ್ನು ಸೂಚಿಸುವ ಸ್ವಭಾವದವಳು. ಮೇಲಿನನಾಮದಲ್ಲಿ ತಿಳಿಸಿರುವ ಆಕಾಶಾಂತರ್ಗತವಾದ ಕಳೆಯು ಗಭ್ಭೀರಸ್ವಭಾವವಾದುದು. ಅಲ್ಲದೆ ನಮ್ಮಲ್ಲಿ ಉನ್ಮನೀ ಸೋಪಾನವೂ ದೇವತಾ ತೇಜಃಪುಂಜವಾದ ಸ್ವಭಾವವುಳ್ಳದ್ದು.

**೮೫೫. ಗಗನಾನ್ತಸ್ಥಾಯೈನಮಃ—**

ಆಕಾಶಾಂತರ್ಗತವಾಗಿ ನೆಲೆಸಿರುವವಳು. ಆಕಾಶಾಂತರ್ಗತವಾಗಿರುವುದು ಕಳಾಸ್ವರೂಪ ಮತ್ತು ಪರಬ್ರಹ್ಮಸ್ವರೂಪ. ಈ ಎರಡು ಸ್ವರೂಪದವಳು.

**೮೫೬. ಗರ್ವಿತಾಯೈನಮಃ—**

ಮಹದಹಂಕಾರವೆಂದರೆ ಸರ್ವವೂ ನಾನೆಂಬ ಜಂಭದವಳು. ಸರ್ವವೂ ನಾನೆಂಬ ಜ್ಞಾನದ ಸ್ಥಿತಿಯು ಆಕಾಶಾಂತರ್ಗತವಾದ ಕಳಾಸ್ವರೂಪದಲ್ಲಿರುವುದು.

**೮೫೭. ಗಾನಲೋಲುಪಾಯೈನಮಃ—**

ನಾದಾನಂದದಲ್ಲಿ ಬಹು ಪ್ರೀತಿಯುಳ್ಳವಳು. ಅಕ್ಷರಗಳಿಗೆ ಸ್ವರಶಕ್ತಿಗಳನ್ನು ಸೇರಿಸಿ ಉಚ್ಚರಿಸುವುದೇ ಗೀತೆ ಅಥವಾ ಗಾನವೆನಿಸುವುದು. ಗಾನಸ್ವರೂಪವು ಆನಂದದಾಯಕವಾಗಿರುವುದಲ್ಲದೆ ಮನೋವೃತ್ತಿಯನ್ನು ಕಳಾಸ್ವರೂಪದವರೆಗೂ ಎಳೆದುಕೊಂಡು ಹೋಗಿ ಏಕೀಕರಣ ಮಾಡಬಲ್ಲದು. ಆದುದರಿಂದ ಶ್ರೀದೇವಿಗೆ ಪ್ರೀತಿಯುಳ್ಳದ್ದು. ಅಲ್ಲದೆ ಬಿಂದು, ನಾದ, ಕಳೆಗಳಲ್ಲಿ ಆಕಾಶಾಂತರ್ಗತವಾಗಿರುವ ಕಳಾಸ್ವರೂಪಿಣಿಯಾದ ಶ್ರೀದೇವಿಗೆ ಕಳೆಗೆ ಎರಡನೆಯದಾಗಿ ಕಳೆಗೂ ಸಂಬಂಧವನ್ನುಂಟುಮಾಡುವ ಓಂಕಾರನಾದದ ಮಹಿಮಾರೂಪವಾದ ಗಾನದಲ್ಲಿ ವಿಶ್ವಾಸವಿರುವುದು ಸ್ವಾಭಾವಿಕವಾಗಿಯೇ ಇರುವುದು.

**೮೫೮. ಕಲ್ಪನಾರಹಿತಾಯೈನಮಃ—**

ಕೃತಕವಿಲ್ಲದ ನಿತ್ಯವಾದ ಸ್ವಭಾವಿಕವಾಗಿರುವ ಸ್ವರೂಪವಾಗಿರುವವಳು. ಕಲ್ಪಿಸಿಕೊಂಡ ಯಾವಭಾವನೆಗೂ ನಿಲುಕದ ಪರಬ್ರಹ್ಮಸ್ವರೂಪಿಣಿಯು.

**೮೫೯. ಕಾಷ್ಠಾಯೈನಮಃ—**

ಕಾಷ್ಠಾ ಎಂದರೆ "ಕಾಶತೆ ಅಗ್ನಿನಾಸಮಂ ಕಾಷ್ಠಂ (ಕಾಶೃ-ದೀಪ್ತೌ)" ಅಗ್ನಿಯಿಂದೊಡಗೂಡಿ ಪ್ರಕಾಶಿಸುವುದು. ಆದುದರಿಂದ ಕಾಷ್ಠಾ ಎಂದರೆ ಕಟ್ಟಿಗೆ. ಗಿಡಹುಟ್ಟಿ ಬೆಳೆದು ಒಣಗಿ ಕೊನೆಗೆ ಮರವೆಂಬುದು ಹೋಗಿ ಕಟ್ಟಿಗೆ ಎನಿಸಿ ಅಂತ್ಯವಾಗಿ ಅಗ್ನಿಯೊಡಗೂಡಿ ಪ್ರಕಾಶವಾಗುವುದು. ಈ ತತ್ವವನ್ನು ಅನುಸರಿಸಿ ನ್ಯಾಯಾಧೀಶನ ಕೊನೆಯ ತೀರ್ಪಿನಂತೆ ವೇದಾಂತಶಾಸ್ತ್ರದಲ್ಲಿ ಕೊನೆಯ ತೀರ್ಮಾನಕ್ಕೆ ಕಾಷ್ಠಾ ಎಂಬ ಪದವನ್ನು ಶ್ರುತಿಯಲ್ಲಿ ಉಪಯೋಗಿಸಿರುವುದು. ವೇದಾಂತಶಾಸ್ತ್ರದ ಕೊನೆಯ ತೀರ್ಪು "ಸಾಕಾಷ್ಠಾಸಾಪರಾಗತಿಃ" ಎಂಬ ಶ್ರುತ್ಯಾಧಾರದಂತೆ ಪರಬ್ರಹ್ಮಸ್ಥಿತಿಯೇ ಆಗಿರುವುದು. ಆದುದರಿಂದ ಕಾಷ್ಠಾ ಎಂದರೆ ಸರ್ವವಿಧದಿಂದಲೂ ಅಂತ್ಯವಾಗಿ ನಿಲ್ಲುವುದು. ಸರ್ವವಿಧ ವಿಮರ್ಶೆಯಲ್ಲೂ ಅಂತ್ಯದ ತೀರ್ಮಾನವಾಗಿ ಪರಬ್ರಹ್ಮಸ್ವರೂಪಿಣಿಯಾದ ಶ್ರೀದೇವಿಯು ನಿಲ್ಲುವುದರಿಂದ ಕಾಷ್ಠಾಸ್ವರೂಪಿಣಿಯು.

**೮೬೦. ಅಕಾನ್ತಾಯೈನಮಃ—**

ಅಕ-ಪಾಪಗಳನ್ನು ಅಂತ-ಕೊನೆಗಾಣಿಸುವವಳು. ಕಾಂತನೆಂದರೆ ಪತಿಯು. ಅಕಾಂತನೆಂದರೆ ಪತಿಯೇ ಇಲ್ಲದಿರುವ ನಿರ್ಗುಣವಾದ ಪರಬ್ರಹ್ಮಸ್ವರೂಪಿಣಿಯು. ಪರಬ್ರಹ್ಮತ್ವದಲ್ಲಿ ಶಕ್ತಿ ಶಕ್ತರೆಂಬ ವಿಭಾಗವೇ ಇಲ್ಲದೆ ಒಂದೇಯಾಗಿರುವುದರಿಂದ ಪತಿಯೇ ಇಲ್ಲದಿರುವ ಪರಬ್ರಹ್ಮಸ್ವರೂಪಿಣಿಯು ಈ ತತ್ವಕ್ಕೆ ಮುಂದಿನ ನಾಮದ ಅರ್ಥವನ್ನು ನೋಡುವುದು.

**೮೬೧. ಕಾನ್ತಾರ್ಥವಿಗ್ರಹಾಯೈನಮಃ—**

ತನ್ನ ಪತಿಯಾದ ಈಶ್ವರನ ಅರ್ಧ ದೇಹದ ಸ್ವರೂಪವಾಗಿರುವವಳು. ಮೇಲಿನ ನಾಮದಲ್ಲಿ ದೇವಿಯು ಪರಬ್ರಹ್ಮಸ್ವರೂಪವನ್ನು ಪ್ರತಿಪಾದಿಸುವುದು. ಈ ನಾಮದಲ್ಲಿ ಸಗುಣವಾದ ಈಶ್ವರಸ್ಥಿತಿಯಲ್ಲಿ ಶಕ್ತ ಶಕ್ತಿಯರೆಂದು ವಿಭಾಗವಾಗಿ ಶಕ್ತ ಅರ್ಧಭಾಗವಾಗಿಯೂ ಶಕ್ತಿ ಅರ್ಧಭಾಗವಾಗಿಯೂ ಇರುವ ಸಗುಣದ ದೇಹದ ಈಶ್ವರ ಸೋಪಾನವಾಗಿರುವುದು.

**೮೬೨. ಕಾರ್ಯಕಾರಣನಿರ್ಮುಕ್ತಾಯೈನಮಃ—**

ಕಾರ್ಯವಾದ ಜಗತ್ತಿಗೂ, ಜಗತ್ತಿನ ಸೃಷ್ಟಿಕಾರ್ಯಮಾಡಲು ಕಾರಣವಾದ ತಮಃಪ್ರಧಾನ ಪ್ರಕೃತಿಗೂ (ಉಪಾದಾನಕಾರಣ), ಯಜಮಾನನಾಗಿ ಸೃಷ್ಟಿ ಕಾರ್ಯವನ್ನು ಮಾಡಿಸುವ ನಿಮಿತ್ತ ಕಾರಣವಾದ ಈಶ್ವರನಿಗೂ ಅತೀತವಾಗಿರುವ ಪರಬ್ರಹ್ಮಸ್ವರೂಪಿಣಿಯಾಗಿರುತ್ತಾಳೆ. (೨) ತನ್ನ ಉತ್ಪತ್ತಿಗೆ ಬೇರೊಂದು ಕಾರಣ ವಿಲ್ಲ ಮತ್ತು ತಾನು ಇನ್ನೊಂದರಿಂದ ಹುಟ್ಟಿದ ಕಾರ್ಯವಲ್ಲ. ಇದಕ್ಕೆ "ನತಸ್ಯ ಕಾರ್ಯಂ ಕರಣಂಚ ವಿದ್ಯತೆ" ಎಂಬ ಶ್ರುತ್ಯಾಧಾರವಿರುವುದು.

**೮೬೩. ಕಾಮಕೇಳಿತರಂಗಿತಾಯೈನಮಃ—**

ಜಗತ್ತನ್ನು ಸೃಷ್ಟಿಸಲು ಉಕ್ಕಿ ಬರುವ ಸಂತೋಷದಿಂದಲೂ ಇಷ್ಟದಿಂದಲೂ ಈಶ್ವರನೊಡನೆ ಕ್ರಿಡಾಸಕ್ತಳಾಗಿರುವವಳು.

**೮೬೪. ಕನತ್ಕನಕತಾಟಂಕಾಯೈನಮಃ—**

ಸೌಮಂಗಲ್ಯವನ್ನು ಸೂಚಿಸುವ ಮಿನುಗುಟ್ಟುವ ಚಿನ್ನದ ಓಲೆಯನ್ನು ಕಿವಿಗಳಲ್ಲಿ ಧರಿಸಿರುವವಳು.

**೮೬೫. ಲೀಲಾವಿಗ್ರಹಧಾರಿಣ್ಯೈನಮಃ—**

ವಿಲಾಸಾರ್ಥವಾಗಿ ಸ್ವೇಚ್ಛಾ ಮತ್ತು ವಿನೋದ ಮಾತ್ರದಿಂದ ಅವತಾರದ ರೂಪಗಳನ್ನು ಧರಿಸುವವಳು.

**೮೬೬. ಅಜಾಯೈನಮಃ—**

ಜನನ ಮರಣಗಳಿಲ್ಲದವಳು. "ಅಜಾಮೇಕಾಮಿತಿ" ಎಂಬ ಶ್ರುತ್ಯಾಧಾರದಂತೆ ಇಚ್ಛಾಮಾತ್ರ ಪ್ರಭುವಿನ ಸ್ವರೂಪವಾಗಿ ಅವತರಿಸುವವಳೇ ಹೊರತು ಜನಿಸುವ ನಿಬಂಧನೆಗೆ ಒಳಪಟ್ಟವಳಲ್ಲ. ಪ್ರಕೃತಿಸ್ವರೂಪಳು.

**೮೬೭. ಕ್ಷಯವಿನಿರ್ಮುಕ್ತಾಯೈನಮಃ—**

ಕ್ಷಯಿಸುವವಳಲ್ಲ. ಅಂದರೆ ಲೀಲಾಮಾತ್ರದಿಂದ ಅವತಾರವೆತ್ತಿದ ಮೇಲೆ ಕ್ಷಯಿಸುವುದೆಂದರೆ ರೋಗ ಮತ್ತು ಸಾವುಗಳಿಲ್ಲದೆ ಸ್ವೇಚ್ಛೆಯಿಂದ ಅವತಾರಗಳನ್ನು ಉಪಸಂಹಾರಮಾಡಿಕೊಳ್ಳುವವಳು.

**೮೬೮. ಮುಗ್ಧಾಯೈನಮಃ—**ಸೌಂದರ್ಯವತಿಯು.

**೮೬೯. ಕ್ಷಿಪ್ರಪ್ರಸಾದಿನ್ಯೈನಮಃ—**ಅತಿಜಾಗ್ರತೆಯಾಗಿ ಪ್ರಸನ್ನಳಾಗುವವಳು.

**೮೭೦. ಅನ್ತರ್ಮುಖಸಮಾರಾಧ್ಯಾಯೈನಮಃ—**

ಅಂತರ್ಮುಖವೆಂದರೆ ಆತ್ಮಾಭಿಮುಖವಾಗಿ ಧ್ಯಾನದಿಂದ ಸಾಯುಜ್ಯಪದವಿಯನ್ನು ಪಡೆಯಲು ಉಪಾಸನೆಮಾಡಲ್ಪಡುವವಳು. ಸಮಾರಾಧ್ಯವೆಂದು ಇರುವುದರಿಂದ "ಸಮಾಧಿಸ್ಸಮತಾವಸ್ಥಾ ಜೀವಾತ್ಮ ಪರಮಾತ್ಮನೋಃ" ಎಂಬ ಶ್ರುತ್ಯಾಧಾರದಂತೆ ಜೀವನು ಪರಬ್ರಹ್ಮವಾಗಲು ಮಾಡುವ ಅಂತರ್ಮುಖದ ಆರಾಧನಾರೂಪವಾಗಿರುವುದು.

**೮೭೧. ಬಹಿರ್ಮುಖಸುದುರ್ಲಭಾಯೈನಮಃ—**

ಬಹಿರ್ಮುಖದಲ್ಲಿ ಮಾಡುವ ಅರ್ಚನೆ ಮುಂತಾದ ಕರ್ಮಗಳಿಂದ ಪರಬ್ರಹ್ಮಸ್ವರೂಪಿಣಿಯಾದ ಶ್ರೀದೇವಿಯು ದುರ್ಲಭವಾದವಳು. ಒಳಗಡೆಯ ಜ್ಞಾನಚಕ್ಷಸ್ಸು ತೆರೆಯದೆ ಕಳಾಸ್ವರೂಪದಲ್ಲಿರುವ ಸಗುಣಮೂರ್ತಿಯಾದ ಶ್ರೀದೇವಿಯ ದರ್ಶನವು ಕೂಡ ಬಹಿರ್ಮುಖದಲ್ಲಿ ದುರ್ಲಭವಾದುದು. ಹಿಂದಿನ ಮತ್ತು ಈ ನಾಮಗಳ ತತ್ವಸಮರ್ಥನೆಗೆ ಶ್ರೀ ಶಂಕರಭಗವತ್ಪಾದರವರು ಸರ್ವವೇದಾಂತ ಸಿದ್ಧಾಂತಸಾರ ಸಂಗ್ರಹದಲ್ಲಿ

ದೇವರ್ಷಿಪಿತೃಮರ್ತ್ಯಾರ್ಣ ಬಂಧಮುಕ್ತಾಸುಕೋಟಿಶಃ ।
ಭವಬಂಧವಿಮುಕ್ತಸ್ತು ಯಃಕಶ್ಚಿದ್ಬ್ರಹ್ಮವಿತ್ತಮಃ ॥
ಅಂತರ್ಬಂಧೇನಬದ್ಧಸ್ಯ ಕಿಂಬಹಿರ್ಬಂಧಮೋಚನೈಃ ।
ತದಂತರ್ಬಂಧಮುಕ್ತ್ಯರ್ಥಂ ಕ್ರಿಯತಾಂಕೃತಿಭಿಃಕೃತಿಃ ॥

ಅಂದರೆ ಕರ್ಮಕಾಂಡದಂತೆ ಆಚರಿಸಬೇಕಾದ ದೇವ, ಋಷಿ, ಪಿತೃ ಮುಂತಾದ ಯಜ್ಞಗಳ ಅನುಷ್ಠಾನದ ಋಣಬಂಧನದಿಂದ ಬಿಡುಗಡೆ ಹೊಂದಿದವರು ಕೋಟ್ಯಾಂತರ ಜನಗಳು ಸಿಕ್ಕುವರು. ಅಜ್ಞಾನ ಬಂಧನದಿಂದ ಬಿಡುಗಡೆ ಹೊಂದಿದ ಜ್ಞಾನಿಯು ಎಲ್ಲಿಯೋ ಒಬ್ಬೊಬ್ಬನಿರುವನು. ಒಳಗಡೆ ಅಜ್ಞಾನದ ಬಂಧನವಿರುವಾಗ ಹೊರಗಡೆ ಆರಾಧನಾ, ಯಜ್ಞ ಮುಂತಾದ ಕರ್ಮಬಂಧನಗಳ ಋಣವಿಮುಕ್ತತೆಯಿಂದ ಅಜ್ಞಾನ ನಿವರ್ತಿಯಾಗುವುದಿಲ್ಲ. ಆದುದರಿಂದ ಅಂತರ್ಬಂಧನದಿಂದ ಮುಕ್ತನಾಗುವ ವೇದಾಂತಶ್ರವಣ ಮನನ, ಧ್ಯಾನಾಭ್ಯಾಸ ಸ್ವರೂಪವಾದ ಕರ್ಮಗಳನ್ನು ಭಕ್ತಿಯಿಂದ ಮಾಡುತ್ತಿರಬೇಕು. ಅಂತರ್ಮುಖದ ದಾರಿಯೇ ಮಣ್ಡಲ ಬ್ರಾಹ್ಮಣೋಪನಿಷತ್ತಿನಲ್ಲಿ "ಅಂತರ್ಲಕ್ಷ್ಯಂ ಜಲಜ್ಯೋತಿಸ್ವರೂಪಂ ಭವತಿ" ಎಂಬದಾಗಿ ಹೇಳಿರುವಂತೆ ಅಮೃತಸ್ವರೂಪವಾಗಿಯೂ ಸ್ವಯಂಪ್ರಕಾಶಸ್ವರೂಪವಾಗಿಯೂ ಜನನ ಮರಣ ಪ್ರವಾಹವನ್ನು ನಾಶಮಾಡತಕ್ಕದ್ದಾಗಿಯೂ ಇರುವುದು.

**೬೭೨. ತ್ರಯ್ಯೈನಮಃ—**

"ತ್ರಯೋಲೋಕಾಸ್ತ್ರಯೋ ವೇದಾಸ್ತ್ರಿಸ್ರಸ್ಸಂಧ್ಯಾ ಸ್ತ್ರಯಸ್ಸ್ವರಾಃ ।
ತ್ರಯೋಗ್ನಯಶ್ಚತ್ರಿಗುಣಾಃ ಸ್ಥಿತಾಸ್ಸರ್ವೇ ತ್ರಯಾಕ್ಷರೇ ॥"

ಎಂಬ ಶ್ರುತ್ಯಾಧಾರದಂತೆ ಋಗ್ಯಜುಸ್ಸಾಮ ಮೂರು ವೇದಗಳಿಗೂ, ಸ್ವರ್ಗ ಮರ್ತ್ಯ ಪಾತಾಳಗಳಿಗೂ ಮೂರು ಸಂಧ್ಯಾಕಾಲಗಳಿಗೂ ಅ, ಇ, ಉ, ಈ ಮೂರು ಸ್ವರಾಕ್ಷರಗಳಿಗೂ, ಗಾರ್ಹಪತ್ಯ, ದಕ್ಷಿಣ, ಆಹವನೀಯಾಗ್ನಿಗಳಿಗೂ, ಸತ್ವರಜಸ್ತಮೋಗುಣಗಳಿಗೂ, ಓಂಕಾರದ ಅ, ಉ, ಮ, ಮೂರು ಅಕ್ಷರಗಳಿಗೂ ಸ್ವರ, ವ್ಯಂಜನ, ಯೋಗವಾಹಗಳಿಗೂ, ತ್ರಯಿ ಎಂದು ಕರೆಯಲ್ಪಡುವುದು. ಇಂತಹ ಮೂರರ ಸ್ವರೂಪಿಣಿಯು.

**೬೭೩. ತ್ರಿವರ್ಗನಿಲಯಾಯ್ಯೈನಮಃ—** ಧರ್ಮಾರ್ಥಕಾಮಗಳಿಗೆ ಆಶ್ರಯಳು.

**೬೭೪. ತ್ರಿಸ್ಥಾಯೈನಮಃ—**

ಕಾಲತ್ರಯಗಳಲ್ಲೂ ಇರತಕ್ಕವಳು. ಕಾಲತ್ರಯಾಬಾಧ್ಯಳು.

**೮೭೫. ತ್ರಿಪುರಮಾಲಿನ್ಯೈನಮಃ—**

ಸ್ವರ್ಗ ಮರ್ತ್ಯ ಪಾತಾಳ ಲೋಕಗಳನ್ನು ಮಾಲಾರೂಪವಾಗಿ ಧರಿಸಿರುವವಳು. ೮೭೨ ನೇ ನಾಮದಲ್ಲಿ ತಿಳಿಸಿರುವ ಸಕಲ ಮೂರು ರೂಪಗಳಿಗೂ ಪುರವೆಂದರೆ ಆದಿಯಾದ ಪರಬ್ರಹ್ಮಸ್ವರೂಪಿಣಿಯಾಗಿಯೆ ನೆಲೆಸಿರುವವಳು.

**೮೭೬. ನಿರಾಮಯಾಯೈನಮಃ—**

ಯಾವ ರೋಗರುಜನಗಳೂ ಇಲ್ಲದೆ ನಿರಾತಂಕವಾಗಿರುವವಳು.

**೮೭೭. ನಿರಾಲಮ್ಬಾಯೈನಮಃ—**

ಎಲ್ಲಾದಕ್ಕೂ ತಾನು ಆಶ್ರಯವಾಗಿದ್ದು ಮತ್ತೊಂದನ್ನು ತಾನು ಆಧಾರ ಮಾಡಿಕೊಳ್ಳದೆ ಇರತಕ್ಕವಳು.

**೮೭೮. ಸ್ವಾತ್ಮಾರಾಮಾಯೈನಮಃ—**

ಎರಡನೆಯದರ ಸಹಾಯಾಪೇಕ್ಷೆ ಇಲ್ಲದೆ ತನಗೆ ತಾನೇ ಜ್ಞಾನಾನಂದ ಸ್ವರೂಪಳಾಗಿರುವವಳು.

**೮೭೯. ಸುಧಾಸೃತ್ಯೈನಮಃ—**

ಅಮೃತಧಾರೆಯನ್ನು ಪ್ರವಾಹ ರೂಪದಿಂದ ಹರಿಸತಕ್ಕವಳು. ಚಂದ್ರನ ಮೂಲಕ ಅಮೃತವನ್ನು ಹಿಮ ಮತ್ತು ತಂಪಿನ ರೂಪಿನ ಕಿರಣಗಳಮೂಲಕ ಪ್ರಪಂಚಕ್ಕೆ ವೃಷ್ಟಿಸಿ ಪ್ರಪಂಚವನ್ನು ಕಾಪಾಡುವವಳು. ಸಮಾಧಿಸ್ಥನಲ್ಲಿ ಅಮೃತ ಸ್ರಾವವನ್ನು ಕರೆಯುತ್ತಾ ಪುನರಾವರ್ತಿರಹಿತವಾದ ಶಾಶ್ವತವಾದ ತನ್ನ ಪದವಿಯನ್ನು ಕೊಡುವವಳು.

**೮೮೦. ಸಂಸಾರಪಙ್ಕನಿರ್ಮಗ್ನಸಮುದ್ಧರಣಪಂಡಿತಾಯೈನಮಃ—**

ಜನನ ಮರಣರೂಪವಾದ ಸಂಸಾರವೆಂಬ ಕೆಸರಿನಲ್ಲಿ ಮುಳುಗಿದವರನ್ನು ಉದ್ಧರಿಸಲು ನಿಪುಣೆಯಾಗಿರುವವಳು.

**೮೮೧. ಯಜ್ಞಪ್ರಿಯಾಯೈನಮಃ—**

ಸೋಮಯಾಗ ಮುಂತಾದ ಯಾಗಗಳು, ಅಗ್ನಿಕಾರ್ಯ ಮುಂತಾದ ಹೋಮಗಳು, ದೇವತಾ ಮಂತ್ರಜಪ, ಅರ್ಚನೆ, ಬ್ರಹ್ಮನಿಷ್ಠತೆಯಲ್ಲಿ ಧ್ಯಾನ ಮಾಡುವಿಕೆ, ಇವುಗಳಿಗೆಲ್ಲಾ ಯಜ್ಞವೆನಿಸುವುವು. ಇಂತಹ ಯಜ್ಞದಲ್ಲಿ ಪ್ರೀತಿಯುಳ್ಳವಳು.

**೮೮೨. ಯಜ್ಞಕರ್ತ್ರ್ಯೈನಮಃ—**

"ಸಮಸ್ತಯಾಗಾನಾಂ ರುದ್ರಃ ಪಶುಪತಿಃ ಕರ್ತಾರುದ್ರೋ ಯಾಗ ದೇವಃ" ಎಂಬ ಶ್ರುತಿವಚನಾನುಸಾರವಾಗಿ ಮೇಲಿನ ನಾಮದಲ್ಲಿ ತಿಳಿಸಿರುವ ಸಕಲ ವಿಧವಾದ ಯಜ್ಞಗಳನ್ನು ಮಾಡಿಸುವುದಕ್ಕೂ ಕರ್ತಳಾಗಿರುವವಳೇ ಶ್ರೀದೇವಿಯು. ಶ್ರೀದೇವಿಯು ಪಶುಪತಿಯಾದ ರುದ್ರರೂಪಿಣಿಯಾಗಿರುವುದರಿಂದ ಶ್ರೀದೇವಿಯೇ ಕರ್ತಳು. ಅಂದರೆ ಯಜ್ಞಸ್ವರೂಪವಾದ ದೈವೀಸಂಪತ್ತನ್ನು ಅನು ಗ್ರಹಿಸಿ ಕೊಡುವವಳು.

**೮೮೩. ಯಜಮಾನಸ್ವರೂಪಿಣ್ಯೈನಮಃ—**

೮೮೧ ನೇ ನಾಮದಲ್ಲಿ ತಿಳಿಸಿರುವ ಯಜ್ಞವನ್ನು ಮಾಡುವವರ ಸ್ವರೂಪವೂ ಆಗಿರುವಳು. ಅಂದರೆ ಯಜ್ಞವನ್ನು ಮಾಡುವವರ ಜೀವಚೈತನ್ಯಸ್ವರೂಪಳು.

**೮೮೪. ಧರ್ಮಾಧಾರಾಯೈನಮಃ—**

ಧರ್ಮಕ್ಕೆ ಆಧಾರವಾಗಿರುವವಳು. ಧರ್ಮಕ್ಕೆ ಅನೇಕ ಅರ್ಥಗಳಿವೆ. ಪಂಚಭೂತಗಳು ಆದಿಯಾಗಿ ಸಕಲ ವಸ್ತುಗಳೂ ಸಕಲ ಪ್ರಾಣಿಗಳೂ ಸೃಷ್ಟಿ ಕ್ರಮದಲ್ಲಿ ಬಂದ ತಮತಮಗೆ ಅನುಸಾರವಾದ ಪ್ರವರ್ತನೆಯಲ್ಲಿರುವುದಕ್ಕೆ ಧರ್ಮವೆಂದು ಹೆಸರು. ಉದಾಹರಣೆಗಾಗಿ ವಾಯುಧರ್ಮ, ಅಗ್ನಿಧರ್ಮ, ಪಶುಧರ್ಮ, ರಾಜಧರ್ಮ, ಋತುಧರ್ಮ, ಇಂತಹ ಧರ್ಮಗಳಿಗೂ ಆಧಾರವಾಗಿ ರುವವಳು ಶ್ರೀದೇವಿಯೆ. ಅಲ್ಲದೆ ದೇವರು ಇರುತ್ತಾನೆಂಬ ತಿಳುವಳಿಕೆಯನ್ನು ಹೊಂದಿರುವ ಮನುಷ್ಯನು ಪಶುಗಳಂತೆಯೇ ಇದ್ದರೆ ಧರ್ಮವೆನಿಸಿಕೊಳ್ಳುವು ದಿಲ್ಲ. ಮೋಕ್ಷಮಾರ್ಗಕ್ಕೆ ಅನುಸಾರವಾದ ನಡೆವಳಿಕೆಗಳಲ್ಲಿರುವುದೇ ಧರ್ಮ ವೆನಿಸಿಕೊಳ್ಳುವುದೇ ಹೊರತು ಈ ನಡುವಳಿಕೆಗೆ ವ್ಯತಿರೇಕವಾಗಿದ್ದರೆ ಅಧರ್ಮವು. ಮೋಕ್ಷಮಾರ್ಗಕ್ಕೆ ಅನುಸಾರವಾದ ನಡೆವಳಿಕೆಯು ಧರ್ಮವು. ಮೋಕ್ಷ ಮತ್ತು ಧರ್ಮಕ್ಕೆ ಅನುಸಾರವಾದ ಧನಾರ್ಜನೆಯು ಅರ್ಥವು. ಮೋಕ್ಷ, ಧರ್ಮ, ಅರ್ಥಕ್ಕೆ ಅನುಸಾರವಾದ ಭೋಗದಲ್ಲಿರುವಿಕೆಯೆ ಕಾಮವು. ಧರ್ಮ ಅರ್ಥ, ಕಾಮ, ಮೋಕ್ಷಗಳಾದ ಈ ನಾಲಕ್ಕನ್ನೂ ಮನುಷ್ಯನು ಅಗತ್ಯವಾಗಿ ಸಂಪಾದನೆ ಮಾಡತಕ್ಕದ್ದಾಗಿದೆ. ಹೀಗಿರುವುದರಿಂದಲೇ ಈ ನಾಲಕಕ್ಕೂ ಚತುರ್ವಿಧ ಪುರುಷಾರ್ಥಗಳೆಂದು ಶಾಸ್ತ್ರವು ತಿಳಿಸುವುದು. ಆದುದರಿಂದ ಮೋಕ್ಷಮಾರ್ಗಕ್ಕೆ ಅನುಸಾರವಾದ ನಡೆವಳಿಕೆಗಳ ಸ್ವರೂಪವಾದ ಧರ್ಮವನ್ನು ಧರಿಸಿರುವಸ್ವರೂ ಪಿಣಿಯೂ ಶ್ರೀದೇವಿಯೆ. ಮೇಲಿನ ಎಲ್ಲಾ ತತ್ವಗಳನ್ನೂ "ಧರ್ಮೇಸರ್ವಂ ಪ್ರತಿ ಷ್ಠಿತಂ" ಎಂಬ ಶ್ರುತಿಯು ಒಳಗೊಂಡಿರುವುದು.

೮೮೫. **ಧನಾಧ್ಯಕ್ಷಾಯೈನಮಃ—**

ಧನಕ್ಕೆ ಯಜಮಾನಿಯಾಗಿರುವವಳು. ಕುಬೇರನ ಸ್ವರೂಪಿಣಿಯು. ಧನವೆಂದರೆ ಪೋಷಣೆಯೆಂದರ್ಥವಾಗುವುದರಿಂದ ಪ್ರಪಂಚವನ್ನೇ ಪೋಷಿಸುವುದಕ್ಕೆ ಮುಖ್ಯಳಾದವಳು. "ಧನಮಗ್ನಿರ್ಧನಂವಾಯುರ್ಧನಂಸೂರ್ಯೋ ಧನಂ ವಸುಃ ಧನಮಿಂದ್ರೋ ಬೃಹಸ್ಪತಿರ್ವರುಣಂ ಧನಮಶ್ನುತೆ" ಎಂಬ ಶ್ರುತ್ಯಾಧಾರದಂತೆ ಜಗತ್ತನ್ನು ಪೋಷಿಸುವವರಾದ ಅಗ್ನಿ, ವಾಯು, ಸೂರ್ಯ, ವಿಷ್ಣು, ಇಂದ್ರ, ಬೃಹಸ್ಪತಿ, ವರುಣ, ಇವರುಗಳಿಗೂ ಅಧ್ಯಕ್ಷಳಾಗಿರುವವಳು.

೮೮೬. **ಧನಧಾನ್ಯವಿವರ್ಧಿನ್ಯೈನಮಃ—**

ಧನವನ್ನೂ ಧಾನ್ಯವನ್ನೂ ವೃದ್ಧಿಪಡಿಸುವವಳು.

೮೮೭. **ವಿಪ್ರಪ್ರಿಯಾಯೈನಮಃ—**

"ಜನ್ಮನಾ ಬ್ರಾಹ್ಮಣೋಜ್ಞೇಯಃ ಸಂಸ್ಕಾರೈರ್ದ್ವಿಜ ಉಚ್ಯತೆ ।
ವಿದ್ಯಯಾಯಾತಿ ವಿಪ್ರತ್ವಂ ತ್ರಿಭಿಶ್ಶ್ರೋತ್ರಿಯ ಉಚ್ಯತೆ ॥"

ಎಂಬ ಮನುಸ್ಮೃತಿಯ ವಚನದಂತೆ ಬ್ರಾಹ್ಮಣನ ರಕ್ತಕಣದಿಂದ ಜನಿಸಿ ಉಪನಯನಸಂಸ್ಕಾರವನ್ನು ಹೊಂದಿ ವೇದಮಾತೆಯಾದ ಶ್ರೀ ಗಾಯತ್ರೀದೇವಿಯನ್ನು ಉಪಾಸನೆಮಾಡಿಕೊಂಡು ವೇದ ಮತ್ತು ಶಾಸ್ತ್ರಗಳನ್ನು ತಿಳಿದು ಆಚರಣೆಯಲ್ಲಿರುವವನಿಗೆ ವಿಪ್ರನೆಂದು ಹೆಸರು. ಇಂತಹ ವಿಪ್ರರಲ್ಲಿ ಪ್ರೀತಿಯುಳ್ಳವಳು.

೮೮೮. **ವಿಪ್ರರೂಪಾಯೈನಮಃ—**

ಮೇಲಿನ ನಾಮದಲ್ಲಿ ವಿವರಿಸಿರುವಂತಹ ವಿಪ್ರರ ಸ್ವರೂಪಿಣಿಯೂ ಆಗಿರುವವಳು.

೮೮೯. **ವಿಶ್ವಭ್ರಮಣಕಾರಿಣ್ಯೈನಮಃ—**

ಪ್ರಾಣಿಗಳ ಪುಣ್ಯಪಾಪಾನುಸಾರವಾಗಿ ಪ್ರಪಂಚಚಕ್ರವನ್ನು ತಿರಿಗಿಸತಕ್ಕವಳು. ಬ್ರಹ್ಮಾಂಡದ ಸೃಷ್ಟಿ ಸ್ಥಿತಿ ಲಯಗಳಿಗೂ ಯಾತಾಯಾತಗಳಿಗೂ ಕಾರಣಳಾದವಳು.

೮೯೦. **ವಿಶ್ವಗ್ರಾಸಾಯೈನಮಃ—** ಜಗತ್ತನ್ನೆಲ್ಲಾ ಲಯಮಾಡಿ ಭಕ್ಷಿಸುವವಳು.

೮೯೧. **ವಿದ್ರುಮಾಭಾಯೈನಮಃ—** ಹವಳದ ವರ್ಣವಾಗಿರುವವಳು.

೮೯೨. **ವೈಷ್ಣವ್ಯೈನಮಃ—**

ಶ್ರೀ ಲಕ್ಷ್ಮೀದೇವಿಯ ಸ್ವರೂಪಿಣಿಯು. ವಿಷ್ಣುಶಕ್ತಿಯು.

೮೯೩. **ವಿಷ್ಣುರೂಪಿಣ್ಯೈನಮಃ—**

ಶ್ರೀ ವಿಷ್ಣುಸ್ವರೂಪಳು. ಸರ್ವವ್ಯಾಪಕವಾಗಿರುವವಳು.

೮೯೪. **ಅಯೋನ್ಯೈನಮಃ—**ಸೃಷ್ಟಿಯಾಗದವಳು. ಜನನವಿಲ್ಲದವಳು.

೮೯೫. **ಯೋನಿನಿಲಯಾಯ್ಯೈನಮಃ—**

ಯೋನಿಯೆಂದರೆ ಸೃಷ್ಟಿಯ ಮೂಲಸ್ಥಾನ. ಇದರಲ್ಲಿ ನೆಲಸಿರುವವಳು. "ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಂ" ಎಂಬ ಮುಂಡುಕೋಪನಿಷತ್ತಿನ ಆಧಾರದಂತೆ ಈಶ್ವರನಿಗೂ ಜೀವನಿಗೂ ಮೂಲಕಾರಣವಾಗಿರುವ ಪರಬ್ರಹ್ಮವೇ ಯೋನಿ ಶಬ್ದದಿಂದ ಹೇಳಲ್ಪಡುವುದರಿಂದ ಸೃಷ್ಟಿಗೆ ಮೂಲವಾದ ಪರಬ್ರಹ್ಮ ಸ್ವರೂಪಿಣಿಯಾಗಿರುವವಳು. (೨) ಸೃಷ್ಟಿಗೆ ಮೂಲಸ್ಥಾನವಾದ ಪರಬ್ರಹ್ಮದಲ್ಲಿ ಲಯಕಾಲದಲ್ಲಿ ಸಕಲವೂ ಸೇರುವುದರಿಂದಲೂ ಯೋನಿನಿಲಯವೆನಿಸಿಕ್ಕೊಳ್ಳುವುದು. ಇದಕ್ಕೆ ಶ್ವೇತಾಶ್ವತರೋಪನಿಷತ್ತಿನಲ್ಲಿ ೪—೧೧ ಆಧಾರವಾಗಿದೆ.

೮೯೬. **ಕೂಟಸ್ಥಾಯ್ಯೈನಮಃ—**

ನಮ್ಮ ಬುದ್ಧಿಯು ರಸಕನ್ನಡಿಯಂತೆ ಇರುವುದು. ಇಂತಹ ಬುದ್ಧಿಯಲ್ಲಿ ಸ್ವಯಂಪ್ರಕಾಶವಾದ ಸರ್ವವ್ಯಾಪಿಯಾದ ಪರಬ್ರಹ್ಮವಿರುವುದು. ರಸಕನ್ನಡಿಯು ಪ್ರತಿಫಲನದ ಬೆಳಕನ್ನು ಉಂಟುಮಾಡುವ ಸ್ವಭಾವವುಳ್ಳದ್ದು. ಸ್ವಯಂಪ್ರಕಾಶವಾದ ಪರಬ್ರಹ್ಮವು ರಸಕನ್ನಡಿಯ ಸ್ವಭಾವವಾದ ಬುದ್ಧಿಯಲ್ಲಿ ಪ್ರತಿಫಲಿತವಾಗುವುದು. ಈ ಪ್ರತಿಫಲಿತವೇ ಜೀವಚೈತನ್ಯ. ಪ್ರತಿಫಲಿತಕ್ಕೆ ಆಧಾರವಾದ ಸ್ವಯಂಪ್ರಕಾಶವು ಬುದ್ಧಿಯಲ್ಲಿದ್ದುಕೊಂಡೇ ಪ್ರತ್ಯೇಕವಾದ ಪ್ರತಿಫಲಿತ ಉಂಟಾಗುವುದು. ಪ್ರತಿಫಲನಕ್ಕೆ ಆಧಾರವಾಗಿರುವ ಸ್ವಯಂಪ್ರಕಾಶವು ಪ್ರತಿಫಲನದ ಯಾವ ಕಾರ್ಯಕ್ಕೂ ಒಳಗಾಗದೆ ನಿರ್ಲಿಪ್ತವಾಗಿರುವುದು. ಬುದ್ಧಿಯಲ್ಲಿ ಪ್ರತಿಫಲನಕ್ಕೆ ಆಧಾರವಾಗಿರುವ ಸ್ವಯಂಪ್ರಕಾಶವಾದ ಪರಬ್ರಹ್ಮವನ್ನು ಕೂಟಸ್ಥನೆಂದು ಶ್ರುತಿಯು ತಿಳಿಸುವುದು. ಆದುದರಿಂದ ಕೂಟಸ್ಥ ಎಂದರೆ ಜೀವಚೈತನ್ಯಕ್ಕೂ ಕಾರಣವಾದ ನಮ್ಮ ಬುದ್ಧಿಯಲ್ಲಿರುವ ಮೂಲವಾದ ಪರಬ್ರಹ್ಮ ಸ್ವರೂಪವು. ಶ್ರೀದೇವಿಯು ಇಂತಹ ಸ್ವರೂಪಿಣಿಯು.

**೮೯೭. ಕುಲರೂಪಿಣ್ಯೈನಮಃ—**

ಕುಲವೆಂದರೆ ಪ್ರಪಂಚವೆಂದು ಹಿಂದೆಯೇ ಅರ್ಥಬರೆದು ತಿಳಿಸಿರುತ್ತದೆ. ಪ್ರಪಂಚಸ್ವರೂಪಿಣಿಯು. ದೇಹಸ್ವರೂಪಿಣಿಯು.

**೮೯೮. ವೀರಗೋಷ್ಠೀಪ್ರಿಯಾಯೈನಮಃ—**

ಶೌರ್ಯವಂತರಾದ ಯೋಧರ ಗುಂಪಿನಲ್ಲಿ ಇಷ್ಟವುಳ್ಳವಳು. ಪರಾಕ್ರಮ ಸ್ವರೂಪಳು. ಕ್ಷತ್ರಿಯ ಯೋಧರ ವೀರರಸದ ಪ್ರತಾಪಗಳಲ್ಲಿ ಪ್ರಿಯವಾದವಳು.

**೮೯೯. ವೀರಾಯೈನಮಃ—**ಶೌರ್ಯಸ್ವರೂಪಳು. ಪರಾಕ್ರಮಸ್ವರೂಪಳು.

**೯೦೦. ನೈಷ್ಕರ್ಮ್ಯಾಯೈನಮಃ—**

ನಿಷ್ಕಾಮಳು. ಯಾವ ಕಾರ್ಯಕ್ಕೂ ಲೇಪವಿಲ್ಲದವಳು. ಇದಕ್ಕೆ ನಪುಣ್ಯಪಾಪೈರ್ಮಮೇ " ಎಂಬ ಶ್ರುತ್ಯಾಧಾರವೂ ಇರುವುದು.

**೯೦೧. ನಾದರೂಪಿಣ್ಯೈನಮಃ—**

ನಾದರೂಪಳು. ಅನಾಹತಸ್ವರೂಪವಾದ ಓಂಕಾರನಾದರೂಪಳು ಮತ್ತು ಬಾಹ್ಯದಲ್ಲಿ ಕೇಳುವ ಆಹತನಾದಸ್ವರೂಪಳು.

**೯೦೨. ವಿಜ್ಞಾನಕಲನಾಯೈನಮಃ—**

ದೇಹ ಮತ್ತು ವಿಷಯಾದಿಗಳ ಜ್ಞಾನಕ್ಕೆ ವಿಜ್ಞಾನವೆಂದು ಹೆಸರು. ಇಂತಹ ದೇಹ ಮತ್ತು ವಿಷಯಜ್ಞಾನವನ್ನು ತಮ್ಮತಮ್ಮ ಜ್ಞಾನವೆಂದೇ ತಿಳಿದು ಕೊಳ್ಳುವಂತೆ ಮಾಡುವವಳು. ಅಂದರೆ "ಆತ್ಮನಸ್ತುಕಾಮಾಯ ಸರ್ವಂ ಪ್ರಿಯಂ ಭವತಿ" ಎಂಬ ಶ್ರುತ್ಯಾಧಾರದಂತೆ ದೇಹ ತಾನೆಂಬದಾಗಿಯೇ ತಿಳಿದು ಕೊಳ್ಳುವುದೇ ವಿಜ್ಞಾನಕಲನ ಎನಿಸಿಕೊಳ್ಳುತ್ತದೆ. (೨) ಇಂತಹ ವಿಜ್ಞಾನವು ಕ್ಷಣಿಕ (ಕಲ-ಕ್ಷಣಿಕ) ವಾದುದೆಂದು ತಿಳಿಯುವ ಸ್ವರೂಪಿಣಿಯು.

**೯೦೩. ಕಲ್ಯಾಯೈನಮಃ—**

ಸೃಷ್ಟಿಸಲು ಅಥವಾ ಕಲ್ಪಿಸಲು ಶಕ್ತಿಯುಳ್ಳವಳು.

**೯೦೪. ವಿದಗ್ಧಾಯೈನಮಃ—**

ಚತುರಳು. ಕಾರ್ಯದ ಚಮತ್ಕಾರವುಳ್ಳವಳು. ೯೦೩ ಮತ್ತು ೯೦೪ ನೇ ನಾಮಗಳು ೯೦೨ ನೇ ನಾಮಕ್ಕೆ ಅನ್ವಯವಾಗುವುವು.

**೯೦೫. ಬೈನ್ದವಾಸನಾಯೈನಮಃ—**

ಬಿಂದುವೇ ಆಸನವಾಗಿರುವವಳು. ಕಮಲಪುಷ್ಪದ ಮಧ್ಯದಲ್ಲಿ ಕರ್ಣಿಕಾ ಪ್ರದೇಶವಿರುವಂತೆ ನಮ್ಮ ಶಿರಸ್ಸಿನಲ್ಲಿರುವ ಸಹಸ್ರಾರಕಮಲದ ಮಧ್ಯದಲ್ಲಿ ಬಿಂದುವಿರುವುದು. ಇಂತಹ ಸಹಸ್ರಾರಕಮಲದ ಬಿಂದುವಿನಲ್ಲಿ ಸರ್ವವ್ಯಾಪಿಯಾದ ಪರಬ್ರಹ್ಮಸ್ವರೂಪಿಣಿಯಾಗಿ ನೆಲೆಸಿರುವವಳು.

ನಮ್ಮ ಭ್ರೂಮಧ್ಯದಲ್ಲೊಂದು ಮತ್ತು ಸೊಂಟದ ಕೆಳಗಿರುವ ಮೂಲಾಧಾರ ಚಕ್ರದಲ್ಲೊಂದು ಬಿಂದುಗಳಿವೆ. ಈ ಎರಡು ಸ್ಥಳಗಳಲ್ಲೂ ನಮ್ಮಲ್ಲಿರುವ ಸಕಲ ನಾಡಿಗಳನ್ನೆಲ್ಲಾ ಸೇರಿಸಿ ರಥದ ಬಿರಿ ಬಿಗಿಯುವಂತೆ ಬಂಧಿಸಿರುವುದು. ಈ ಎರಡು ಸ್ಥಳವೂ ಬೈಂದವ ಎಂದರೆ ಬಿಂದು ಸಂಬಂಧವಾದ ಸ್ಥಾನವೆನಿಸಿ ನಮ್ಮ ದೇಹವನ್ನು ಧರಿಸಲು ಕಾರಣವಾಗಿ ತುಂಬಾ ಮಹತ್ವವುಳ್ಳದ್ದಾಗಿದೆ. ಬಿಂದುವೆಂದರೆ ಚುಕ್ಕೆ ಅಥವಾ ದುಂಡಾದ ಗ್ರಂಥಿರೂಪ. ಈಶ್ವರನೊಡಗೂಡಿದ ಈಶ್ವರಿಗೆ ಭ್ರೂಮಧ್ಯದಲ್ಲಿರುವ ಬಿಂದುವೇ ಪೀಠವಾಗಿರುವುದು. ಶ್ರೀ ಕುಂಡಲಿನೀ ಶಕ್ತಿಗೆ ಮೂಲಾಧಾರದಲ್ಲಿರುವ ಬಿಂದುವು ಪೀಠವಾಗಿರುವುದು. ಸಹಸ್ರಾರಕಮಲದಲ್ಲಿ ಇರುವ ಬಿಂದುವೇ ಪರಬ್ರಹ್ಮಸ್ವರೂಪಿಣಿಯಾದ ಶ್ರೀದೇವಿಗೆ ಸ್ಥಾನವು. ಈ ತತ್ವ ಸಮರ್ಥನೆಗೆ ವರಾಹೋಪನಿಷತ್, ಯೋಗಶಿಖೋಪನಿಷತ್, ದರ್ಶನೋಪನಿಷತ್, ತ್ರಿಶಿಖಿಬ್ರಾಹ್ಮಣೋಪನಿಷತ್ತುಗಳನ್ನು ನೋಡಬಹುದು.

**೯೦೬. ತತ್ವಾಧಿಕಾಯೈನಮಃ—**

ಪಂಚಭೂತಗಳಾದಿಯಾಗಿ ಬ್ರಹ್ಮಾಂಡದಲ್ಲಿರುವ ಸಕಲ ಸ್ಥೂಲವಸ್ತುಗಳಿಗೆ ಕಾರಣವಾದ ಅವವುಗಳ ಸೂಕ್ಷ್ಮಸ್ಥಿತಿಗೆ ಮಹತ್ತತ್ವಗಳೆಂದು ಹೆಸರು. ಇಂತಹ ತತ್ವಗಳಿಗೂ ಉತ್ಕೃಷ್ಟಳಾದವಳು. ಅಂದರೆ ಪರಬ್ರಹ್ಮಸ್ವರೂಪಿಣಿಯು.

**೯೦೭. ತತ್ವಮಯ್ಯೈನಮಃ—**

ಮೇಲಿನ ನಾಮದಲ್ಲಿ ತಿಳಿಸಿರುವ ಪ್ರಪಂಚದ ಸಕಲ ಸ್ಥೂಲವಸ್ತುಗಳ ಸೂಕ್ಷ್ಮಸ್ಥಿತಿಯಾದ ತತ್ವಗಳಸ್ವರೂಪಿಣಿಯೂ ಆಗಿರುವವಳು.

**೯೦೮. ತತ್ವಮರ್ಥಸ್ವರೂಪಿಣ್ಯೈನಮಃ—**

ತತ್ ಮತ್ತು ತ್ವಂ ಎಂಬ ಪದಗಳ ಅರ್ಥದ ನಿರೂಪಣೆಯ ಸ್ವರೂಪಿಣಿಯು. ತತ್ ಎಂದರೆ ಅದು. ಅದು ಎಂದರೆ ಪರಬ್ರಹ್ಮವು. ತ್ವಂ ಎಂದರೆ ನೀನು ಅಂದರೆ ಜೀವ. ಇವುಗಳ ಅರ್ಥನಿರೂಪಣೆಯೆಂದರೆ ತತ್ ಪ್ರತಿಪಾದ್ಯವಾದ ಪರಬ್ರಹ್ಮವೇ ನೀನಾಗಿರುತ್ತೀಯೆ ಎಂಬ ಅರ್ಥದ ನಿರೂಪಣೆಮಾಡುವವಳು.

ಈ ರೀತಿ ನಿರೂಪಣೆಮಾಡುವುದನ್ನು ತತ್ವಮಸಿ ಎಂತಲೂ ಇದೇ ಮಹಾವಾಕ್ಯವೆಂತಲೂ ತಿಳಿಸುವುದು.

**೯೦೯. ಸಾಮಗಾನಪ್ರಿಯಾಯೈನಮಃ—**

ಸಾಮಗಾನದಲ್ಲಿ ಪ್ರೀತಿಯುಳ್ಳವಳು. ಋಗ್ವೇದವು ಜ್ಞಾನಶಕ್ತಿಯ ತತ್ವದ್ದಾಗಿ ದೇವತಾಗುಣ ವರ್ಣನೆಯನ್ನೂ, ಯಜುರ್ವೇದವು ಕ್ರಿಯಾಶಕ್ತಿಯ ತತ್ವದ್ದಾಗಿ ದೇವತಾಕರ್ಮದ ಸ್ವರೂಪವನ್ನೂ, ಸಾಮವೇದವು ಇಚ್ಛಾಶಕ್ತಿಯಾಗಿ ದೇವತಾಶಕ್ತಿಯೊಡನೆ ನಮ್ರತೆ, ಭಕ್ತಿ, ಮತ್ತು ಗಾಂಭೀರ್ಯದೊಡನೆ ಏಕೀಕರಣವಾಗುವುದನ್ನೂ ಅಂದರೆ ಉಪಾಸಕನೂ ದೇವರೂ ಒಂದಾಗುವಿಕೆಯನ್ನೂ ನಿರೂಪಿಸುವುದು. ಸಾಮಶಬ್ದಕ್ಕೂ "ಸಾಂತೆ ಸಾಂತ್ವಃ ಪ್ರಿಯಕರಣಂ" ಎಂದು ಅರ್ಥ. ಆದುದರಿಂದ ಸ್ತೋತ್ರ, ಉಪಾಸನೆ ಮತ್ತು ಗಾನಮಾಡತಕ್ಕವರಿಗೂ ಶ್ರೀದೇವಿಗೂ ಸಂಬಂಧವುಂಟಾಗುವ ಇಚ್ಛೆಯ ತತ್ವವೇ ಸಾಮಶಬ್ದಾರ್ಥವಾಗಿ ಪರಾಭಕ್ತಿಯಿಂದೊಡಗೂಡಿದ ನಮ್ರತೆ ಮತ್ತು ಗಾಂಭೀರ್ಯದೊಡನೆ ಸ್ತೋತ್ರ ಉಪಾಸನೆ ಮತ್ತು ಗಾನಮಾಡುವಿಕೆಯು ಸಾಮಗಾನವೆನಿಸಿಕೊಳ್ಳುವುದು. ಭಕ್ತರಿಗೂ ತನಗೂ ಸಂಬಂಧವುಂಟಾಗುವುದರಿಂದ ಸಾಮಗಾನದಲ್ಲಿ ಶ್ರೀದೇವಿಗೆ ಪ್ರೀತಿಯು. ಈ ತತ್ವವನ್ನು ಅನುಸರಿಸಿಯೇ "ವೇದಾನಾಂ ಸಾಮವೇದೋಽಸ್ಮಿ" ಎಂಬದಾಗಿ ಶ್ರೀ ಕೃಷ್ಣಪರಮಾತ್ಮನು ಭಗವದ್ಗೀತೆಯಲ್ಲಿ ಹೇಳಿರುತ್ತಾನೆ.

**೯೧೦. ಸೋಮ್ಯಾಯೈನಮಃ—**

"ಸಕಾರಸ್ಸತ್ಯಮಮೃತಂ ಪ್ರಾಪ್ತಃಸೋಮಶ್ಚಕೀರ್ತ್ಯತೇ" ಎಂಬ ಶ್ರುತ್ಯಾಧಾರದಂತೆ ಅಮೃತವಾಚ್ಯಳಾದ ಪರಬ್ರಹ್ಮಸ್ವರೂಪಿಣಿಯಾಗಿರುವವಳು.

**೯೧೧. ಸದಾಶಿವಕುಟುಂಬಿನ್ಯೈನಮಃ—**

ಈಶ್ವರನ ಪತ್ನಿಯು. ಪರಬ್ರಹ್ಮನ ಸಂಸಾರವೆನಿಸುವ ಪ್ರಪಂಚಸ್ವರೂಪವಾಗಿರುವವಳು.

**೯೧೨. ಸವ್ಯಾಪಸವ್ಯಮಾರ್ಗಸ್ಥಾಯೈನಮಃ—**

ದೇವತಾಸಂಬಂಧವಾದ ಕರ್ಮಕ್ಕೆ ಸವ್ಯವೆಂದರೆ ಯಜ್ಞೋಪವೀತವನ್ನು ಬಲಗಡೆ ಹಾಕಿಕೊಂಡಿರುತ್ತೆ. ಲಯವಾಗಿರುವ ಪಿತೃಸಂಬಂಧವಾದ ಕರ್ಮಗಳಿಗೆ ಅಪಸವ್ಯವೆಂದರೆ ಯಜ್ಞೋಪವೀತವು ಎಡದಕಡೆಗೆ ಹಾಕಿಕೊಳ್ಳಲ್ಪಡುತ್ತದೆ. ಆದುದರಿಂದ ಸವ್ಯವು ಸೃಷ್ಟಿಸ್ಥಿತಿಗೆ ಸೇರಿದುದು. ಅಪಸವ್ಯವು ಲಯಕ್ಕೆ ಸೇರಿದುದು. ಅಂದರೆ ಸೃಷ್ಟಿ ಸ್ಥಿತಿಕಾರ್ಯದಲ್ಲೂ ಲಯಕಾರ್ಯದಲ್ಲೂ ನೆಲೆಸಿರುವವಳು. ಅಲ್ಲದೆ

ಸವ್ಯವಾದ ದೇವತಾ ಕರ್ಮಮಾರ್ಗದಲ್ಲೂ ಅಪಸವ್ಯವಾದ ಪಿತೃಗಳ ಕರ್ಮ ಮಾರ್ಗದಲ್ಲೂ ಅನುಗ್ರಹಮಾಡುವವಳು.

ಸವ್ಯವನ್ನೇ ದಕ್ಷಿಣಾಚಾರವೆಂದೂ ಅಪಸವ್ಯವನ್ನೆ ವಾಮಾಚಾರವೆಂದೂ ಹೇಳಬಹುದು. ದಕ್ಷಿಣಾಚಾರ ಪೂಜಾಕ್ರಮವು ವೇದಸಮ್ಮತವಾಗಿ ಸಾತ್ವಿಕವಾಗಿ ದೇವತೆಗಳ ಕ್ರಮಕ್ಕೆ ಸಂಬಂಧವಾದುದು. ವಾಮಾಚಾರ ಪೂಜಾಕ್ರಮವು ಅವೈದೀಕವೆನಿಸಿ ರಾಜಸತಾಮಸವಾಗಿ ರಾಕ್ಷಸೀಕ್ರಮಕ್ಕೆ ಸಂಬಂಧವಾದುದು. ಪುರಾಣೇತಿಹಾಸಗಳಲ್ಲಿ ರಾಕ್ಷಸರಿಂದ ಆಚರಿತವಾಗಿದ್ದ ಯಜ್ಞ ಮತ್ತು ಪೂಜಾ ಕ್ರಮಗಳನ್ನು ನೋಡಿದರೆ ವಾಮಾಚಾರವೆಂದು ಸ್ಪಷ್ಟಪಡುವುದು. ಪ್ರಹ್ಲಾದ, ಬಲಿ, ವಿಭೀಷಣ ಜನ್ಮತಃ ರಾಕ್ಷಸರಾದರೂ ರಾಕ್ಷಸಕೃತ್ಯಗಳೇ ಇರಲಿಲ್ಲ. ಶ್ರೀದೇವಿಯೆ ರಾಕ್ಷಸರಿಗೂ ರಾಜಸತಾಮಸ ಸ್ವರೂಪವಾದ ಶಕ್ತಿಯನ್ನು ಜಗತ್ತಿನ ಸೃಷ್ಟಿ ಸ್ಥಿತಿ ಕಾರ್ಯಗಳಿಗೋಸ್ಕರ ಅನುಗ್ರಹಿಸಿರುವವಳು. ಆದರೆ ಮನುಷ್ಯರಾಗಿ ರಾಕ್ಷಸೀಸ್ವಭಾವವಾದ ವಾಮಾಚಾರ ಪದ್ಧತಿಯನ್ನು ಅನುಸರಿಸಿದರೆ ಅಧಃಪತನ ವಾಗುವರೆಂಬುವದರಲ್ಲಿ ಸಂಶಯವಿಲ್ಲ ಆದುದರಿಂದ ರಾಕ್ಷಸೀಕ್ರಮದ ಪೂಜೆಗೆ ತಕ್ಕಂತೆ ಫಲವನ್ನು ಕೊಡಲು ಶ್ರೀದೇವಿಯು ವಾಮಮಾರ್ಗದಲ್ಲೂ ನೆಲೆಸಿರುವಳು. ದೇವತಾಯೋಗ್ಯವಾದ ಕರ್ಮಮಾರ್ಗದ ಪೂಜೆಗೆ ತಕ್ಕಂತೆ ಫಲವನ್ನು ಕೊಡಲು ದಕ್ಷಿಣಾಚಾರ ಮಾರ್ಗದಲ್ಲೂ ನೆಲಸಿರುವಳು. ವಾಮಾಚಾರ ದಕ್ಷಿಣಾಚಾರ ಮಾರ್ಗಗಳಿಗಿಂತ ಜ್ಞಾನಮಾರ್ಗದ ದಾರಿಯಾಗಿ ಮೋಕ್ಷವನ್ನು ಕೊಡುವ ಸಮಯಾ ಚಾರಮಾರ್ಗವು ಅತ್ಯಂತ ಶ್ರೇಷ್ಠವಾದುದು. ಸವ್ಯವೆಂದರೆ ಬಲಭಾಗದ ಸೂರ್ಯ ನಾಡಿಯು ಅಪಸವ್ಯವೆಂದರೆ ಎಡಭಾಗದ ಚಂದ್ರನಾಡಿಯು. ಈ ಎರಡು ಮಾರ್ಗ ಗಳಲ್ಲಿ ಶ್ವಾಸೋಚ್ಛ್ವಾಸವನ್ನುಂಟುಮಾಡುವ ಹಂಸಸ್ವರೂಪಿಣಿಯಾಗಿರುವವಳು.

೯೧೩. **ಸರ್ವಾಪದ್ವಿನಿವಾರಿಣ್ಯೈನಮಃ**--ಸಕಲ ಕಷ್ಟಗಳನ್ನೂ ನಿವಾರಿಸುವವಳು.

೯೧೪. **ಸ್ವಸ್ಥಾಯೈನಮಃ**—

ಮತ್ತೊಂದಕ್ಕೆ ಅಧೀನವಾಗದೆ ತನ್ನಲ್ಲಿ ತಾನೇ ನೆಲೆಸಿರುವವಳು. ಅಂದರೆ ತನ್ನ ಪದವಿಯಾದ ಪರಬ್ರಹ್ಮತ್ವದಲ್ಲಿಯೇ ನೆಲೆಸಿರುವವಳು.

೯೧೫. **ಸ್ವಭಾವಮಧುರಾಯೈನಮಃ**—

ಕಟ್ಟು ಬಣ್ಣವಿಲ್ಲದ ಸ್ವಾಭಾವಿಕವಾಗಿಯೇ ಮಧುರವೆಂದರೆ ಪ್ರೀತಿಯ ಸ್ವಭಾವದವಳಾಗಿರುವವಳು. ಸ್ವತಃ ಮಧುರರೂಪಿಣಿ.

**೯೧೬. ಧೀರಾಯೈನಮಃ—**

ನಿರ್ವಿಕಾರಚಿತ್ತವುಳ್ಳವಳು. ಸನ್ಮಾರ್ಗದಲ್ಲಿನ ಧೈರ್ಯಶಾಲಿನಿಯು.

**೯೧೭. ಧೀರಸಮರ್ಚಿತಾಯೈನಮಃ—**

"ತಂಧೀರಾಸಃ ಕವಯ ಉನ್ನಯಂತಿ" ಎಂಬ ಶ್ರುತಿಯಂತೆ ಪ್ರಪಂಚಕ್ಕೆ ವಿರಕ್ತರಾಗಿ ಆತ್ಮನಿಷ್ಠರಾಗಿರುವ ಧೀರರಿಂದ ಪೂಜಿಸಲ್ಪಡುವವಳು.

**೯೧೮. ಚೈತನ್ಯಾರ್ಘ್ಯ ಸಮಾರಾಧ್ಯಾಯೈನಮಃ —**

"ನಾನು" ಎಂಬ ಶುದ್ಧಜ್ಞಾನವು ಚೈತನ್ಯಸ್ವರೂಪವಾದುದು. ಇಂತಹ "ನಾನು" ಎಂಬ ಜ್ಞಾನವನ್ನು ಅಮೃತಸ್ವರೂಪವಾದ (ಓಂ ಆಪಃ) ಪರಬ್ರಹ್ಮದಲ್ಲಿ "ಸೋಽಹಂ ಭಾವೇನ ಪೂಜಯೇತ್" ಎಂಬ ಶ್ರುತ್ಯಾಧಾರದಂತೆ ಸೋಽಹಂ ಭಾವದಿಂದ ಅರ್ಘ್ಯವಾಗಿ ಬಿಟ್ಟರೆ "ನಾನು" ಎಂಬುದು ಅಮೃತಸ್ವರೂಪವಾಗಿ ಪುನರಾವರ್ತಿರಹಿತನಾಗುವುದು. ಸಮಾರಾಧ್ಯಾ ಎಂದು ಹೇಳಿರುವುದರಿಂದ "ನಾನು" ಎನ್ನುವುದೂ ಅಮೃತಸ್ವರೂಪವೂ ಸಮತೆಯಾಗುವುದೆಂದರೆ ಒಂದಾಗುವುದು. ಆದ್ದರಿಂದ "ನಾನು" ಎಂಬುದನ್ನು ಪರಬ್ರಹ್ಮನಲ್ಲಿ ಅರ್ಘ್ಯರೂಪದಿಂದ ಆರಾಧಿಸುವ ಸ್ವರೂಪದವಳು.

**೯೧೯. ಚೈತನ್ಯಕುಸುಮಪ್ರಿಯಾಯೈನಮಃ—**

ಮೇಲಿನ ನಾಮದಲ್ಲಿ ವಿವರಿಸಿರುವಂತೆ "ನಾನು" ಎಂಬ ಶುದ್ಧಜ್ಞಾನವೇ ಪುಷ್ಪಸ್ವರೂಪವಾಗಿಯೂ ಇರುವುದು. ಈ ಪುಷ್ಪವು ಪರಬ್ರಹ್ಮಸ್ವರೂಪಿಣಿಯಾದ ಶ್ರೀದೇವಿಗೆ ಪ್ರಿಯವಾದುದರಿಂದ ಆ ದೇವಿಗೆ ಅರ್ಪಿಸಿದರೆ ನಾನು ಎಂಬ ಜ್ಞಾನದ ವಾಸನೆಯು ಹೋಗಿ ಶ್ರೀದೇವಿಯಸ್ವರೂಪವಾದ ಬ್ರಹ್ಮಾನಂದದ ವಾಸನೆಯಾಗುವುದು. ಅಂದರೆ ಬ್ರಹ್ಮಾನಂದವಾಗುವುದು.

**೯೨೦. ಸದೋದಿತಾಯೈನಮಃ—**

ನಿರಂತರ ಉದಯವಾಗಿರುವವಳು ಅಂದರೆ ಅಸ್ತವಿಲ್ಲದವಳು.

**೯೨೧. ಸದಾತುಷ್ಟಾಯೈನಮಃ—**ನಿತ್ಯತೃಪ್ತಳು.

**೯೨೨. ತರುಣಾದಿತ್ಯಪಾಟಲಾಯೈನಮಃ—**

ಬಾಲಸೂರ್ಯನಂತೆ ಕೊಂಚ ಕೆಂಪು ಮಿಶ್ರವಾದ ಬಿಳುಪು ಬಣ್ಣದಿಂದ ಪ್ರಕಾಶಿಸುವವಳು.

**೯೨೩. ದಕ್ಷಿಣಾದಕ್ಷಿಣಾರಾಧ್ಯಾಯೈನಮಃ—**

ಅದಕ್ಷಿಣವೆಂದರೆ ದಕ್ಷಿಣಕ್ಕೆ ಪ್ರತಿಕಕ್ಷಿಯಾಗಿರುವ ಉತ್ತರ ಮಾರ್ಗದಲ್ಲಿ ಅರ್ಚಿಸಲ್ಪಡುವವಳು. ಉತ್ತರವೆಂದರೆ ದಾಟುವುದು ಎಂದರ್ಥವಾಗಿ ಪ್ರಪಂಚದಿಂದ ದಾಟಿ ಮೋಕ್ಷಕ್ಕೆ ಹತ್ತುವ ಮಾರ್ಗ. ಅಂದರೆ ಜ್ಞಾನಮಾರ್ಗ. ಇದಕ್ಕೆ ಆಧಾರವಾಗಿ ಪ್ರಶ್ನೋಪನಿಷತ್ತಿನಲ್ಲಿ "ಅಥೋತ್ತರೇಣ ತಪಸಾಬ್ರಹ್ಮಚರ್ಯೇಣ ಶ್ರದ್ಧಯಾ" ಎಂದು ಹೇಳಿದೆ. ಜ್ಞಾನಮಾರ್ಗವಾದ್ದರಿಂದ ಇದಕ್ಕೆ ಉತ್ತರಾಯಣ ಮಾರ್ಗವೆಂದು ಹೇಳಲ್ಪಡುವುದು

ದಕ್ಷಿಣವೆಂದರೆ "ದಕ್ಷತೆ ವರ್ಧತೆ ದಕ್ಷಿಣಾ" ಎಂಬ ಅಮರದ ವ್ಯಾಖ್ಯಾನದಂತೆ ಪ್ರಪಂಚರೂಪವಾಗಿ ವೃದ್ಧಿಹೊಂದುವ ಮಾರ್ಗ. ಅಂದರೆ ಮೋಕ್ಷಾಪೇಕ್ಷೆ ಇಲ್ಲದೆ ವೇದದ ಕರ್ಮಕಾಂಡದಂತೆ ಆಚರಿಸುವ ಹೋಮ, ಅರ್ಚನೆ ಮುಂತಾದವುಗಳು ದಕ್ಷಿಣಮಾರ್ಗಕ್ಕೆ ಸೇರಿದುದು. ದಕ್ಷಿಣಮಾರ್ಗವು ಪುನಃ ಜನ್ಮಗಳನ್ನು ಕೊಡುತ್ತಲೇ ಇರುವುದು. ಇದಕ್ಕೆ ದಕ್ಷಿಣಾಯನ ಮಾರ್ಗವೆಂದು ಹೆಸರು. ದಕ್ಷಿಣಾಯನದಲ್ಲಿ ಸಾಯುವದು ಶ್ರೇಷ್ಠವಲ್ಲವೆಂದು ಹೇಳುವುದು ಈ ತತ್ವದ ಆಧಾರದ ಮೇಲೆಯೆ ಆಗಿದೆ. ಉತ್ತರಾಯಣ ಮಾರ್ಗವಾದ ಜ್ಞಾನಮಾರ್ಗಕ್ಕೆ ಈಶ್ವರಾನುಗ್ರಹವೂ ಅವಶ್ಯಕವಾಗಿ ಬೇಕಾಗಿರುವುದರಿಂದ ನಿಷ್ಕಾಮರಾಗಿ ಚಿತ್ತಶುದ್ಧಿಗೋಸ್ಕರಲೂ ಶ್ರೀ ಈಶ್ವರಿಯ ಅನುಗ್ರಹಕ್ಕೋಸ್ಕರಲೂ ವೇದವಿಹಿತ ಕರ್ಮಗಳನ್ನು ಆಚರಿಸಲೇಬೇಕು. ಆದುದರಿಂದ ದಕ್ಷಿಣ ಮತ್ತು ಉತ್ತರ ಮಾರ್ಗಗಳೆರಡರಲ್ಲೂ ಆರಾಧಿಸಲ್ಪಡುವವಳು.

**೯೨೪. ದರಸ್ಮೇರಮುಖಾಂಬುಜಾಯೈನಮಃ—**

ಕಿರುನಗೆಯಿಂದ ಹೊಳೆಯುತ್ತಿರುವ ಕಮಲದಂತಿರುವ ನಗುಮುಖವುಳ್ಳವಳು.

**೯೨೫. ಕಾಲಿನೀಕೇವಲಾಯೈನಮಃ—**

ಪ್ರಪಂಚಸ್ವರೂಪಳು. ಮತ್ತು ಕೇವಲ ಪರಬ್ರಹ್ಮವೂ ಆಗಿರುವವಳು.

**೯೨೬. ಅನರ್ಘ್ಯಕೈವಲ್ಯಪದದಾಯಿನ್ಯೈನಮಃ—**

ಅಮೂಲ್ಯವೆನಿಸುವ ಕೈವಲ್ಯವೆಂದರೆ ಪ್ರತಿಬಿಂಬಚೈತನ್ಯನು ಜೀವನೆನಿಸಿಕೊಳ್ಳದ ಪುನಃ ಸ್ಥೂಲದೇಹ ಪ್ರಾಪ್ತವಾಗದ ಸರ್ವವ್ಯಾಪಕವೇ ಮುಖ್ಯವಾದ ಸ್ವರೂಪವಾಗಿ ಉಳ್ಳ ದೇಹಪತನಕಾಲದಲ್ಲಿ ಹೊಂದುವ ಮುಕ್ತಿಯನ್ನು ಅನುಗ್ರಹಿಸುವವಳು.

೯೨೭. **ಸ್ತೋತ್ರಪ್ರಿಯಾಯೈನಮಃ**—

ಸ್ತೋತ್ರಗಳಿಂದ ಸಂತೋಷಪಡುವವಳು.

೯೨೮. **ಸ್ತುತಿಮತ್ಯೈನಮಃ**—ಅನೇಕ ಸ್ತೋತ್ರಸಂಪನ್ನಳು

೯೨೯. **ಶ್ರುತಿಸಂಸ್ತುತವೈಭವಾಯೈನಮಃ**—

ಶ್ರೀದೇವಿಯ ಮಹತ್ತು ಶ್ರುತಿಗಳಿಂದಲೇ ಉದ್ಘೋಷಿಸಲ್ಪಟ್ಟಿರುವುದು ಆದುದರಿಂದ ಶ್ರುತಿಗಳಿಂದಲೇ ಹೊಗಳಲ್ಪಟ್ಟ ಮಹತ್ತುಳ್ಳ ಪರಬ್ರಹ್ಮಸ್ವರೂಪಿಣಿಯು.

೯೩೦. **ಮನಸ್ವಿನ್ಯೈನಮಃ**—

ಉದಾರಚಿತ್ತವುಳ್ಳವಳು. ಇಚ್ಛಾಮಾತ್ರ ಪ್ರಭುವಾಗಿರುವವಳು

೯೩೧. **ಮಾನವತ್ಯೈನಮಃ**—ಮಹತ್ತಾದ ನಿರ್ಮಲವುಳ್ಳ ಗೌರವವುಳ್ಳವಳು.

೯೩೨. **ಮಹೇಶ್ಯೈನಮಃ**—

ತ್ರಿಮೂರ್ತಿಗಳಿಂದಲೇ ಪೂಜಿಸಲ್ಪಟ್ಟವಳಾದುದರಿಂದ ಮಹೇಶಿ ಎನಿಸಿಕೊಂಡಿರುವವಳು.

೯೩೩. **ಮಙ್ಗಳಾಕೃತ್ಯೈನಮಃ**—ಮಂಗಳಕರವಾದ ರೂಪವುಳ್ಳವಳು.

೯೩೪. **ವಿಶ್ವಮಾತ್ರೇನಮಃ**—

ಜಗತ್ತಿಗೆ ತಾಯಿಯು. ವಿಶ್ವ ಎಂದರೆ ವಿಷ್ಣುವಾದ್ದರಿಂದ ವಿಷ್ಣುವಿಗೂ ಮಾತೆಯು.

೯೩೫. **ಜಗದ್ಧಾತ್ರ್ಯೈನಮಃ**—

ಜಗತ್ತನ್ನು ಉಪಮಾತೆಯಾಗಿ ಪೋಷಿಸುವವಳು.

೯೩೬. **ವಿಶಾಲಾಕ್ಷ್ಯೈನಮಃ**—ವಿಶಾಲವಾದ ನೇತ್ರಗಳುಳ್ಳವಳು.

೯೩೭. **ವಿರಾಗಿಣ್ಯೈನಮಃ**—ವಿರಕ್ತಳು. ಕಾಮಾಸಕ್ತಿರಹಿತಳು.

೯೩೮. **ಪ್ರಗಲ್ಭಾಯೈನಮಃ**—

ಸಕಲ ಕಾರ್ಯಗಳಲ್ಲೂ ಪ್ರೌಢತ್ವದಿಂದ ಇರುವವಳು.

೯೩೯. **ಪರಮೋದಾರಾಯೈನಮಃ**—ಬಹು ಉದಾರಸ್ವಭಾವದವಳು.

**೯೪೦. ಪರಾಮೋದಾಯೈನಮಃ—**

ಅತ್ಯಂತ ಆಹ್ಲಾದಸ್ವರೂಪಿಣಿಯು. ಬ್ರಹ್ಮಾನಂದ ಸ್ವರೂಪಿಣಿಯು.

**೯೪೧. ಮನೋಮಯ್ಯೈನಮಃ—**

ಅನೇಕ ವಿಧವಾದ ಸೃಷ್ಟಿಯ ಸಂಕಲ್ಪಸ್ವರೂಪಿಣಿಯು.

**೯೪೨. ವ್ಯೋಮಕೇಶ್ಯೈನಮಃ—**

ಆಕಾಶವೇ ತಲೆಯ ಕೂದಲಾಗಿರುವವಳು. ಅಂದರೆ ಜಗತ್ತೇ ದೇಹವಾಗುಳ್ಳ ವಿರಾಟ್‌ಸ್ವರೂಪವಾದ ಶ್ರೀದೇವಿಯ ಶಿರಸ್ಸಿನಕೂದಲೇ ಆಕಾಶವು.

**೯೪೩. ವಿಮಾನಸ್ಥಾಯೈನಮಃ—**

ಆಕಾಶದಲ್ಲಿ ಸಂಚರಿಸುವುದು ವಿಮಾನವು. ವಿಮಾನದಲ್ಲಿ ಸಂಚರಿಸುವವರು ದೇವತೆಗಳು ಆದುದರಿಂದ ದೇವತೆಗಳ ಸ್ವರೂಪವಾಗಿರುವವಳು. ಪ್ರತಿಯೊಂದಕ್ಕೂ ಅಂಟದೆ ಗಗನಸ್ವರೂಪದಲ್ಲಿರುವವಳು. ಗರ್ವವಿಲ್ಲದವಳು. ದೇಹಾಭಿಮಾನರಹಿತವಾದ ಜ್ಞಾನಿಗಳಲ್ಲಿ ನೆಲೆಸಿರುವವಳು. ವೇದರೂಪ ಪ್ರಮಾಣದಲ್ಲಿ ನೆಲೆಸಿರುವವಳು.

**೯೪೪ ವಜ್ರಿಣ್ಯೈನಮಃ—**

ಇಂದ್ರನ ಪತ್ನಿಯಾದ ಶಚೀದೇವಿಯಾಗಿರುವವಳು. ವಜ್ರದಿಂದ ಅಲಂಕರಿಸಲ್ಪಟ್ಟವಳು. ವಜ್ರಾಯುಧಕ್ಕೂ ದೇವತೆಯು.

**೯೪೫. ವಾಮಕೇಶ್ವರ್ಯೈನಮಃ—**

ವಾಮವೆಂದರೆ ಸೃಷ್ಟಿಸು ಎಂಬರ್ಥದಂತೆ ಸೃಷ್ಟಿಕಾರ್ಯಮಾಡುವ ದಕ್ಷಪ್ರಜಾಪತಿಗಳಿಗೆ ಒಡೆಯಳು. ವಾಮಕ ಎಂದರೆ ಎಡಗಡೆಯಲ್ಲಿರುವುದು. ನಮ್ಮ ದೇಹದ ಎಡಭಾಗದಲ್ಲಿರುವುದು ಚಂದ್ರನಾಡಿ. ಇದಕ್ಕೆ ನಾಥಳು. ಅಲ್ಲದೆ ಮೂಲಾಧಾರದಲ್ಲಿರುವ ನಮ್ಮ ಪ್ರಾರಬ್ಧ ಕರ್ಮಸ್ವರೂಪವಾದ ವಾಸನೆಯನ್ನು ಸೂರ್ಯನಾಡಿಯು ಮೂಲಾಧಾರದಿಂದ ಎಳೆದುಕೊಂಡು ಅಂತಃಕರಣಕ್ಕೆ ಬಿಡುವುದು. ಅನಂತರ ಈ ವಾಸನೆಯು ಇಂದ್ರಿಯಗಳ ಮೂಲಕ ಕಾರ್ಯವಾಗಿಯೋ ಅಥವಾ ಮನೋರಾಜ್ಯದಲ್ಲೆ ಕಾರ್ಯಮಾಡಿಕೊಂಡೋ ಫಲಿತಾಂಶವು ಚಂದ್ರನಾಡಿಯಮೂಲಕ ಕರ್ಮಕ್ಕೆ ತಕ್ಕಫಲರೂಪವಾದ ಆಗಾಮಿವಾಸನಾರೂಪವಾಗಿ ಪುನಃ ಪ್ರದಕ್ಷಿಣಾರೂಪವಾಗಿ ಮೂಲಾಧಾರಕ್ಕೆ ಬಂದು ಸೇರುವುದು. ಆದುದರಿಂದ

ಚಂದ್ರನಾಡಿಗೆ ನಾಥಳಾದ ಶ್ರೀದೇವಿಯು ಕರ್ಮಕ್ಕೆ ತಕ್ಕ ಫಲವನ್ನು ಕೊಡುವ ಪ್ರಭುವು. ವಾಮಶಬ್ದವು ಕರ್ಮಪರವಾದಾಗ ಕರ್ಮಫಲವನ್ನು ಕೊಡುವುದೆಂದೂ ಅರ್ಥವಾಗುವುದು. ಆದುದರಿಂದ ವಾಮಕೇಶ್ವರಿಯೆಂದರೆ ಚಂದ್ರನಾಡಿಗೆ ನಾಥಳು ಮತ್ತು ಕರ್ಮಕ್ಕೆ ತಕ್ಕ ಫಲವನ್ನು ಕೊಡುವ ಪ್ರಭುವಾಗಿರುವಳು ಈ ನಾಮಕ್ಕೆ ಶ್ರೀದೇವಿಯು ವಾಮಕೇಶ್ವರ ತಂತ್ರರೂಪವಾಗಿರುವವಳೆಂದು ಭಾಸ್ಕರರಾಯರು ಅರ್ಥ ಬರೆದಿರುವುದು ಸಮಂಜಸವಾಗಿಲ್ಲ. ಅಲ್ಲದೆ ಶ್ರೀದೇವಿಯು ದೇಹದ ಎಡ ಭಾಗಕ್ಕೆ ನಾಥಳೆಂದು ಕೆಲವು ತಾಂತ್ರಿಕರು ಅರ್ಥಮಾಡಿಕೊಂಡು ಶ್ರೀದೇವಿಯ ಎಡದ ಹಸ್ತಕ್ಕೇನೆ ತಮ್ಮ ಎಡಹಸ್ತದಿಂದ ಅರ್ಚನಾದಿಗಳನ್ನು ಮಾಡುತ್ತಾರೆ. ಇದು ಅವರ ಅಜ್ಞಾನದ ದೋಷವೆಂದೇ ಹೇಳಬೇಕು. ೬೨೮ ನೇ ನಾಮದಲ್ಲಿ ತ್ರಿಮೂರ್ತಿ ಸ್ವರೂಪಿಣಿ, ೨೦೨, ೨೦೩ ರಲ್ಲಿ ಸರ್ವೇಶ್ವರೀ, ಸರ್ವಮಯೀ ಮುಂತಾಗಿ ಅನೇಕ ನಾಮಗಳು ಶ್ರೀದೇವಿಯು ಸರ್ವಸ್ವರೂಪಳೆಂದು ಹೇಳಿರುವಾಗ ಎಡಭಾಗಕ್ಕೇ ಪ್ರಾಶಸ್ತ್ಯಕೊಡುವುದು ಪಾಷಂಡಿತನವನ್ನೂ ಅವಿವೇಕವನ್ನೂ ತೋರಿಸುವುದು. ಶ್ರೀದೇವಿಯ ಬಲದ ಹಸ್ತವು ಅಭಯದಾಯಕವಾಗಿಯೂ ಎಡದ ಹಸ್ತವು ವರ ವೆಂದರೆ ಕರ್ಮಕ್ಕೆ ತಕ್ಕ ಫಲವನ್ನು ಕೊಡುವುದಾಗಿಯೂ ಇರುವ ತತ್ವದ್ದೇ ಆಗಿದೆ. ವಾಮ ಎಂದರೆ ಈಶ್ವರ. ಕ ಎಂದರೆ ಬ್ರಹ್ಮ. ಇವರಿಬ್ಬರಿಗೂ ನಾಥಳು.

**೯೪೬. ಪಂಚಯಜ್ಞಪ್ರಿಯಾಯೈನಮಃ—**

ಪಂಚ ಯಜ್ಞಗಳಲ್ಲಿ ಪ್ರೀತಿಯುಳ್ಳವಳು. ಅಗ್ನಿಹೋತ್ರ, ದರ್ಶಪೂರ್ಣ ಮಾಸ, ಚಾತುರ್ಮಾಸ್ಯ, ಪಶು, ಸೋಮ ಈ ಐದು ವಿಧವಾದ ಯಜ್ಞಗಳಲ್ಲೂ ದೇವತಾಪೂಜೆ, ಪಿತೃತರ್ಪಣ, ಬ್ರಹ್ಮಯಜ್ಞ, ವೈಶ್ವದೇವ, ಅತಿಥಿಸತ್ಕಾರಗಳೆಂಬ ಐದು ಯಜ್ಞಗಳಲ್ಲೂ, ಗುರುಕುಲವಾಸ, ಭಿಕ್ಷ, ಅಗ್ನಿಕಾರ್ಯ, ಗಾಯತ್ರೀ ಉಪಾಸನೆ, ಸ್ವಶಾಖಾಧ್ಯಯನಗಳೆಂಬ ಐದು ಯಜ್ಞಗಳಲ್ಲೂ ವೇದಾಂತಶ್ರವಣ, ಮನನ, ಪ್ರಾಣಾಯಾಮ, ಧ್ಯಾನ, ಸಮಾಧಿಗಳ ಅನುಷ್ಠಾನರೂಪವಾದ ಪಂಚ ಜ್ಞಾನಯಜ್ಞಗಳಲ್ಲೂ ಪ್ರೀತಿಯುಳ್ಳವಳು.

**೯೪೭ ಪಂಚಪ್ರೇತ ಮಂಚಾಧಿಶಾಯಿನ್ಯೈನಮಃ—**

ಈ ನಾಮಕ್ಕೆ ಪಂಚಪ್ರೇತಸ್ವರೂಪವಾದ ಮಂಚದಲ್ಲಿ ಮಲಗಿರುವವಳು ಎಂದರ್ಥ. ಪಂಚಭೂತಗಳೇ ಪಂಚಪ್ರೇತಗಳೆಂದು ೨೪೯ ನೆಯ ನಾಮದಲ್ಲಿ ವಿವರಿಸಿ ಬರೆದಿರುವುದಷ್ಟೆ? ೨೪೯ ನೇ ನಾಮದಲ್ಲಿ ಪಂಚಪ್ರೇತಾಸನಾಸೀನಾ ಎಂದು ಇರುವುದು. ಈನಾಮದಲ್ಲಿ ಪಂಚಪ್ರೇತಮಂಚಾಧಿಶಾಯಿನೀ ಎಂದಿರುವುದು. ಈ ಎರಡು ನಾಮಗಳಿಗೂ ಇರುವ ತತ್ವವ್ಯತ್ಯಾಸವೇನೆಂದರೆ ೨೪೯ ನೆಯ ನಾಮ ದಲ್ಲಿ ಶ್ರೀದೇವಿಯು ಈಶ್ವರೀಸ್ವರೂಪದಿಂದ ಪಂಚಭೂತಗಳಲ್ಲೂ ನೆಲಿಸಿ ಕಾರ್ಯ

ಪ್ರಕಾಶಕಳಾಗಿರುವ ತತ್ವವಾಗಿದೆ. ಈ ನಾಮದಲ್ಲಿ ಶ್ರೀದೇವಿಯು ಪರಬ್ರಹ್ಮ ಸ್ವರೂಪದಿಂದ ಪಂಚಭೂತಗಳಲ್ಲೂ ವ್ಯಾಪಿಸಿ ಕಾರ್ಯಪ್ರಕಾಶಕಳಾಗದೆ ನಿರ್ಲಿಪ್ತತೆಯಿಂದಲೂ ತಟಸ್ಥಸ್ವಭಾವದಿಂದಲೂ ಇರುವ ತತ್ವವೇ ಪಂಚಪ್ರೇತಸ್ವರೂಪವಾದ ಮಂಚದಲ್ಲಿ ಮಲಗಿರುವುದಾಗಿದೆ. ಕಾರ್ಯಪ್ರಕಾಶಕವಾಗಿರುವುದು ಈಶ್ವರ ಚೈತನ್ಯವೇ ಹೊರತು ಪರಬ್ರಹ್ಮವಲ್ಲವೆಂದು ವೇದಾಂತಶಾಸ್ತ್ರವೂ ತಿಳಿಸುವುದು.

**೯೪೮. ಪಂಚಮ್ಯೈನಮಃ—**

ಐದನೇಯವಳು. ಹೇಗೆಂದರೆ ಪಂಚಭೂತಗಳಿದ್ದಾಗ ಪರಬ್ರಹ್ಮಸ್ವರೂಪಿಣಿಯಾದ ಶ್ರೀದೇವಿಯು ಮುಖ್ಯವಾದ ಸ್ಥಳವು ಆಕಾಶಾಂತರ್ಗತವಾಗಿರುವ ಕಳಾಸ್ವರೂಪವು ಮತ್ತು ಸರ್ವವ್ಯಾಪಕವಾದ ಪರಬ್ರಹ್ಮಸ್ವರೂಪವು. ಆಕಾಶಕ್ಕೂ ಪರಬ್ರಹ್ಮಕ್ಕೂ ಭೇದವು ಗೊತ್ತಾಗುವುದಿಲ್ಲ. "ಆಕಾಶೋಹವೈ ನಾಮರೂಪೊ ನಿರ್ವಹಿತಾತೆ ತದಂತರ್ತದ್ಬ್ರಹ್ಮ" ಎಂಬ ಮತ್ತು "ಖಮಧ್ಯೆಕುರುಚಾತ್ಮಾನಮಾತ್ಮಮಧ್ಯೇಚ ಖಂಕುರು | ಸರ್ವಂಚ ಖಮಯಂಕೃತ್ವಾ ನಕಿಂಚದಪಿ ಚಿಂತಯ" ಎಂಬ ಶ್ರುತ್ಯಾಧಾರದಂತೆ ಆಕಾಶಾಂತರ್ಗತವಾಗಿರುವ ಪರಬ್ರಹ್ಮಸಿಗೂ ಆಕಾಶಕ್ಕೂ ಇರುವ ಭೇದವು ನಮಗೆ ಗೋಚರವಾಗುವುದಿಲ್ಲವಾದುದರಿಂದ ಸಗುಣದಲ್ಲಿ ಭೂಮಿ, ಜಲ, ಅಗ್ನಿ, ವಾಯು, ಈ ನಾಲ್ಕನ್ನೂ ಬಿಟ್ಟು ಐದನೆಯದಾದ ಸರ್ವವ್ಯಾಪಕವಾದ ಆಕಾಶಸ್ವರೂಪದಂತೆ ಇದ್ದು ಸರ್ವಕ್ಕೂ ಆಧಾರವಾಗಿರುವುದೇ ಪರಬ್ರಹ್ಮಸ್ವರೂಪವು. ಆದುದರಿಂದ ಪಂಚಭೂತಗಳಲ್ಲಿ ಐದನೆಯದಾಗಿರುವ ಆಕಾಶಸ್ವರೂಪದಂತೆ ಸರ್ವವ್ಯಾಪಕವಾಗಿರುವ ಪರಬ್ರಹ್ಮಸ್ವರೂಪಿಣಿಯು. ಅಲ್ಲದೆ ಬ್ರಹ್ಮ, ವಿಷ್ಣು, ರುದ್ರ, ಈಶ್ವರ ಈ ನಾಲಕಕ್ಕೂ ಅತೀತವಾದ ಐದನೆಯದಾದ ನಿರ್ಗುಣಬ್ರಹ್ಮಸ್ವರೂಪಿಣಿಯು.

**೯೪೯. ಪಂಚಭೂತೇಶ್ಯೈನಮಃ**--ಪಂಚಭೂತಗಳಿಗೂ ಪ್ರಭುವಾಗಿರುವವಳು.

**೯೫೦. ಪಂಚಸಂಖ್ಯೋಪಚಾರಿಣ್ಯೈನಮಃ—**

ಪಂಚಭೂತಗಳ ತತ್ವಗಳನ್ನೇ ಅರ್ಪಣೆಮಾಡುವ ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯಗಳಾದ ಪಂಚೋಪಚಾರಗಳಿಂದ ಅರ್ಚಿಸಲ್ಪಡುವವಳು. ಪಂಚಭೂತಗಳ ತತ್ವಗಳನ್ನೇ ಶ್ರೀದೇವಿಗೆ ಅರ್ಪಣೆಮಾಡುವುದೆಂದರೆ ಪಂಚಭೂತಾತ್ಮಕವಾದ ದೇಹಾಭಿಮಾನವನ್ನು ತ್ಯಜಿಸಿ ಶ್ರೀದೇವಿಯನ್ನು ಉಪಾಸನೆಮಾಡಬೇಕೆಂಬ ತತ್ವವಾಗಿರುವುದು. ಮೋಕ್ಷಕಾಮನೆಯ ಸ್ವರೂಪವಾದ ಗಂಧ, ಮನಸ್ಸನ್ನು ಆತ್ಮನಲ್ಲಿಡುತ್ತಾ ಬರುವ ಧ್ಯಾನಸ್ವರೂಪವಾದ ಪುಷ್ಪಾರ್ಚನೆ, ನಾನೇ ಬ್ರಹ್ಮನೆಂಬ ಜ್ಞಾನದ ಧೂಪ, ದೇಹದಲ್ಲಿರುವ ಮೂರು ಅಗ್ನಿಗಳ ಪ್ರಜ್ವಲನೆಯ ದೀಪ, ಪರ

ಬ್ರಹ್ಮಸ್ವರೂಪಿಣಿಯಾದ ಶ್ರೀದೇವಿಯಲ್ಲಿ "ನಾನು" ಎಂಬ ಜ್ಞಾನವನ್ನು ನಿವೇದನ ಮಾಡುವಿಕೆಗಳೆಂಬ ಜ್ಞಾನಮಾರ್ಗದ ಈ ಐದರಿಂದಲೂ ಪೂಜಿಸಲ್ಪಡುವವಳು.

೯೫೧. **ಶಾಶ್ವತ್ಯೈನಮಃ**—ಶಾಶ್ವತವಾಗಿರುವವಳು.

೯೫೨ **ಶಾಶ್ವತೈಶ್ವರ್ಯಾಯೈನಮಃ**—ನಾಶರಹಿತವಾದ ವಿಭೂತಿಗಳುಳ್ಳವಳು.

೯೫೩. **ಶರ್ಮದಾಯೈನಮಃ**—

ನಿತ್ಯಸುಖಸ್ವರೂಪವಾದ ಬ್ರಹ್ಮಾನಂದವನ್ನು ಅನುಗ್ರಹಿಸುವವಳು.

೯೫೪. **ಶಂಭುಮೋಹಿನ್ಯೈನಮಃ**—

ಈಶ್ವರನನ್ನು ಆನಂದಪರವಶನನ್ನಾಗಿ ಮಾಡುವವಳು.

೯೫೫. **ಧರಾಯೈನಮಃ**—ಭೂದೇವಿಯು. ಜಗತ್ತನ್ನು ಪೋಷಿಸುವವಳು.

೯೫೬. **ಧರಸುತಾಯೈನಮಃ**—ಪರ್ವತರಾಜನ ಮಗಳು.

೯೫೭. **ಧನ್ಯಾಯೈನಮಃ**—

ಕರ್ತವ್ಯಶೂನ್ಯಳು. ತೃಪ್ತಳು. ಸಕಲೈಶ್ವರ್ಯ ಸಂಪನ್ನೆಯು.

೯೫೮. **ಧರ್ಮಿಣ್ಯೈನಮಃ**—

ಧರ್ಮವೇ ಸ್ವರೂಪವಾಗಿ ಉಳ್ಳವಳು. ಧರ್ಮಸ್ವರೂಪವು ಎಂತಹುದೆಂಬುದನ್ನು ಹಿಂದೆಯೇ ವಿವರಿಸಿದೆ

೯೫೯. **ಧರ್ಮವರ್ಧಿನ್ಯೈನಮಃ**—

ಧರ್ಮವನ್ನು ವೃದ್ಧಿಪಡಿಸುವವಳು. ಅಂದರೆ ಯಾವಾಗ ಧರ್ಮಕ್ಕೆ ಕೊರತೆಯುಂಟಾಗುವುದೊ ಆಗ ಶ್ರೀದೇವಿಯು ಅವತಾರಮಾಡಿ ಸಾಧುಗಳನ್ನು ಸಂರಕ್ಷಿಸಿ ದುಷ್ಟರನ್ನು ವಿನಾಶಗೊಳಿಸಿ ಧರ್ಮವನ್ನು ವೃದ್ಧಿಮಾಡುವಳು.

೯೬೦. **ಲೋಕಾತೀತಾಯೈನಮಃ**—ಜಗತ್ತಿಗೆ ಅತೀತಳು.

೯೬೧. **ಗುಣಾತೀತಾಯೈನಮಃ**—

ಸತ್ವರಜಸ್ತಮೋಗುಣಗಳಿಗೂ ಅತೀತಳು. ನಿರ್ಗುಣಳು.

**೯೬೨. ಸರ್ವಾತೀತಾಯೈನಮಃ—**

ತ್ರಿಮೂರ್ತಿಗಳಾದಿಯಾಗಿ ಸರ್ವಕ್ಕೂ ಅತೀತಳು. ಎಲ್ಲವನ್ನೂ ಮೀರಿದವಳು.

**೯೬೩. ಶಮಾತ್ಮಿಕಾಯೈನಮಃ—**

ಪ್ರಪಂಚವನ್ನು ಸರ್ವಭೂತಗಳ ಸಮಷ್ಟಿಕಿಯಲ್ಲಿ ಇಟ್ಟಿರುವವಳು. "ಚತುರ್ಥಶ್ಶಾಂತ ಆತ್ಮಾ" ಎಂಬ ಶ್ರುತ್ಯಾಧಾರದಂತೆ ಯಾವ ಉಪಾಧಿಯೂ ಇಲ್ಲದ ಚಿದ್ವಸ್ತುವಾಗಿರುವವಳು.

**೯೬೪. ಬನ್ಧೂಕಕುಸುಮಪ್ರಖ್ಯಾಯೈನಮಃ—**

ಕೆಂಪುದಾಸವಾಳ ಹುವ್ವಿನ ಬಣ್ಣಕ್ಕೆ ಹೋಲಿಕೆಯಾದ ಬಣ್ಣದಿಂದ ಪ್ರಕಾಶಿಸುವಳು.

**೯೬೫. ಬಾಲಾಯೈನಮಃ—**

ಚಿಕ್ಕವಯಸ್ಸಿನ ಶ್ರೀಬಾಲಾ ಅವತಾರದ ಸ್ವರೂಪಿಣಿಯು "ತ್ವಂ ಕುಮಾರ ಉತವಾ ಕುಮಾರೀ" ಎಂದು ತ್ರಿಪರ್ಶೋಪನಿಷತ್ತಿನಲ್ಲಿ ಹೇಳಿವೆ. ಅಂದರೆ ಶ್ರೀದೇವಿಗೆ ಸೃಷ್ಟಿಕ್ರಮದಲ್ಲಿ ಪ್ರಥಮಾವತಾರವಾಗಿರುವುದೇ ಶ್ರೀಬಾಲಾವತಾರವು.

ಇಲ್ಲಿಂದ ೯೭೫ ನೇ ನಾಮದವರಿವಿಗೆ ಶ್ರೀ ಬಾಲಾಂಬಾ ಅವತಾರದ ಮಹಿಮೆಯನ್ನು ತಿಳಿಸುವುದು.

**೯೬೬. ಲೀಲಾವಿನೋದಿನ್ಯೈನಮಃ—**

ಬಾಲಕ್ರೀಡೆಯಲ್ಲಿ ಅಭಿರುಚಿಯುಳ್ಳವಳು.

**೯೬೭. ಸುಮಂಗಲ್ಯೈನಮಃ—**

ಸಮೀಚೀನವಾದ ಅಥವಾ ಶ್ರೇಷ್ಠವಾದ ಶುಭಸ್ವರೂಪಿಣಿಯು

**೯೬೮. ಸುಖಕರ್ಯೈನಮಃ**—ಸೌಖ್ಯವನ್ನುಂಟುಮಾಡುವವಳು.

**೯೬೯. ಸುವೇಷಾಢ್ಯಾಯೈನಮಃ—**

ಸಮೀಚೀನವಾದ ರತ್ನ ವೈಡೂರ್ಯ ಪೀತಾಂಬರಗಳ ಅಲಂಕಾರದಿಂದ ಪ್ರಕಾಶಿಸುತ್ತಿರುವಳು.

**೯೭೦. ಸುವಾಸಿನ್ಯೈನಮಃ—**

ನಿತ್ಯಮಂಗಳ ಸ್ವರೂಪಿಣಿಯು. ವಾಸವೆಂದರೆ ನೆಲೆಸಿರುವುದೆಂದು ಅರ್ಥ. ಪತಿವ್ರತಾಶಿರೋಮಣಿಯಾಗಿಯೂ ಶ್ರೀದೇವಿಯ ಪರಮಭಕ್ತಳಾಗಿಯೂ ನೆಲೆಸಿರುವ ಪತಿಯೊಡಗೂಡಿದ ಹೆಂಗಸಿಗೆ ಸುವಾಸಿನೀ ಎಂದು ಹೆಸರು ಇಂತಹವರೂ ಶ್ರೀದೇವಿಯೆ. ಅಲ್ಲದೆ ಕಾಮಕ್ರೋಧಾದಿ ದುರ್ವಾಸನೆಗಳಿಲ್ಲದ ಪರಿಶುದ್ಧವಾದ ಮನಸ್ಸಿನ ಸ್ವರೂಪವುಳ್ಳವರೂ ಶ್ರೀದೇವಿಯೇ ಆಗಿರುತ್ತಾಳೆ.

**೯೭೧. ಸುವಾಸಿನ್ಯರ್ಚನಪ್ರೀತಾಯೈನಮಃ—**

ಮೇಲಿನ ನಾಮದಲ್ಲಿ ತಿಳಿಸಿರುವಂತಹ ಪತಿವ್ರತೆಯಳಾಗಿಯೂ ಶ್ರೀದೇವಿಯ ಭಕ್ತಳಾಗಿಯೂ ಇರುವ ಸುಮಂಗಲಿಯರಿಂದ ಪೂಜಿಸಿಕ್ಕೊಳ್ಳಲು ಪ್ರೀತಿಯುಳ್ಳವಳು. ಸುಮಂಗಲಿಯರನ್ನು ಪೂಜಿಸುವುದರಿಂದ ಪ್ರೀತಳಾಗುವವಳು. ಅಲ್ಲದೆ ಸುವಾಸಿನಿ ಎಂದರೆ ಕಾಮಕ್ರೋಧಾದಿ ದುರ್ವಾಸನೆಗಳಿಲ್ಲದೆ ಪರಿಶುದ್ಧವಾದ ಮನಸ್ಸುಳ್ಳ ಸಕಲರಿಂದಲೂ ಪೂಜಿಸಿಕೊಳ್ಳಲು ಪ್ರೀತಿಯುಳ್ಳವಳು.

**೯೭೨. ಆಶೋಭನಾಯೈನಮಃ—**ಸರ್ವತ್ರ ಪ್ರಕಾಶಮಾನಳಾಗಿರುವವಳು.

**೯೭೩. ಶುದ್ಧಮಾನಸಾಯೈನಮಃ—**ನಿರ್ಮಲವಾದ ಮನಸ್ಸುಳ್ಳವಳು.

**೯೭೪. ಬಿನ್ದುತರ್ಪಣಸಂತುಷ್ಟಾಯೈನಮಃ—**

"ಬಿನ್ದುತರ್ಪಣ ಸಂತುಷ್ಟಾ" ಎನ್ನುವುದು ಜ್ಞಾನಕಾಂಡಕ್ಕೆ ಸೇರಿ ಜ್ಞಾನಕಾಂಡದ ತತ್ವವನ್ನು ಅನುಸರಿಸಿರುವ ಕರ್ಮಕಾಂಡದಲ್ಲೂ ಇರುವುದು. ಜ್ಞಾನಕಾಂಡದಂತೆ ಧ್ಯಾನಮಾರ್ಗದಿಂದ ಸಹಸ್ರಾರಕಮಲದಿಂದ ಅಮೃತಧಾರೆಯನ್ನು ಸುಷುಮ್ನಾನಾಡಿಯ ಮೂಲಕವಾಗಿ ಮೂಲಾಧಾರದಲ್ಲಿರುವ ಬಿಂದುವಿನ ಮೇಲೆ ಸ್ರವಿಸುವಂತೆ ಮಾಡುವ ತರ್ಪಣದಿಂದ ಮೂಲಾಧಾರದ ಬಿಂದು ಪೀಠದಲ್ಲಿರುವ ಪರಬ್ರಹ್ಮಸ್ವರೂಪಿಣಿಯಾದ ಶ್ರೀಕುಂಡಲಿನೀ ಶಕ್ತಿಯು ಸಂತುಷ್ಟಳಾಗುವಳು. ಅಲ್ಲದೆ ಈ ಅಮೃತ ಸ್ರಾವದಿಂದ ಸಹಸ್ರಾರಕಮಲದಲ್ಲಿರುವ ಬಿಂದುವೂ ತೋಯಿಸಲ್ಪಡುವುದು. ಈ ತತ್ವಸಮರ್ಥನೆಗೆ

> "ಷಡಾಧಾರಪಂಕೇರುಹಾಂತರ್ವಿರಾಜ |
> ತ್ಸುಷುಮ್ನಾಂತರಾಳೇಷುತೇಜೋಲ್ಲಸಂತೀಮ್ ||
> ಪಿಬಂತೀಂ ಸುಧಾಮಂಡಲೀಂ ದ್ರಾವಯಂತೀಂ |
> ಸುಧಾ ಮೂರ್ತಿಮೀಡೆ ಮಹಾನಂದರೂಪಮ್ ||"

ಎಂಬ ಶ್ರೀ ಶಂಕರಾಚಾರ್ಯರ ವಾಕ್ಯೂ, "ಅಪಾನಮೂರ್ಧ್ವಗಂ ಕೃತ್ವಾಸಮಾನೋ

ನೇನಯೋಜಯೇತ್, ಸ್ವಾತ್ಮಾನಂಚ ಶಿವಂಧ್ಯಾಯೇದಮೃತ ಪ್ಲಾವನಂತತಃ" ಎಂಬ ಶ್ರುತಿವಾಕ್ಯವೂ,

"ಸುಷುಮ್ನಾಯ್ಯೆ ಕುಂಡಲಿನ್ಯೈ ಸುಧಾಯ್ಯೆಚಂದ್ರಮಂಡಲಾತ್ |
ಮನೋನ್ಮನ್ಯೈನಮಸ್ತುಭ್ಯಂ ಮಹಾಶಕ್ತ್ಯೈಚಿದಾತ್ಮನೆ ||"

ಎಂಬ ಶ್ರುತಿವಾಕ್ಯವೂ, "ಮೂಲಾಧಾರಗತಾಶಕ್ತಿಃ ಸ್ವಾಧಾರಾಬಿಂದುರೂಪಿಣೀ" ಎಂಬ ಶ್ರುತಿವಾಕ್ಯವೂ ಮೇಲಿನ ತತ್ವಕ್ಕೆ ಆಧಾರವಾಗಿರುವುದು.

ಈ ಮೇಲಿನ ಜ್ಞಾನಕಾಂಡದ ತತ್ವವನ್ನು ಅನುಸರಿಸಿ ಕರ್ಮಕಾಂಡದಲ್ಲೂ ಶ್ರೀ ಚಕ್ರದಲ್ಲಿರುವ ಬಿಂದುವಿಗೂ ವಿಗ್ರಹಾಕಾರವಾಗಿರುವ ಶ್ರೀದೇವಿಯ ಪಾದ ಪದ್ಮಗಳಲ್ಲೂ ಅಮೃತಕ್ಕೆ ಪ್ರತಿನಿಧಿಯಾದ ಗೋಕ್ಷೀರದಿಂದ ತರ್ಪಣವನ್ನು ಕೊಡುವರು. ಇಂತಹ ಜ್ಞಾನ ಮತ್ತು ಕರ್ಮಮಾರ್ಗದ ತರ್ಪಣದಿಂದ ಶ್ರೀದೇವಿಯು ತೃಪ್ತಳಾಗುವಳು.

೯೭೫. ಪೂರ್ವಜಾಯ್ಯೆನಮಃ—

ಮೊಟ್ಟಮೊದಲನೆಯ ಅವತಾರಸ್ವರೂಪಳು. "ಅಹಮಸ್ಮಿ ಪ್ರಥಮಜಾ ಋತಸ್ಯ" ಎಂಬ ಶ್ರುತಿವಾಕ್ಯವಿರುವುದರಿಂದ ಆದ್ಯವತಾರಸ್ವರೂಪಳು ಶ್ರೀ ಬಾಲಾಂಬಿಕೆಯು.

೯೬೫ನೇ ನಾಮದಿಂದ ಇದುವರೆಗೆ ಶ್ರೀದೇವಿಯು ಶ್ರೀಬಾಲಾ ಅವತಾರದ ಮಹಿಮೆಯನ್ನು ಪ್ರತಿಪಾದಿಸುವುದು.

೯೭೬. ತ್ರಿಪುರಾಂಬಿಕಾಯ್ಯೆನಮಃ—

ತ್ರಿಮೂರ್ತಿಗಳಿಗೂ ಪುರ ಎಂದರೆ ಆದಿಯಾದ (ಹಿಂದಿನದಾದ) ಮಾತೆಯು. "ಪುರತ್ರಯೇ ಕ್ರೀಡತಿಯಶ್ಚ ಜೀವಃ" ಎಂಬ ಶ್ರುತ್ಯಾಧಾರದಂತೆ ಪುರ ಎಂದರೆ ಪಟ್ಟಣ, ವಾಸಸ್ಥಳ ಎಂಬ ಅರ್ಥಗಳನ್ನನುಸರಿಸಿ ಜಾಗ್ರತ್‌ಸ್ವಪ್ನ ಸುಷುಪ್ತ್ಯವಸ್ಥೆ ಗಳಾದ ಮೂರರಲ್ಲಿ ವಾಸಿಸುವ ಜೀವರುಗಳಿಗೂ ಮಾತೆಯು. ಅಲ್ಲದೆ ಸ್ವರ್ಗ, ಮರ್ತ್ಯ, ಪಾತಾಳಗಳಿಗೂ ಮಾತೆಯು.

೯೭೭. ದಶಮುದ್ರಾಸಮಾರಾಧ್ಯಾಯ್ಯೆನಮಃ—

ಹತ್ತು ಮುದ್ರೆಗಳಿಂದ ಅರ್ಚಿಸಲ್ಪಡುವವಳು. ಹಸ್ತದ ಬೆರಳುಗಳನ್ನು ಜೋಡಿಸುವ ಕ್ರಮದಲ್ಲಿ ಹತ್ತು ಮುದ್ರೆಗಳನ್ನು ಅರ್ಚನೆಯಕಾಲದಲ್ಲಿ ಮಾಡುವು ದುಂಟು. ಕರ್ಮಮಾರ್ಗದಲ್ಲಿ ಬೆರಳುಗಳ ಸಂಯೋಗದ ಸಂಜ್ಞಾರೂಪವಾಗಿ

ತೋರಿಸುವ ಈ ಮುದ್ರೆಗಳು ಜ್ಞಾನಕಾಂಡದ ತತ್ವಗಳನ್ನೊಳಗೊಂಡು ಬಹು ಮಹತ್ವವುಳ್ಳವುಗಳಾಗಿವೆ. ಮುದ್ರೆಯೆಂದರೆ ಬಂಧಿಸುವುದೆಂದು ಅರ್ಥ. ಧನವನ್ನು ಇಡುವ ಸ್ಥಳಕ್ಕೆ ಬೀಗಮುದ್ರೆ ಹಾಕುವುದೆಂದರೆ ಬಂಧಿಸುವುದೇ ಆಗಿದೆ. ಶತ್ರುಗಳನ್ನು ಬಂಧಿಸಿ ನಿಗ್ರಹಿಸುವಂತೆ ನಮ್ಮಲ್ಲಿರುವ ಅವಿದ್ಯಾಶಕ್ತಿಗಳನ್ನು ಬಂಧಿಸುವ ಕ್ರಮಗಳಿಗೆ ಮುದ್ರೆಯೆಂದು ಹೆಸರು. ಹೀಗೆ ಅವಿದ್ಯಾಶಕ್ತಿಗಳನ್ನು ಬಂಧಿಸಿ ಧ್ಯಾನಮಾಡುವುದರಿಂದ ಆನಂದಾವಿರ್ಭಾವವು ನಮಗೆ ಹೆಚ್ಚುತ್ತಾ ಬರುವುದರಿಂದ ಮುದ್ರಾನುಷ್ಠಾನವು "ಮುದಂರಾತೀತಿ ಮುದ್ರ" ಎಂಬ ವ್ಯುತ್ಪತ್ತಿಯಂತೆ ಆನಂದಾವಿರ್ಭಾವವನ್ನು ಹೆಚ್ಚಿಸಿ ನಿಜಾನಂದವಾದ ಪರಮಾತ್ಮಸಾಕ್ಷಾತ್ಕಾರಕ್ಕೆ ಸಹಕಾರಿಯಾಗಿರುವುದು. ಶ್ರೀ ಗಾಯತ್ರೀ ಉಪಾಸನೆಯಲ್ಲೂ ಇಪ್ಪತ್ತನಾಲ್ಕು ಮುದ್ರೆಗಳಿವೆ. ಮುದ್ರಾಕ್ರಮಗಳು ಧ್ಯಾನಾನುಷ್ಠಾನಕ್ಕೆ ಸಂಬಂಧಪಟ್ಟು ಅವಿದ್ಯಾಶಕ್ತಿಗಳನ್ನು ಬಂಧಿಸುವ ಕ್ರಮಕ್ಕೆ ಸೇರಿ ಶ್ರುತಿಯಲ್ಲಿ ಪ್ರತಿಪಾದಿಸಲ್ಪಟ್ಟವುಗಳಾಗಿಯೇ ಇವೆ. ಷಣ್ಮುಖೀಮುದ್ರೆ, ಖೇಚರೀಮುದ್ರೆ, ಜಾಲಂಧರಮುದ್ರೆ, ಓಡ್ಯಾಣಮುದ್ರೆ, ಮಹಾಮುದ್ರೆ, ಶಾಂಭವೀಮುದ್ರೆ ಮುಂತಾದ ಅನೇಕ ಮುದ್ರೆಗಳಿವೆ. ಅವಿದ್ಯಾಶಕ್ತಿಗಳನ್ನು ಬಂಧಿಸುವ ದಶಮುದ್ರೆಗಳ ಕ್ರಮಗಳನ್ನು ಶ್ರುತಿಪ್ರತಿಪಾದ್ಯಗಳಾದ ಧ್ಯಾನಮಾರ್ಗದ ಕ್ರಮಕ್ಕೆ ಅನ್ವಯಮಾಡಿ ಬರೆಯಲು ಗ್ರಂಥಬಾಹುಳ್ಯವಾಗುವುದರಿಂದ ಇಲ್ಲಿ ವಿವರಿಸಲಿಲ್ಲ. ಯೋನಿಮುದ್ರಾ, ಜ್ಞಾನಮುದ್ರಾ, ತ್ರಿಖಣ್ಡಾಮುದ್ರಾ ಈ ಮೂರರ ವಿಚಾರಗಳು ಮುಂದೆ ಬಂದಿರುವುದರಿಂದ ಅಲ್ಲಿ ವಿವರಮಾಡಿರುತ್ತದೆ ದಶಮುದ್ರಾಕ್ರಮಾರಾಧ್ಯ ಎಂದು ಇರದೆ ಸಮಾರಾಧ್ಯ ಎಂದು ನಾಮದಲ್ಲಿರುವುದರಿಂದ ಜೀವಬ್ರಹ್ಮರು ಸಮರಾಗುವ ಜ್ಞಾನಮಾರ್ಗದಲ್ಲಿಯೇ ಈ ಮುದ್ರೆಗಳ ತತ್ವವು ಇರುವುದೆಂಬುವುದನ್ನು ಸೂಚಿಸುವುದು.

**೯೭೮. ತ್ರಿಪುರಾಶ್ರೀವಶಂಕರ್ಯೈನಮಃ—**

ಬ್ರಹ್ಮ, ವಿಷ್ಣು, ರುದ್ರರಾದ ಮೂವರಿಗೂ ಪುರಾತನಳಾದ ಶ್ರೀರೂಪವಾದ ಶ್ರೀಲಲಿತಾಮಹಾತ್ರಿಪುರಸುಂದರಿಯು ವಶವಾಗುವವಳು. ಅಂದರೆ ಹಿಂದಿನ ನಾಮದಲ್ಲಿ ಹೇಳಿದ ದಶಮುದ್ರಾತತ್ವವನ್ನು ಅನುಸರಿಸಿ ಧ್ಯಾನಾಭ್ಯಾಸಮಾಡಿದರೆ ಶ್ರೀದೇವಿಯು ವಶಳಾಗುವಳೆಂದರೆ ಶ್ರೀದೇವಿಯು ಸಾಕ್ಷಾತ್ಕಾರವಾಗುವುದು.

**೯೭೯. ಜ್ಞಾನಮುದ್ರಾಯೈನಮಃ—**

ಜ್ಞಾನಮುದ್ರಾಸ್ವರೂಪಿಣಿಯು. ಷಣ್ಮುಖೀ ಅಥವಾ ಶಾಂಭವೀಮುದ್ರೆಯೇ ಜ್ಞಾನಮುದ್ರೆಯಾಗಿರುವುದು. ಶಾಂಭವೀ ಷಣ್ಮುಖೀ ಮುದ್ರೆಗಳೆರಡೂ ಒಂದೇಯಾಗಿರುವುದು. ಈ ಮುದ್ರೆಯ ಸ್ವರೂಪವು ಜ್ಞಾನೇಂದ್ರಿಯಗಳನ್ನು ಬಂಧಿಸುವುದರ ಮೂಲಕ ಅವಿದ್ಯೆಯ ವೃತ್ತಿಗಳನ್ನು ಕಟ್ಟಿಹಾಕಿ ಅಂತರ್ಮುಖದ

ಪ್ರಕಾಶಮಾನವಾದ ತೇಜಸ್ಸು ತೇಜಸ್ಸಿನೊಳಗಿರುವ ಓಂಕಾರನಾದ ಇವುಗಳನ್ನು ಧರಿಸಿಕೊಂಡು 'ಸೋಹಂ' ಭಾವದಿಂದ ಧ್ಯಾನಮಾಡಲು ಸೌಕರ್ಯವನ್ನುಂಟು ಮಾಡುವುದು. ಈ ಮುದ್ರೆಯ ಸೌಕರ್ಯದಿಂದ ತೇಜೋನಾದವನ್ನು ಧರಿಸಿಕೊಂಡು 'ಸೋಹಂ' ಭಾವದಿಂದ ಸಮಾಧಿಯ ಅಭ್ಯಾಸಮಾಡಿ ಸಾಕ್ಷಾತ್ಕಾರವನ್ನು ಪಡೆಯಬಹುದು. "ಮುದಂರಾತೀತಿ ಮುದ್ರಾ" ಎಂಬ ಅರ್ಥದಂತೆ ತೇಜೋನಾದದಲ್ಲಿ ನಿಲುಗಡೆಯನ್ನು ಉಂಟುಮಾಡಿ ತೇಜೋನಾದದ ಆನಂದಕ್ಕೂ ಅದರ ಅಂತರ್ಗತವಾದ ಬ್ರಹ್ಮಾನಂದವನ್ನು ಅನುಭವಿಸುವುದಕ್ಕೂ ಸಹಕಾರಿಯಾಗಿರುವುದು.

## ೯೮೦. ಜ್ಞಾನಗಮ್ಯಾಯೈನಮಃ—

ಜ್ಞಾನದಿಂದ ದೊರಕುವವಳು. ಯಾವಜ್ಞಾನದಿಂದ ಶ್ರೀದೇವಿಯು ದೊರಕುವಳೆಂದರೆ ವಿಷಯಜ್ಞಾನದಿಂದ ದೊರಕುವವಳಲ್ಲ. ಮೇಲಿನ ನಾಮದಲ್ಲಿ ತಿಳಿಸಿರುವ ಷಣ್ಮುಖೀ ಮುದ್ರೆಯಿಂದ ಅಂತರ್ಮುಖದಲ್ಲಿ ಕಾಣುವ ತೇಜಸ್ಸು ಮತ್ತು ಓಂಕಾರನಾದ ಇವೆರಡೂ ಸಗುಣವಾದ್ದರಿಂದ ತೇಜೋನಾದ ವಿಷಯಕಜ್ಞಾನವೇ ಹೊರತು ಬ್ರಹ್ಮಜ್ಞಾನವಲ್ಲ. ಆದುದರಿಂದ ಶಾಂಭವೀ ಮುದ್ರಾಸ್ಥಿತಿಯಲ್ಲಿ ಧ್ಯಾನಮಾಡುವಾಗ ಸಮಾಧಿಯಲ್ಲಿ ಗೋಚರವಾಗುತ್ತಿರುವ ತೇಜಸ್ಸು ಮತ್ತು ಓಂಕಾರನಾದದ ಅಂತರ್ಗತವಾಗಿರುವ ಸರ್ವವ್ಯಾಪಕವಾದ ಬ್ರಹ್ಮನೇ ನಾನೆಂಬ ಅಥವಾ ಅಹಂದೇವೀ ಎಂಬ ಜ್ಞಾನ ಒಂದರಿಂದಲೇ ಪರಬ್ರಹ್ಮಸ್ವರೂಪಿಣಿಯಾದ ದೇವಿಯನ್ನು ಹೊಂದಬೇಕಲ್ಲದೆ ಅನ್ಯಥಾದಾರಿಯೇ ಇಲ್ಲ. ಆದುದರಿಂದ ಅಹಂಬ್ರಹ್ಮಾಸ್ಮಿ ಜ್ಞಾನಕ್ಕೆ ದೊರಕುವವಳು. ಇದಕ್ಕೆ "ಸೋಹಂಭಾವೇನ ಪೂಜಯೇತ್" ಎಂಬ ಶ್ರುತ್ಯಾಧಾರ.

## ೯೮೧. ಜ್ಞಾನಜ್ಞೇಯಸ್ವರೂಪಿಣ್ಯೈನಮಃ—

ಜ್ಞಾನ ಮತ್ತು ಜ್ಞೇಯಸ್ವರೂಪಿಣಿಯು ಜ್ಞೇಯವೆಂದರೆ ನಾವು ತಿಳಿಯಲು ಇಷ್ಟಪಡುತ್ತಿರುವ ಪರಬ್ರಹ್ಮಸ್ವರೂಪಿಣಿಯಾದ ಶ್ರೀದೇವಿಯು. ಧ್ಯಾನಮಾಡುತ್ತಿರುವ "ನಾನು" ಎಂಬುದೇ ಜ್ಞಾತೃ. ಜ್ಞಾನವೆಂದರೆ ಧ್ಯಾನಮಾಡುತ್ತಿರುವ ನನಗೆ ಧ್ಯೇಯವಾದ ಶ್ರೀದೇವಿಯೇ ನಾನೆಂಬದಾಗಿ ತಿಳಿದುಕೊಳ್ಳುವುದೇ ಜ್ಞಾನ. ಶ್ರೀದೇವಿಯೇ ನಾನೆಂಬ ಜ್ಞಾನದಿಂದ ಧ್ಯಾನದಲ್ಲಿ ಮುಳುಗುತ್ತಾ ಹೋದರೆ ಜ್ಞೇಯವಾದ ಶ್ರೀದೇವಿಯಲ್ಲಿ ನಾನು ಎಂಬುದು ಸೇರಿಹೋಗುವುದು. ಇದೇ ಶ್ರೀದೇವಿಯ ಸಾಯುಜ್ಯಪದವಿ. ಅಂದರೆ ಜ್ಞಾತೃವೆನಿಸುವ ನಾನು ಎಂಬುದು ನೀರಿನಲ್ಲಿ ಉಪ್ಪು ಕರಗಿದಂತೆ ಶ್ರೀದೇವಿಯಲ್ಲಿ ಸೇರಿ ಅಭಿನ್ನವಾಗುವುದು. ಆದುದರಿಂದ ಧ್ಯಾನದ ಕೊನೆಯ ಸೋಪಾನದಲ್ಲಿರುವ ಅಹಂಬ್ರಹ್ಮಾಸ್ಮಿಜ್ಞಾನವು ಮತ್ತು ಜ್ಞೇಯವೆನಿಸುವ ಶ್ರೀದೇವಿಯ ಸಾಯುಜ್ಯಪದವಿಯೂ ಈ ಎರಡೂ ಶ್ರೀದೇವಿಯೇ

ಆಗಿರುತ್ತಾಳೆ. ಹಿಂದಿನನಾಮದ ತತ್ವದಲ್ಲಿ ಅಹಂಬ್ರಹ್ಮಾಸ್ಮಿಯ ರೂಪವಾದ ಜ್ಞಾನವೇ ಸರ್ವಶ್ರೇಷ್ಠವಾದುದೆಂದು ತಿಳಿಸಿತು. ಅಹಂಬ್ರಹ್ಮಾಸ್ಮಿಯ ಜ್ಞಾನವು ಜ್ಞೇಯಸ್ವರೂಪಿಣಿಯಾದ ಶ್ರೀದೇವಿಯಲ್ಲಿ ಸೇರಿ ಅಭೇದವಾಗುವಿಕೆಯ ತತ್ವವನ್ನು ಈ ನಾಮವು ಪ್ರತಿಪಾದಿಸುತ್ತದೆ.

೯೭೬ ನೇ ನಾಮದಿಂದ ಇದುವರೆಗೂ ಶ್ರೀಲಲಿತಾ ತ್ರಿಪುರಸುಂದರಿಯ ಸಾಯುಜ್ಯಪದವಿಯನ್ನು ಪಡೆಯುವ ಜ್ಞಾನಮಾರ್ಗದ ಕ್ರಮವನ್ನು ತಿಳಿಸುವುದು. ಸಮಯಾಚಾರತತ್ಪರಾ ಎಂಬ ೯೮ ನೇ ನಾಮದಲ್ಲಿ ತಿಳಿಸಿರುವ ಜ್ಞಾನಮಾರ್ಗದ ತತ್ವದ ಕೊನೆಯ ಸೋಪಾನವು ಸಹಸ್ರನಾಮಕ್ಕೆ ಅಂತ್ಯವಾಗುವ ಈ ಸ್ಥಳದಲ್ಲಿ ಬಂದಿರುವುದು. ೯೯ ನೇ ನಾಮದಲ್ಲಿ ತಿಳಿಸಿರುವ ಶ್ರೀ ಕುಂಡಲಿನೀಶಕ್ತಿಯ ವಿಚಾರವು ಮುಂದಿನ ೧೨ ನಾಮಗಳಲ್ಲಿ ವಿವರವಾಗಿ ಉಪಸಂಹಾರರೂಪವಾಗಿ ಬರುವುದು.

**೯೮೨. ಯೋನಿಮುದ್ರಾಯೈನಮಃ—**

ಯೋನಿಮುದ್ರಾಸ್ವರೂಪಿಣಿಯು. ಯೋನಿಮುದ್ರೆಯೆಂದರೆ ಯೋನಿ ಇರುವ ಸ್ಥಳವಾದ ಮೂಲಾಧಾರಚಕ್ರದಲ್ಲಿ ಅನುಷ್ಠಿಸುವ ಮುದ್ರೆಯಾಗಿರುವುದು. ಯೋನಿ ಮುದ್ರೆಯು ಮೂಲಾಧಾರಚಕ್ರಕ್ಕೆ ಸಂಬಂಧಪಟ್ಟಿರುವುದರಿಂದ ಮೂಲಬಂಧದ ಮುದ್ರೆಯೆಂದು ಶ್ರುತಿಯಲ್ಲಿ ಕರೆಯಲ್ಪಡುವುದು. ಅನೇಕವಾಗಿ ಉಪನಿಷತ್ತುಗಳಲ್ಲೂ ಶ್ರೀ ಶಂಕರಾಚಾರ್ಯರವರ ಯೋಗತಾರಾವಳಿಯಲ್ಲಿಯೂ ಈ ಮುದ್ರಾ ಕ್ರಮವನ್ನು ವಿವರಿಸಿದೆ. "ಊರ್ಧ್ವರೇತಂ ವಿರೂಪಾಕ್ಷಂ" ಎಂಬ ಶ್ರುತ್ಯಾಧಾರದಂತೆ ದೇಹವ್ಯಾಪಾರಾಭಿಮುಖವಾಗಿರುವ ನಮ್ಮಲ್ಲಿರುವ ನಾಡೀಚೈತನ್ಯಗಳನ್ನು ಅಪಾನವಾಯುವಿನೊಡನೆ ಊರ್ಧ್ವಮುಖವಾಗಿ ಮಾಡಿಕೊಳ್ಳಲು ಸಹಕಾರಿಯಾಗಿಯೂ, ಅಜ್ಞಾನದ ಶಕ್ತಿಗಳನ್ನು ಬಂಧಿಸಿ ನಿಗ್ರಹಿಸಲು ಅನುಕೂಲವಾಗಿಯೂ, ಶ್ರೀ ಕುಂಡಲಿನೀಶಕ್ತಿಯು ಮೂಲಾಧಾರದಿಂದ ಎದ್ದು ಸಹಸ್ರಾರಕ್ಕೆ ಹೋಗಲು ಸಹಾಯಕವಾಗಿಯೂ ಈ ಯೋನಿಮುದ್ರೆಯು ಇರುವುದು. ಆದುದರಿಂದ ಶ್ರೀ ಕುಂಡಲಿನೀಶಕ್ತಿಯು ಎದ್ದು ಸಹಸ್ರಾರಕಮಲಕ್ಕೆ ಹೋಗಲು ಸಹಕಾರಿಯಾಗಿರುವ ಯೋನಿಮುದ್ರಾಸ್ವರೂಪಿಣಿಯು.

**೯೮೩. ತ್ರಿಖಂಡೇಶ್ಯೈನಮಃ—**

ಮೂರು ಖಂಡಗಳಿಗೂ ಪ್ರಭುವು. ದಶಮುದ್ರೆಗಳಲ್ಲಿ ತ್ರಿಖಂಡವೆಂಬುದೇ ಕೊನೆಯ ಮುದ್ರೆ. ತ್ರಿಖಂಡವೆಂದರೆ ಮೂರು ಭಾಗ. ಮೇಲಿನ ನಾಮದಲ್ಲಿ ತಿಳಿಸಿರುವ ಮೂಲಬಂಧದ ಮುದ್ರೆಯೊಡನೆ ಹಿಂದೆ ಬಂದಿರುವ ಉಡ್ಯಾಣ,

ಜಾಲಂಧರ ಮುದ್ರೆಗಳನ್ನು ಸೇರಿಸಿಕೊಂಡು ಧ್ಯಾನಾಭ್ಯಾಸ ಮಾಡುವುದಕ್ಕೆ ತ್ರಿಖಂಡವೆಂದು ಹೆಸರು. ಈ ಮೂರು ಮುದ್ರೆಗಳ ಮಿಳಿತದಿಂದಮಾಡುವ ಧ್ಯಾನಾಭ್ಯಾಸವು ಓಂಕಾರದ ಮೂರು ಖಂಡಗಳಾದ ಅ (ಬ್ರಹ್ಮಗ್ರಂಥಿ) ಉ (ವಿಷ್ಣುಗ್ರಂಥಿ) ಮ್ (ರುದ್ರಗ್ರಂಥಿ) ಈ ಮೂರನ್ನೂ ಶ್ರೀಕುಂಡಲಿನೀ ಶಕ್ತಿಯು ದಾಟಿ ನಮ್ಮ ಭ್ರೂಮಧ್ಯಕ್ಕೆ ಬರುವುದು. ಆಗ್ಗೆ ಅಕಾರ, ಉಕಾರ, ಮಕಾರ ಸ್ವರೂಪವಾದ ಮೂರು ಭಾಗಗಳಿಗೂ ಮತ್ತು ಅಕಾರ ಉಕಾರ ಮಕಾರ ಈ ಮೂರು ಭಾಗಗಳಿಗೂ ಅನುಸಾರವಾಗಿಯೇ ಇರುವ ಶ್ರೀ ಲಲಿತಾಪಂಚದಶಾಕ್ಷರೀ ಮಂತ್ರದ ಮೂರು ಭಾಗಗಳಿಗೂ ಶ್ರೀ ಕುಂಡಲಿನಿಯು ಪ್ರಭುವಾಗುವಳು. ಇದೇ ತ್ರಿಖಂಡೇಶಿಯ ತತ್ವವು.

೯೮೪. ತ್ರಿಗುಣಾಯ್ಯೈನಮಃ—

ಶ್ರೀ ಕುಂಡಲಿನೀ ಶಕ್ತಿಯು ತ್ರಿಗುಣವಾಗಿಯೂ ಸತ್ವರಜಸ್ತಮೋಗುಣಗಳ ಸಾಮ್ಯಾವಸ್ಥೆಯಾದ ಆದಿಶಕ್ತಿಯಾಗಿಯೂ ಇರುತ್ತಾಳೆ.

೯೮೫. ಅಮ್ಬಾಯ್ಯೈನಮಃ—

ಶ್ರೀಕುಂಡಲಿನೀಶಕ್ತಿಯು ಜಗಜ್ಜನನಿಯಾಗಿರುವವಳು.

೯೮೬. ತ್ರಿಕೋಣಗಾಯ್ಯೈನಮಃ—

ಶ್ರೀಕುಂಡಲಿನೀಶಕ್ತಿಯು ದೇಹಸೃಷ್ಟಿಯಲ್ಲಿ ಮೂಲಾಧಾರ ಚಕ್ರರೂಪವಾದ ಚತುರ್ದಳ ಕಮಲದೊಳಗಿರುವ ತ್ರಿಕೋಣವೆಂದರೆ ಮೂರು ಮೂಲೆಯುಸ್ವರೂಪದ ಶಿಖರಭಾಗದಲ್ಲೆಂದರೆ ಮೂಲಾಧಾರಚಕ್ರದ ಮೇಲ್ಭಾಗದ ಶಿಖರರೂಪವಾದ ಬಿಂದುವಿನಲ್ಲಿ ನೆಲೆಸಿರುವವಳು. (ಮೂಲಾಧಾರದ ಶಿಖರಭಾಗವೆಂದರೆ ಸ್ವಾಧಿಷ್ಠಾನ ಚಕ್ರಕ್ಕೂ ಸಂಬಂಧವಾಗಿ ಸ್ವಾಧಿಷ್ಠಾನಚಕ್ರದ ಕೆಳಭಾಗದಲ್ಲಿರುವುದೆಂದರ್ಥ.)

೯೮೭. ಅನಘಾಯ್ಯೈನಮಃ—

ಶ್ರೀಕುಂಡಲಿನೀಶಕ್ತಿಯು ಪಾಪರಹಿತಳು ಪರಿಶುದ್ಧಾತ್ಮಳು.

೯೮೮. ಅದ್ಭುತಚಾರಿತ್ರಾಯ್ಯೈನಮಃ—

ಶ್ರೀಕುಂಡಲಿನೀಶಕ್ತಿಯು ಆಶ್ಚರ್ಯಕರವಾದ ಮಹಿಮಾಚರಿತ್ರೆಯುಳ್ಳವಳು.

೯೮೯. ವಾಂಛಿತಾರ್ಥಪ್ರದಾಯಿನ್ಯೈನಮಃ—

ಶ್ರೀಕುಂಡಲಿನೀಶಕ್ತಿಯು ಭಕ್ತರ ಇಷ್ಟಾರ್ಥಗಳನ್ನು ಅನುಗ್ರಹಿಸಿಕೊಡುವವಳು.

೯೯೦. ಅಭ್ಯಾಸಾತಿಶಯಜ್ಞಾತಾಯೈನಮಃ—

ನಮ್ಮಲ್ಲಿರುವ ಶ್ರೀ ಕುಂಡಲಿನೀಶಕ್ತಿಯನ್ನು ಹೇಗೆ ತಿಳಿದು ಅವಳ ಅನುಗ್ರಹಕ್ಕೆ ಪಾತ್ರರಾಗುತ್ತೇವೆಂದರೆ ಪರಮಭಕ್ತಿಯೊಡಗೂಡಿದ ಪ್ರಾರ್ಥನೆಯಿಂದಲೂ, ಸತತವಾದ ಧ್ಯಾನಾಭ್ಯಾಸದಿಂದಲೂ, ಶ್ರೀ ಕುಂಡಲಿನಿಯ ಅನುಗ್ರಹಕ್ಕೆ ಪಾತ್ರರಾಗಿ ಆ ದೇವಿಯನ್ನು ಅರಿಯುತ್ತೇವೆ. ಅಲ್ಲದೆ ಸಗುಣದಲ್ಲಿ ನಮ್ಮ ದೇಹದ ತತ್ವವಾಗಿರುವ ಶ್ರೀ ಚಕ್ರದಲ್ಲಿ ಮೂಲಾಧಾರಚಕ್ರದ ತತ್ವವಾದ ತ್ರಿಕೋಣ ಮತ್ತು ತ್ರಿಕೋಣದಲ್ಲಿರುವ ಬಿಂದುಸ್ಥಾನವೇ ಶ್ರೀ ಕುಂಡಲಿನೀದೇವಿಯ ಸ್ಥಾನವೆಂದು ಭಾವಿಸಿ ಪರಮಭಕ್ತಿಯಿಂದ ಅರ್ಚಿಸುವುದರಿಂದಲೂ ಶ್ರೀ ಕುಂಡಲಿನೀದೇವಿಯ ಅನುಗ್ರಹಕ್ಕೆ ಪಾತ್ರರಾಗುತ್ತೇವೆ. ಶ್ರೀಕುಂಡಲಿನಿಯು ಶ್ರೀ ಲಲಿತಾಂಬೆಯೂ ಭಿನ್ನರಲ್ಲ.

೯೯೧. ಷಡಧ್ವಾತೀತರೂಪಿಣ್ಯೈನಮಃ—

ಶ್ರೀಕುಂಡಲಿನೀಶಕ್ತಿಯು ಆರುವಿಧ ತತ್ವಗಳ ಮಾರ್ಗಗಳನ್ನೂ ದಾಟಿರುವವಳು. ಅಂದರೆ ಧ್ಯಾನಾಭ್ಯಾಸಮಾಡುತ್ತ ಶ್ರೀಕುಂಡಲಿನೀಶಕ್ತಿಯು ಮೂಲಾಧಾರಾದಿ ಷಟ್ಚಕ್ರಗಳ ತತ್ವಗಳನ್ನೂ ದಾಟಿಕೊಂಡು ಏಳನೆಯದಾದ ಪರಬ್ರಹ್ಮಸ್ಥಾನವಾದ ಸಹಸ್ರಾರ ಕಮಲವನ್ನು ಸೇರಿ ತನ್ನ ಪದವಾದ ಪರಬ್ರಹ್ಮಸ್ವರೂಪಿಣಿ ಎನಿಸಿಕೊಳ್ಳುತ್ತಾಳೆ. ಇದೇ ಮನುಷ್ಯನಿಗೆ ಉಂಟಾಗುವ ಮೋಕ್ಷದ ಸ್ಥಿತಿಯು. ಇದೇ ಷಡಧ್ವಾತೀತರೂಪಿಣೀ ತತ.

೯೯೨. ಅವ್ಯಾಜಕರುಣಾಮೂರ್ತ್ಯೈನಮಃ—

ಮೇಲಿನ ನಾಮದಲ್ಲಿ ತಿಳಿಸಿರುವಂತೆ ಪರಬ್ರಹ್ಮಸ್ವರೂಪಿಣಿಯಾದ ಶ್ರೀಕುಂಡಲಿನೀದೇವಿಯು ಅತ್ಯಂತ ದಯಾಪೂರಿತವಾದ ಕರುಣಾಮೂರ್ತಿಯಾಗಿರುವವಳು.

೯೯೩. ಅಜ್ಞಾನಧ್ವಾಂತದೀಪಿಕಾಯೈನಮಃ—

ಶ್ರೀಕುಂಡಲಿನೀದೇವಿಯು ಅಜ್ಞಾನಾಂಧಕಾರವನ್ನು ಹೋಗಲಾಡಿಸುವಂತಹ ಜ್ಞಾನಜ್ಯೋತಿಯು.

೯೭೬ ನೇ ನಾಮದಿಂದ ಇದುವರೆಗೂ ಶ್ರೀ ಕುಂಡಲಿನೀದೇವಿಯ ಮಹಿಮೆಯನ್ನು ತಿಳಿಸಿತು. ಶ್ರೀ ಕುಂಡಲಿನೀದೇವಿಯು ಶ್ರೀಲಲಿತಾದೇವಿಯೂ ಪ್ರತ್ಯೇಕರಾದವರಲ್ಲ. ಇಬ್ಬರೂ ಒಬ್ಬಳೇಯಾಗಿರುವಳು.

೯೯೪. ಆಬಾಲಗೋಪವಿದಿತಾಯೈನಮಃ—

ಎಳೇ ಮಕ್ಕಳಾದಿಯಾಗಿ ಸರ್ವರಿಗೂ ತಿಳಿದಿರುವ ಮಾತೆಯಸ್ವರೂಪಿಣಿಯು. ಬಾಲರೆಂದರೆ ವಿವೇಕ ಜ್ಞಾನವಿಲ್ಲದ ಮೂಡರಿಂದ ಮೊದಲುಗೊಂಡು ಗೋಪ

ಎಂದರೆ ರಕ್ಷಿಸುವ ಬ್ರಹ್ಮ, ವಿಷ್ಣು, ರುದ್ರ, ಈಶ್ವರರಿಂದಲೂ ಅರಿತಿರುವ ಮಾತೆಯ ಸ್ವರೂಪಿಣಿಯು. ಹುಟ್ಟಿದಮೇಲೆ ಮಾತೃತಿಳುವಳಿಕೆಯೇ ಪ್ರಥಮದಲ್ಲಿ ಉಂಟಾಗುವುದು. ಆದುದರಿಂದ ಮಾತಾ ಎನ್ನುವುದು ಈಶ್ವರಾದಿಯಾಗಿ ಸಕಲಕ್ಕೂ ಹೆಚ್ಚಿನ ವಸ್ತುವೆಂದು ಈ ನಾಮವು ತಿಳಿಸುತ್ತದೆ

೯೯೫. ಸರ್ವಾನುಲ್ಲಂಘ್ಯಶಾಸನಾಯೈನಮಃ—

ಜಗತ್ತಿಗೆಲ್ಲಾ ಹೆಚ್ಚಿನವಳಾದ ಶ್ರೀಮಾತೆಯ ಆಜ್ಞೆಯನ್ನು ಮೀರಲು ಈಶ್ವರ ಮೊದಲುಗೊಂಡು ಯಾರಿಗೂ ಸಾಧ್ಯವಿಲ್ಲ. ಅಂತಹ ಶಾಸನವನ್ನು ವಿಧಿಸಿರುವ ಸ್ವರೂಪಿಣಿಯು ಯಾರಿಂದಲೂ ದಾಟಲು ಶಕ್ಯವಿಲ್ಲದ ಶಾಸನವುಳ್ಳವಳು

೯೯೬. ಶ್ರೀ ಚಕ್ರರಾಜನಿಲಯಾಯೈನಮಃ—

ನಮ್ಮ ದೇಹದಲ್ಲಿ ಮೂಲಾಧಾರಾದಿ ಷಟ್ಚಕ್ರಗಳೂ ಶ್ರೀಚಕ್ರಗಳಾಗಿರುವುವು. ಇವುಗಳಿಗೆಲ್ಲಾ ರಾಜನಂತಿರುವುದು ಸಹಸ್ರಾರಕಮಲ. ನಮ್ಮಲ್ಲಿ ಚಕ್ರಗಳಿರುವಂತೆ ಬ್ರಹ್ಮಾಂಡದಲ್ಲಿ ಲೋಕಗಳಿವೆ. ಇವುಗಳಿಗೆಲ್ಲಾ ರಾಜನಂತಿರುವುದೇ ಸರ್ವವ್ಯಾಪಕವಾದ ಪರಬ್ರಹ್ಮಸ್ಥಾನವು. ಆದುದರಿಂದ ಸಹಸ್ರಾರಕಮಲದಲ್ಲ ಸರ್ವವ್ಯಾಪಿಯಾಗಿ ನೆಲೆಸಿರುವವಳು. ಲೋಕೋದ್ಧಾರಕ್ಕೋಸ್ಕರ ಅವತಾರವಾಡಿದ ರೂಪಿನ ವಿಗ್ರಹಗಳಲ್ಲೂ ನೆಲಸಿರುವವಳು. ಅಲ್ಲದೆ ಬ್ರಹ್ಮಾಂಡ ಮತ್ತು ದೇಹದ ತತ್ವವನ್ನು ಅನುಸರಿಸಿರುವ ಸುವರ್ಣ ಸ್ಫಟಿಕ ಮುಂತಾದ ಶ್ರೀಚಕ್ರಗಳಲ್ಲೂ ಪೂಜೆಮಾಡುವವರ ಶಕ್ತಿಗನುಸಾರವಾಗಿ ನೆಲಸಿರುವವಳು.

೯೯೭. ಶ್ರೀಮತ್ತ್ರಿಪುರಸುಂದರ್ಯೈನಮಃ—

ತ್ರಿಮೂರ್ತಿಗಳಿಗೂ ಆದಿಯಾದವಳಾದುದರಿಂದಲೂ ಮೂರು ಲೋಕಗಳಿಗೂ ಅತಿಶಯವಾದ ಸೌಂದರ್ಯವಿರುವುದರಿಂದಲೂ ಸ್ವಯಂಪ್ರಕಾಶಸ್ವರೂಪಿಣಿಯಾದುದರಿಂದಲೂ ಸಕಲ ಕಲ್ಯಾಣಗುಣ ಪರಿಪೂರ್ಣಳಾದುದರಿಂದಲೂ ಲೋಕೋತ್ತರ ಸಂಪತ್ಸಮೃದ್ಧಿಯಾಗಿರುವ ಸಚ್ಚಿದಾನಂದಸ್ವರೂಪವನ್ನು ಪ್ರತಿಪಾದಿಸುವ ಶ್ರೀರೂಪವಾಗಿರುವುದರಿಂದಲೂ ಶ್ರೀದೇವಿಯು ಶ್ರೀಮತ್ತ್ರಿಪುರಸುಂದರಿಯಾಗಿರುತ್ತಾಳೆ.

೯೯೮. ಶ್ರೀ ಶಿವಾಯೈನಮಃ—

ಸಚ್ಚಿದಾನಂದಸ್ವರೂಪವನ್ನು ಪ್ರತಿಪಾದಿಸುವ ಸಗುಣಚೈತನ್ಯನಾದ ಈಶ್ವರನ ಸ್ವರೂಪದಲ್ಲಿರುವವಳು

೯೯೯. ಶಿವಶಕ್ತ್ಯೈಕ್ಯರೂಪಿಣ್ಯೈನಮಃ—

ಶಿವ, ಶಕ್ತಿಗಳ ಐಕ್ಯವುಂಟಾಗುವಿಕೆಯ ಸ್ವರೂಪಿಣಿಯು. ಶಿವ ಮತ್ತು ಶಕ್ತಿಗಳೆಂದು ಯಾವಾಗ ಎರಡು ಇರುವುದೋ ಅದು ಸಗುಣವೆನಿಸುವುದು.

ಇವೆರಡೂ ಒಂದಾಗುವುದೆಂದರೆ ಸಾಕ್ಷಾತ್ ಪರಬ್ರಹ್ಮಸ್ವರೂಪಿಣಿಯು. ಹಿಂದಿನ ನಾಮಗಳೆರಡರಲ್ಲಿ ಸಗುಣವಾದ ಶಿವಶಕ್ತಿಗಳೆರಡರನ್ನು ತಿಳಿಸಿ ಈ ನಾಮದಲ್ಲಿ ಶಿವಶಕ್ತಿಗಳೆರಡರ ಐಕ್ಯವನ್ನು ಪ್ರತಿಪಾದಿಸಿದೆ. ಇದರ ಹೆಚ್ಚಿನ ವಿವರವನ್ನು ಪಂಚದಶಾಕ್ಷರೀ ಮಂತ್ರದ ರಹಸ್ಯದಲ್ಲಿ ಪಠಿಸಿ ತಿಳಿದುಕೊಳ್ಳಬಹುದು.

೧೦೦೦. ಲಲಿತಾಮ್ಬಿಕಾಯೈನಮಃ—

ಲಲಿತಾಂಬಿಕಾಸ್ವರೂಪಿಣಿಯು. ಶ್ರೀಲಲಿತಾಸಹಸ್ರನಾಮವು ಶ್ರೀಮಾತಾ ಎಂಬ ನಾಮದಿಂದ ಪ್ರಾರಂಭವಾಗಿ ಲಲಿತಾಂಬಿಕಾ ಎನ್ನುವ ನಾಮದಿಂದ ಪೂರ್ಣವಾಗಿದೆ. ಪ್ರಥಮ ಮತ್ತು ಅಂತ್ಯನಾಮಗಳನ್ನು ಸೇರಿಸಿದರೆ "ಶ್ರೀಮಾತಾ ಲಲಿತಾಂಬಿಕಾ" ಎಂದಾಗಿ ಮೊದಲು ಕೊನೆಯ ನಾಮಗಳ ಮಧ್ಯದಲ್ಲಿರುವ ನಾಮಗಳ ಮಹಿಮೆಗಳೆಲ್ಲಾ ಶ್ರೀಮಾತೆಯಾದ ಲಲಿತಾಂಬಿಕೆಗೇ ಸೇರಿದುದಾಗಿದೆ. ಪರಬ್ರಹ್ಮಸ್ವರೂಪಿಣಿಯಾದ ಶ್ರೀದೇವಿಯು ಸೃಷ್ಟಿ, ಸ್ಥಿತಿ, ಲಯಗಳಿಗೋಸ್ಕರ ಅನೇಕವಾದ ಅವತಾರಗಳನ್ನೆತ್ತಿರುವಳು. ಈ ಅವತಾರಗಳ ಮಹತ್ತೂ ಮತ್ತು ತತ್ವಗಳೂ ಒಬ್ಬಳಾದ ಪರಬ್ರಹ್ಮಸ್ವರೂಪಿಣಿಯಾದ ಶ್ರೀದೇವಿಯದೇ ಹೊರತು ಅನ್ಯಥಾ ಇಲ್ಲ. ಆದುದರಿಂದ ಅವತಾರಗಳಲ್ಲಿ ಒಂದು ಹೆಚ್ಚು ಮತ್ತೊಂದು ಕಡಿಮೆಯೆಂದು ಎಂದಿಗೂ ಇರುವುದಿಲ್ಲ.

ಶ್ರೀದೇವಿಗೆ ಲಲಿತಾ ಎಂಬ ನಾಮವಿರುವುದರಿಂದ ಲಲಿತಾ ಎಂಬ ಶಬ್ದಕ್ಕೆ ಲೋಕಾನತೀತ್ಯ ಲಲಿತೆ ಲಲಿತಾ. ಅಂದರೆ ಸಕಲ ಲೋಕವನ್ನೂ ಅತಿಕ್ರಮಿಸಿ ಲೀಲಾಮಾತ್ರವಾಗಿರುವವಳು ಎಂದು ಪದ್ಮಪುರಾಣದಲ್ಲಿ ಹೇಳಿದೆ. ಅಲ್ಲದೆ ಲಲಿತಾ ಶಬ್ದಕ್ಕೆ ಮಧುರ, ಮನೋಹರ, ಸುಂದರ, ಪ್ರಕಾಶ, ಶಾಂತಿ, ಮಂಜುಳ, ಅನಾತಾರ, ಗಾಂಭೀರ್ಯ, ಆಕರ್ಷಣೆ, ಆಳುವಿಕೆ, ಶಕ್ತಿ, ಶೋಭಿಸು, ಗೌರವ, ದಯೆ, ಉದಾರತ್ವ, ವಿನೋದವಾದ ಕ್ರೀಡಾ, ಮೃದು, ಕೋಮಲ ಎಂಬ ಇಷ್ಟು ಅರ್ಥಗಳೂ ಇವೆ. ಈ ಅರ್ಥಗಳೆಲ್ಲಾ ಶ್ರೀದೇವಿಯ ಕಲ್ಯಾಣಗುಣಗಳನ್ನೇ ಸೂಚಿಸುತ್ತವೆ. ಅಲ್ಲದೆ ಶ್ರೀ ದೇವಿಯ ಹಸ್ತಗಳಲ್ಲಿರುವ ಕಬ್ಬಿನ ಜಲ್ಲೆಯೂ ಪುಷ್ಪಬಾಣವೂ ದೇವಿಯ ಹೆಸರಿನ ಅವತಾರಕ್ಕೆ ಸರಿಯಾದ ತತ್ವದ ರಮಣೀಯತ್ವವನ್ನು ಕೊಡುವುವು.

ಸಹಸ್ರನಾಮದಲ್ಲಿ ತಿಳಿಸಿರುವಂತಹ ಮಹಿಮಾಶಾಲಿನಿಯಾದ ಶ್ರೀಲಲಿತಾಮಹಾ ತ್ರಿಪುರಸುಂದರೀ ಪರದೇವತೆಗೆ ನಮಸ್ಕರಿಸುತ್ತಾ ಈ ಗ್ರಂಥವನ್ನು ಪೂರ್ಣಮಾಡುತ್ತೇನೆ.

ಓಂ ತತ್ಸತ್

———

ಶ್ರೀಃ.

# ಶ್ರೀ ಲಲಿತಾ ಶ್ರೀಗೌರೀಮಂತ್ರ ರಹಸ್ಯಾರ್ಥ

---

ಆಗಮಪ್ರಣವ ಪೀಠಿಕಾ ಮಮಲವರ್ಣಮಂಗಳ ಶರೀರಿಣೀಂ ।
ಆಗಮಾವಯವ ಶೋಭಿನೀ ಮಖಿಲ ವೇದಸಾರಕೃತ ಶೇಖರೀಂ ॥
ಮೂಲಮಂತ್ರ ಮುಖಮಂಡಲಾ ಮುದಿತನಾದ ಬಿಂದು ನವಯೌವನಾಂ ।
ಮಾತೃಕಾಂ ತ್ರಿಪುರಸುಂದರೀಂ ಮನಸಿಭಾವಯಾಮಿ ಪರದೇವತಾಂ ॥

(ಶ್ರೀಶಂಕರಭಗವತ್ಪಾದಾಚಾರ್ಯಕೃತ.)

**ತಾತ್ಪರ್ಯ**—ಉದಯಿಸಿರುವ ಓಂಕಾರದಲ್ಲಿನ ಕಳಾಸ್ವರೂಪವೇ ಪೀಠವುಳ್ಳವಳಾಗಿಯೂ, ಪರಿಶುದ್ಧವಾದ ಆನಂದರೂಪವಾದ ಶರೀರವುಳ್ಳವಳಾಗಿಯೂ, ಕಳಾಸ್ವರೂಪವೇ ಅವಯುವವಾಗಿ ಶೋಭಿಸುತ್ತಿರುವವಳಾಗಿಯೂ, ಸಕಲ ವೇದಗಳೆಂದರೆ ಜ್ಞಾನದಸಾರಭೂತವೇ ಕಿರೀಟವುಳ್ಳವಳಾಗಿಯೂ, ಮೂಲಮಂತ್ರವಾದ ಹ್ರೀಂ ಅಥವಾ ಓಂಕಾರರೂಪವಾದ ಮುಖಮಂಡಲವಾಗಿರುವವಳಾಗಿಯೂ, ಇದರಿಂದ ಉದಯವಾದ ಬಹುಸ್ಫುಟವಾದ ನಾದಬಿಂದುಗಳುಳ್ಳವಳಾಗಿಯೂ ಇರುವ ಜಗಜ್ಜನನಿಯಾದ ಶ್ರೀಲಲಿತಾಮಹಾತ್ರಿಪುರಸುಂದರೀ ಪರದೇವತೆಯನ್ನು ಸ್ಮರಿಸುತ್ತೇನೆ.

## ಉಪೋದ್ಘಾತ

ಈ ಗ್ರಂಥರಚನೆಗೆ ಕಾರಣವಾದ ವಿಚಾರವನ್ನು ಶ್ರೀಲಲಿತಾಸಹಸ್ರನಾಮ ಭಾಷ್ಯದ ಉಪೋದ್ಘಾತದಲ್ಲೇ ತಿಳಿಸಿದುತ್ತೆ. ಶ್ರೀದೇವಿಯ ಅನುಗ್ರಹದಿಂದ ನನಗೆ ಸ್ಫುರಿಸಿದ ತತ್ವಾರ್ಥವನ್ನು ಸಮರ್ಥನೆಮಾಡಿಕೊಳ್ಳಲು ಶ್ರೀ ಶಂಕರಭಗವತ್ಪಾದರವರ ಸೌಂದರ್ಯಲಹರಿ ಮತ್ತು ಶ್ರೀಲಲಿತಾತ್ರಿಶತೀ ಭಾಷ್ಯಗಳಲ್ಲದೆ ಕೆಲವು ಉಪನಿಷತ್ತುಗಳನ್ನೂ ನೋಡಿ ನನಗೆ ಸ್ಫುರಿಸಿದ ರಹಸ್ಯಾರ್ಥಕ್ಕೆ ಸಾಧಕವಾಗಿ ದೊರೆತ ಆಧಾರವಾಕ್ಯಗಳನ್ನು ಕೊಟ್ಟು ಮುಂದೆ ವಿವರಿಸಿರುವಂತೆ ಬರೆದಿರುತ್ತೇನೆ.

ಶ್ರೀಲಲಿತಾ ಶ್ರೀಗೌರೀ ಮಂತ್ರಗಳ ರಹಸ್ಯಾರ್ಥವನ್ನು ಆರು ಉಪಪ್ರಕರಣಗಳಾಗಿ ವಿಂಗಡಿಸಿ ಬರೆಯಲ್ಪಟ್ಟಿದೆ. ಅವುಗಳು ಯಾವುವೆಂದರೆ:—(೧) ಶ್ರೀಗೌರೀ ಮಂತ್ರದ ರಹಸ್ಯಾರ್ಥ. (೨) ಶ್ರೀಲಲಿತಾಮಂತ್ರಾಂತ್ಯದಲ್ಲಿರುವ ಹ್ರೀಂ ಬೀಜಾಕ್ಷರದ ತತ್ವ. (೩) ಶ್ರೀಲಲಿತಾಮಂತ್ರದ ಪ್ರಥಮಪಾದದ ಅರ್ಥ. (೪) ಶ್ರೀಲಲಿತಾಮಂತ್ರದ ದ್ವಿತೀಯಪಾದದ ಅರ್ಥ. (೫) ಶ್ರೀಲಲಿತಾಮಂತ್ರದ ತ್ರಿತೀಯಪಾದದ ಅರ್ಥ. (೬) ಶ್ರೀ ಗಾಯತ್ರೀ ಶ್ರೀಲಲಿತಾಪಂಚದಶಾಕ್ಷರೀ ಮಂತ್ರಗಳ, ಶ್ರೀಮದ್ರಾಮಾಯಣದ ಅಂತರಾರ್ಥದ, ಶ್ರೀ ಸಪ್ತಮಾತೃಕಾಂಬಾ ತಾದಾತ್ಮ್ಯವಾದ ಶ್ರೀಸರಸ್ವತೀ ವೀಣೆಯಲ್ಲಿನ ಸಪ್ತಸ್ವರಗಳ ಏಕಾರ್ಥದ ನಿರೂಪಣೆ.

---

ಶ್ರೀ

## ಒಂದನೆಯ ಪ್ರಕರಣ

# ಶ್ರೀ ಗೌರೀಮಂತ್ರರಹಸ್ಯಾರ್ಥ.

---

"ಹ್ರೀಂನಮಶ್ಶಿವಾಯ್ಯೈ" ಎಂಬುದು ಶ್ರೀ ಗೌರೀಮಂತ್ರವು. ಇದರಲ್ಲಿ ಹ್ರೀಂ ಎನ್ನುವುದೇ ಮೂಲಮಂತ್ರವು. ಹ್ರೀಂಕಾರಸ್ವರೂಪಳಾದ ಶಿವೆಗೆ ನಮಸ್ಕಾರವೆಂದು ಇದರ ಅರ್ಥ. ಮೂಲಮಂತ್ರವಾದ ಹ್ರೀಂ ಎಂಬ ಒಂದು ಅಕ್ಷರದ ಅರ್ಥವು ಪರಬ್ರಹ್ಮಸ್ವರೂಪಿಣಿಯಾಗಿರುವ ಶ್ರೀದೇವಿಯ ಸಚ್ಚಿದಾನಂದ ಸ್ವರೂಪವನ್ನೂ, ಈಶ್ವರನ ಪತ್ನಿಯಾಗಿಯೂ ಜಗತ್ತಿನ ಸೃಷ್ಟಿಸ್ಥಿತಿಲಯಗಳಿಗೆ ಪ್ರಭುವಾಗಿಯೂ ಇರುವ ಈಶ್ವರೀಸ್ವರೂಪವನ್ನೂ, ಹ್ರೀಂಕಾರವೇ ಬ್ರಹ್ಮಾಂಡ ವಾಗಿರುತ್ತೆಂಬುವನ್ನೂ ಪ್ರತಿಪಾದಿಸುವುದು. ಮೇಲಿನ ಸಕಲ ಮಹತ್ತಿನ ವಿಚಾರ ಗಳೂ ಮೂಲಮಂತ್ರವಾದ ಹ್ರೀಂ ಎಂಬ ಒಂದು ಅಕ್ಷರದಲ್ಲಿ ಅಡಕವಾಗಿದೆ. ಆದುದರಿಂದ ಪರಬ್ರಹ್ಮಸ್ವರೂಪಿಣಿಯೂ ಈಶ್ವರೀಸ್ವರೂಪಿಣಿಯೂ ಆದ ಶಿವೆಗೆ ನಮಸ್ಕಾರವೆಂಬುದೇ ಹ್ರೀಂ ನಮಶ್ಶಿವಾಯ್ಯೈ ಎಂಬುದರ ಅರ್ಥ. ಈ ಮಂತ್ರದ ಮಹತ್ತಿನ ವಿಚಾರಗಳನ್ನು ತಿಳಿಯಲು ಈ ಗ್ರಂಥದಲ್ಲೇ ಮುಂದೆ ಬರೆದಿರುವ ಶ್ರೀಲಲಿತಾ ಪಂಚದಶಾಕ್ಷರೀಮಂತ್ರದ ರಹಸ್ಯಾರ್ಥವನ್ನು ಚೆನ್ನಾಗಿ ಪಠಿಸಿ ತಿಳಿದುಕೊಳ್ಳಬೇಕು. ಪಂಚದಶಾಕ್ಷರೀ ಮಂತ್ರದಲ್ಲೂ ಹ್ರೀಂ ಎನ್ನುವುದೇ ಮೂಲಮಂತ್ರವಾಗಿರುವುದರಿಂದಲೂ ಶ್ರೀಲಲಿತಾದೇವಿಯೂ ಶ್ರೀಗೌರೀದೇವಿಯೂ ಒಬ್ಬಳೇಯಾಗಿರುವುದರಿಂದಲೂ ಪಂಚದಶಾಕ್ಷರೀಮಂತ್ರದ ರಹಸ್ಯಾರ್ಥವನ್ನು ಪಠಿಸಿ ಹ್ರೀಂ ಎಂಬ ಒಂದು ಅಕ್ಷರದ ಮಹತ್ತನ್ನು ಅರಿಯತಕ್ಕದ್ದು. ಪಂಚ ದಶಾಕ್ಷರೀಮಂತ್ರದ ೨ನೆಯ ಪ್ರಕರಣದಲ್ಲಿ ಹ ರ, ಈ, ಅಕ್ಷರಗಳು ಮತ್ತು ಅನುಸ್ವಾರವೂ (ಹ+ರ+ಈ+೦) ಸೇರಿ ಹ್ರೀಂ ಬೀಜಾಕ್ಷರವಾಗಿರುತ್ತೆಂಬ ವಿಚಾರ ಮತ್ತು ಈ ಅಕ್ಷರಗಳು ಸಚ್ಚಿದಾನಂದಸ್ವರೂಪಿಣಿಯಾದ ಶ್ರೀದೇವಿಯಲ್ಲಿನ ಸತ್, ಚಿತ್, ಆನಂದ, ಪ್ರಪಂಚ ಬೀಜಶಕ್ತಿಯನ್ನು ಪ್ರತಿಪಾದಿಸುತ್ತೆಂಬ ವಿಚಾರಗಳು ಬಂದಿವೆ. ೩, ೪, ೫ ನೆಯ ಪ್ರಕರಣಗಳಲ್ಲಿ ಜಗತ್ತಿನ ಸೃಷ್ಟಿ, ವ್ಯಾಪಾರ, ಮೋಕ್ಷದ ವಿಚಾರಗಳು ಕ್ರಮವಾಗಿ ಬಂದಿರುತ್ತವೆ ಆದುದರಿಂದ ಪಂಚದಶಾ ಕ್ಷರೀಮಂತ್ರದ ರಹಸ್ಯಾರ್ಥವನ್ನು ಪಠಿಸಿ ಶ್ರೀಗೌರೀಮಂತ್ರದ ರಹಸ್ಯಾರ್ಥವನ್ನು ತಿಳಿದುಕೊಳ್ಳತಕ್ಕದ್ದು.

---

ಶ್ರೀ.

## ಎರಡನೆಯ ಪ್ರಕರಣ

# ಶ್ರೀಲಲಿತಾ ಮಂತ್ರಾಂತ್ಯದಲ್ಲಿರುವ 'ಹ್ರೀಂ' ಬೀಜಾಕ್ಷರದ ತತ್ವಾರ್ಥ

ಶ್ರೀಲಲಿತಾ ಪಂಚದಶಾಕ್ಷರೀ ಮಂತ್ರವನ್ನು ಶ್ರೀ ಹಯಗ್ರೀವಾವತಾರವನ್ನೆತ್ತಿದ್ದ ಶ್ರೀಮಹಾವಿಷ್ಣುವು ಅಗಸ್ತ್ಯಮಹರ್ಷಿಗಳಿಗೆ ಉಪದೇಶಮಾಡಿ ಪರಂಪರೆಯಾಗಿ ಬಂದ ಮಂತ್ರವಾಗಿದೆ.

ಕ, ಏ, ಈ, ಲ, ಹ್ರೀಂ, ಹ, ಸ, ಕ, ಹ, ಲ, ಹ್ರೀಂ, ಸ, ಕ, ಲ, ಹ್ರೀಂ ಎಂಬುದು ಶ್ರೀಲಲಿತಾಪಂಚದಶಾಕ್ಷರೀ ಮಂತ್ರವು. ಶ್ರೀಲಲಿತಾ ಮಂತ್ರದಲ್ಲಿ ೧೨ ಅಕ್ಷರಗಳು ಮೂರು ಹ್ರೀಂಕಾರಗಳು ಇವೆ. ಮಂತ್ರವು ಅಕ್ಷರಗಳ ಸಂಯೋಗದಿಂದುಂಟಾಗುವ ಪದಗಳನ್ನೊಳಗೊಂಡಿಲ್ಲ. ಆದುದರಿಂದ ಪದಗಳ ಅರ್ಥಗಳ ಮೂಲಕ ಮಂತ್ರದ ಮಹಿಮೆಯನ್ನರಿಯಲು ಸಾಧ್ಯವಿಲ್ಲ. ಮಂತ್ರದಲ್ಲಿರುವ ಪ್ರತ್ಯೇಕ ಪ್ರತ್ಯೇಕವಾದ ಅಕ್ಷರಗಳ ಶಕ್ತಿಗಳಿಂದಲೇ ಮಂತ್ರದ ಮಹಿಮೆಯನ್ನು ತಿಳಿಯಬೇಕಾಗಿದೆ. ಅಕ್ಷರಶಕ್ತಿಗಳು "ನಕ್ಷರತೀತ್ಯಕ್ಷರಂ" ಎಂಬಂತೆ ನಾಶರಹಿತವುಳ್ಳವುಗಳಾಗಿ ಸೃಷ್ಟಿಸ್ಥಿತಿಲಯಗಳ ಅನೇಕ ವಿಧವಾದ ನಾದಬ್ರಹ್ಮದ ಕಾರ್ಯಗಳಿಗೆ ಕಾರಣಗಳಾಗಿವೆ. ಯಾವ ಯಾವ ಅಕ್ಷರಗಳು ಯಾವಯಾವ ಸಂದರ್ಭಗಳಲ್ಲಿ ಎಂತೆಂತಹ ಕಾರ್ಯಗಳಿಗೆ ಕಾರಣಗಳಾಗಿವೆಯೋ ಅವುಗಳನ್ನರಿಯಲು ಶ್ರುತಿಪ್ರಮಾಣ ಮತ್ತು ಮಹಾತ್ಮರ ವಚನಗಳನ್ನೇ ಆಧಾರವಾಗಿ ತೆಗೆದುಕೊಳ್ಳಬೇಕಲ್ಲದೆ ಅನ್ಯಥಾ ಸಾಧ್ಯವಿಲ್ಲ. ಶ್ರೀಲಲಿತಾ ಮಂತ್ರದಲ್ಲಿರುವ ಅಕ್ಷರಶಕ್ತಿಗಳ ವಿವರಣೆಗೆ ಶ್ರೀಶಂಕರಭಗವತ್ಪಾದರವರು ಸೌಂದರ್ಯಲಹರಿಯಲ್ಲಿ ಹೇಳಿರುವುದೇನೆಂದರೆ,

ಶಿವಶ್ಶಕ್ತಿಃ ಕಾಮಃ ಕ್ಷಿತಿರಥ ರವಿಶ್ಶೀತಕಿರಣಃ |
ಸ್ಮರೋಹಂಸ ಶ್ಶಕ್ರಸ್ತದನುಚ ಪರಾಮಾರಹರಯಃ ||
ಅಮೀ ಹೃಲ್ಲೇಖಾಭಿ ಸ್ತಿಸೃಭಿ ರವಸಾನೇಷು ಘಟಿತಾ |
ಭಜಂತೇ ವರ್ಣಾಸ್ತೇ ತವಜನನಿ ನಾಮಾವಯವತಾಂ ||

**ತಾತ್ಪರ್ಯ**—ಎಲೌ ಜಗನ್ಮಾತೆಯೆ **ಕ, ಏ, ಈ, ಲ** ಎಂಬ ನಾಲಕ್ಕು ವರ್ಣಗಳು ಅನಂತರ **ಹ, ಸ, ಕ, ಹ, ಲ** ಎಂಬ ಐದು ವರ್ಣಗಳು ತದನಂತರ

**ಸ, ಕ,** ಲ ಎಂಬ ಮೂರು ವರ್ಣಗಳಿಗೆ ಆಯಾಯ ವರ್ಣಸಮುದಾಯದ ಅಂತ್ಯದಲ್ಲಿ ಹ್ರೀಂ ಅಕ್ಷರಗಳನ್ನು ಸೇರಿಸಿದರೆ ಹ್ರೀಂಕಾರ ಸ್ವರೂಪವಾದ ನಿನ್ನ ನಾಮದ ಅವಯವಗಳಾಗುವುವು. ಅಲ್ಲದೆ ಕ, ಏ, ಈ, ಲ ಎಂಬ ಪ್ರಥಮ ಪಾದದ ಅಕ್ಷರಗಳಿಗೆ ಶಿವಃ, ಶಕ್ತಿಃ, ಕಾಮಃ, ಕ್ಷಿತಿಃ ಎಂಬ ವಿವರಣೆಯೂ ಹ, ಸ, ಕ, ಹ, ಲ ಎಂಬ ದ್ವಿತೀಯ ಪಾದದ ಅಕ್ಷರಗಳಿಗೆ ರವಿಃ, ಶೀತಕಿರಣಃ, ಸ್ಮರಃ, ಹಂಸಃ, ಶಕ್ರಃ, ಎಂಬ ವಿವರಣೆಯೂ ಸಕಲ ಎಂಬ ತ್ರಿತೀಯ ಪಾದದ ಅಕ್ಷರಗಳಿಗೆ ಪರಾ, ಮಾರ ಹರಿಃ ಎಂಬ ವಿವರಣೆಯೂ ಆಗುವುದು. ಎಂದು ಹೇಳಿರುತ್ತಾರೆ.

ಶ್ರೀಶಂಕರಭಗವತ್ಪಾದರವರ ಸೌಂದರ್ಯಲಹರಿ ಶ್ಲೋಕಗಳಿಗೆ ವ್ಯಾಖ್ಯಾನವನ್ನು ಬರೆದಿರುವರು. ಈ ಮೇಲಿನ ಶ್ಲೋಕಕ್ಕೆ ವ್ಯಾಖ್ಯಾನವನ್ನು ಬರೆದಿದ್ದರೂ ಶ್ರೀಶಂಕರ ಭಗವತ್ಪಾದರವರ ವಾಕ್ಯಗಳಿಗೆ ಸಮಂಜಸವಾದ ತತ್ವಾರ್ಥಗಳು ಹೊರಸೂಸುವುದಿಲ್ಲ. ಮೇಲಿನ ಶ್ರೀ ಶಂಕರಭಗವತ್ಪಾದರವರ ವಾಕ್ಯಹೊರತು ಮತ್ತಾವ ಗ್ರಂಥಗಳಲ್ಲೂ ಒಂದೇಕಡೆ ಶ್ರೀ ಲಲಿತಾಮಂತ್ರದ ಎಲ್ಲಾ ಅಕ್ಷರಗಳ ವಿವರವು ದೊರೆಯುವುದಿಲ್ಲ. ಆದುದರಿಂದ ಶ್ರೀ ಶಂಕರಭಗವತ್ಪಾದರವರ ವಾಕ್ಯವನ್ನೇ ಆಧಾರವಾಗಿಟ್ಟುಕೊಂಡು ಇತರ ಗ್ರಂಥಗಳ ಪ್ರಮಾಣವಾಕ್ಯಗಳನ್ನೂ ಸೇರಿಸಿ



ಕೊಂಡು ಮಂತ್ರದಲ್ಲಿರುವ ರಹಸ್ಯಾರ್ಥವನ್ನು ವಿವರಿಸಿರುವುದು. ಮಂತ್ರದ ಅಕ್ಷರಗಳಿಗೆ ಶ್ರೀ ಶಂಕರಭಗವತ್ಪಾದರವರ ಮೇಲಿನ ಶ್ಲೋಕದಂತೆ ವಿವರಣೆಯನ್ನು ಕೊಟ್ಟು ಮಂತ್ರದ ತತ್ವಾರ್ಥವನ್ನು ಗುರ್ತುಮಾಡಿ ಕೆಳಗಿನ ನಕ್ಷೆಯಲ್ಲಿ ಬರೆದಿರುವುದು.

ಮುಂದಿನ ರಹಸ್ಯಾರ್ಥಗಳನ್ನು ಅರಿಯಲು ಪ್ರತಿಯೊಂದು ಅಕ್ಷರಗಳಿಗೂ ಇರುವ ವಿವರಣೆಯನ್ನು ಚೆನ್ನಾಗಿ ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ಶ್ರೀಲಲಿತಾ ಮಹಾತ್ರಿಪುರಸುಂದರೀ ಜಗನ್ಮಾತೆಯು ಸಾಕ್ಷಾತ್ ಪರಬ್ರಹ್ಮಸ್ವರೂಪಿಣಿ ಯೆಂಬುದನ್ನೂ, "ಏಕಮೇವಾದ್ವಿತೀಯಂಬ್ರಹ್ಮ, ಏಕಮೇವತು ಭೂತಾತ್ಮಾ ಭೂತೇ ಭೂತೇ ವ್ಯವಸ್ಥಿತಃ" ಎಂಬ ಶ್ರುತಿ ಪ್ರಮಾಣಗಳಂತೆ ಬೀಜ

## ಶ್ರೀಲಲಿತಾಪಂಚದಶಾಕ್ಷರೀ ಮಂತ್ರರಹಸ್ಯ.

| | ೧ | ೨ | ೩ | ೪ | ೫ | ೬ | ೭ | ೮ | ೯ | ೧೦ | ೧೧ | ೧೨ | ೧೩ | ೧೪ | ೧೫ |
|---|---|---|---|---|---|---|---|---|---|---|---|---|---|---|---|
| ಶ್ರೀಲಲಿತಾ ಪಂಚದಶಾಕ್ಷರೀ ಮಂತ್ರ. | ಕ | ಏ | ಈ | ಲ | ಹ್ರೀಂ | ಹ | ಸ | ಕ | ಹ | ಲ | ಹ್ರೀಂ | ಸ | ಕ | ಲ | ಹ್ರೀಂ |
| ಶ್ರೀಲಲಿತಾ ಪಂಚದಶಾಕ್ಷರೀ ಮಂತ್ರದ ವಿವರಣೆ ಶ್ರೀಶಂಕರ ಭಗವತ್ಪಾದಾಚಾರ್ಯರವರಿಂದ. | ಶಿವಃ | ಶಕ್ತಿಃ | ಕಾಮಃ | ಕ್ಷಿತಿಃ | | ರವಿಃ | ಶೀತ ಕಿರಣಃ | ಸ್ಮರಃ | ಹಂಸಃ | ಶಕ್ರಃ | | ಪರಾ | ಮಾರ | ಹರಿಃ | |
| ತತ್ವಾರ್ಥ .... | ಸೃಷ್ಟಿ | | | | | | ವ್ಯಾಪಾರ | | | | | ಮೋಕ್ಷ | | | ಪರಬ್ರಹ್ಮ |

ರೂಪವಾದ ಪರಬ್ರಹ್ಮವೇ ವೃಕ್ಷಸ್ವರೂಪವಾದ ವಿರಾಡೆನಿಸಿದ ಪ್ರಪಂಚ ರೂಪವಾಗಿ ಅನಂತರ ಪ್ರಪಂಚವು ಲಯವಾಗಿ ಪುನಃ ಬೀಜರೂಪವಾದ ಪರಬ್ರಹ್ಮವೇ ನಿಲ್ಲುವ ಸೃಷ್ಟಿಸ್ಥಿತಿಲಯಗಳ ರಹಸ್ಯಾರ್ಥಗಳನ್ನೂ ಶ್ರೀಲಲಿತಾ ಪಂಚದಶಾಕ್ಷರೀ ಮಂತ್ರವು ಪ್ರತಿಪಾದಿಸುತ್ತದೆ. ಈ ಮಂತ್ರದ ಅಂತ್ಯದಲ್ಲಿರುವ 'ಹ್ರೀಂ' ಎನ್ನುವುದೇ ಮುಖ್ಯವಾದ ಬೀಜಸ್ವರೂಪವಾಗಿ ಸಾಕ್ಷಾತ್ ಪರಬ್ರಹ್ಮ

ವನ್ನೇ ಪ್ರತಿಪಾದಿಸುವುದು. ಹ್ರೀಂಕಾರಸ್ವರೂಪವೇ ಸಚ್ಚಿದಾನಂದಸ್ವರೂಪಳಾದ ಶ್ರೀಲಲಿತಾಮಹಾತ್ರಿಪುರಸುಂದರೀಪರದೇವತೆಯು. ಹ್ರೀಂ ಎನ್ನುವುದರಲ್ಲಿ ಹಕಾರ, ರಕಾರ, ಈಕಾರ, ಅನುಸ್ವಾರಗಳು (ಹ+ರ+ಈ+ಂ) ಸೇರಿವೆ. ಹ್ರೀಂ ನಲ್ಲಿರುವ ಹಕಾರವು ಪರಬ್ರಹ್ಮದ ಸತ್ ಸ್ವರೂಪವನ್ನೂ, ರಕಾರವು ಚಿತ್ ಸ್ವರೂಪವನ್ನೂ, ಈಕಾರವು ಆನಂದಸ್ವರೂಪವನ್ನೂ ಅನುಸ್ವಾರವು ಪ್ರಪಂಚದ ಭೂತಾತ್ಮಕನ ಬೀಜಶಕ್ತಿಸ್ವರೂಪವನ್ನೂ ಪ್ರತಿಪಾದಿಸುವುವು. ಈ ತಾತ್ಪರ್ಯಕ್ಕೆ ಶ್ರೀಲಲಿತಾ ತ್ರಿಶತೀಭಾಷ್ಯದಲ್ಲಿ ಶ್ರೀ ಶಂಕರಭಗವತ್ಪಾದರವರು

> ಹಕಾರಶ್ಶಿವಃ ಆಕಾಶಬೀಜತ್ವಾದಾಕಾಶವನ್ನಿರ್ಲೇಪಃ ರೇಫಃ ವಹ್ನಿಬೀಜಂ
> ಕಾರ್ಯೋತ್ಪಾದನ ಸನ್ನಿಹಿತಶಕ್ತಿಮದೀಶ್ವರ ವಾಚಕಂ ತಥಾಚಹಕಾರಯುಕ್ತ
> ರೇಫಶ್ಶುದ್ಧಚೈತನ್ಯಂ ಸ್ವಯಮೇವಕಾರಣ ತಾವಚ್ಛಿನ್ನಮಿತಿವದತಿ ।
> ಈಕಾರಃ ಮನ್ಮಥಬೀಜಂ ತತ್ಕಾರಣಲಕ್ಷಕತಯಾ ಸ್ಥಿತಿಹೇತು
> ವಿಷ್ಣುರೂಪಂ ಚೈತನ್ಯಮಭಿದಧಾತಿ । ಅನುಸ್ವಾರಃ ತಸ್ಮಿನ್ನೇವಪದಾರ್ಥೇ
> ಅಭಿನ್ನನಿಮಿತ್ತೋಪಾದಾನೇ ಲಯಂವಕ್ತಿತಥಾಚ ಹ್ರೀಮಿತ್ಯುಕ್ತೇ
> ಜಗದುತ್ಪತ್ತಿಲಯಸ್ಥಿತಿಕಾರಣಂ ಚೈತನ್ಯಂ ಶಕ್ತ್ಯಾವಾಚ್ಯಾರ್ಥಃ ।

ತಾತ್ಪರ್ಯ—ಹಕಾರಸಹಿತವಾಗಿರತಕ್ಕ ರಕಾರವು ಶುದ್ಧಚೈತನ್ಯಸ್ವರೂಪವು. ಹಕಾರವು ಆಕಾಶಬೀಜವಾಗಿ ಸತ್ಸ್ವರೂಪವು. ರಕಾರವು ಅಗ್ನಿಬೀಜವಾಗಿ ಕಾರ್ಯೋತ್ಪಾದನಕ್ಕೆ ಸಾಧನವಾಗಿರತಕ್ಕ ಶಕ್ತಿಗರ್ಭಿತವಾಗಿ ಈಶ್ವರವಾಚಕವಾದ ಚಿತ್ಸ್ವರೂಪವು. ಹಕಾರ ಸಹಿತವಾದ ರೇಫವು ಅಂದರೆ ಹ್ರ ಅಕ್ಷರವು ಸರ್ವಕ್ಕೂ ತಾನೇ ಕಾರಣವೆಂಬುದನ್ನು ವಿಶದಪಡಿಸುವುದು ಕಾಮಬೀಜವಾದ ಈಕಾರವು ಆನಂದಕ್ಕೆ ಕಾರಣಭೂತವಾದ ಚೈತನ್ಯವನ್ನು ವಿಶದಪಡಿಸುವುದು. ಅನುಸ್ವಾರವು ಪರಬ್ರಹ್ಮದಲ್ಲೇ ಅಭಿನ್ನವಾದ ನಿಮಿತ್ತವನ್ನು ಸ್ವೀಕರಿಸುವುದರ ದೆಸೆಯಿಂದ ಲಯವನ್ನು ಸೂಚಿಸುತ್ತದೆ. ಆದುದರಿಂದ ಹ್ರೀಂ ಅಕ್ಷರವನ್ನು ಹೇಳಲಾಗಿ ಪ್ರಪಂಚದ ಸೃಷ್ಟಿಸ್ಥಿತಿಲಯಗಳ ಕಾರಣಭೂತವಾದ ಪರಬ್ರಹ್ಮಚೈತನ್ಯವನ್ನು ಪ್ರತಿಪಾದಿಸಿದಂತಾಯಿತು. ಎಂದು ಹೇಳಿರುತ್ತಾರೆ. ಹ್ರೀಂಕಾರದಲ್ಲಿರುವ ಹಕಾರವು ಆಕಾಶಬೀಜವಾಗಿರುವುದೆಂದರೆ—ಸರ್ವವ್ಯಾಪಕವೂ ಪರಿಶುದ್ಧವೂ ತ್ರಿಕಾಲಾಬಾಧ್ಯವಾದಸತ್ಸ್ವರೂಪವೂ ಆದ ಪರಬ್ರಹ್ಮವನ್ನೇ ಪ್ರತಿಪಾದಿಸುವುದು ಇದೇ ತಾತ್ಪರ್ಯಕ್ಕೆ ಶ್ರೀ ಶಂಕರಭಗವತ್ಪಾದರವರು ಶ್ರೀಲಲಿತಾ ತ್ರಿಶತೀಭಾಷ್ಯದಲ್ಲಿ

> "ಹಕಾರಸ್ಯ ಆಕಾಶಬೀಜಸ್ಯ ಅರ್ಥಾ, ಅರ್ಥಸ್ವರೂಪ ಚೈತನ್ಯಾ, ಆಕಾಶ ವಿಗ್ರಹೇತ್ಯರ್ಥಃ"

ಅಂದರೆ ಆಕಾಶಬೀಜವಾದ ಹಕಾರಕ್ಕೆ ಅರ್ಥಸ್ವರೂಪ ಚೈತನ್ಯ ಎಂದು ಹೇಳಿರುತ್ತಾರೆ. ಈ ತತ್ವಸಮರ್ಥನೆಗೆ

" ಆಕಾಶೋಽಹವೈನಾಮರೂಪಯೋರ್ನಿರ್ವಹಿತಾತೇ ಯದಂತ
ರಾತದ್ಬ್ರಹ್ಮ"

ಅಂದರೆ ಯಾವುದು ಆಕಾಶಾತ್ಮಕವಾಗಿ ನಾಮರೂಪಗಳನ್ನು ನಿರ್ವಹಿಸುತ್ತವೋ ಅದೇ ಪರಬ್ರಹ್ಮ. ಎಂಬ ಶ್ರುತಿಪ್ರಮಾಣವೂ ಇರುವುದು. ಅಲ್ಲದೆ ಹ ಅಕ್ಷರದ ಮಹತ್ತ್ವೂ ಕೂಡ ಸದ್ವಸ್ತುವಾದ ಪರಬ್ರಹ್ಮವನ್ನೇ ಪ್ರತಿಪಾದಿಸುವುದೆಂತ ಅಕ್ಷಮಾಲಿಕೋಪನಿಷತ್ತಿನಲ್ಲಿ

" ಓಂ ಹಂಕಾರ ಸರ್ವವಾಙ್ಮಯ ನಿರ್ಮಲ ಏಕೋನ ಪಂಚಾಶದಕ್ಷೆ
ಪ್ರತಿಷ್ಠಿತ "

ಅಂದರೆ ಹಕಾರವು ಸಕಲ ವಿಧವಾದ ಶಬ್ದದಲ್ಲೂ ಅಂತರ್ಭೂತವಾಗಿಯೂ ಪರಿಶುದ್ಧವಾಗಿಯೂ ಅಕ್ಷರಗಳಲ್ಲಿ ನಲವತ್ತೊಂಭತ್ತನೆಯ ಅಕ್ಷರವಾಗಿಯೂ ಇರುವುದು. ಆಕಾಶತತ್ವವೇ ಹಕಾರವೆನ್ನುವುದಕ್ಕೆ ಪಂಚೋಪಚಾರ ಪೂಜೆಯಲ್ಲೂ " ಹಂ ಆಕಾಶತತ್ವಾತ್ಮಿಕಾಯೈ ಪುಷ್ಪಂ ಸಮರ್ಪಯಾಮಿ " ಎಂದು ಹೇಳಲ್ಪಡುವುದು. ಆದುದರಿಂದ ಹ್ರೀಂಕಾರದಲ್ಲಿರುವ ಹಕಾರವು ಪರಬ್ರಹ್ಮದ ಸಚ್ಚಿದಾನಂದತ್ವದಲ್ಲಿನ ಸತ್ ಸ್ವರೂಪವನ್ನು ಪ್ರತಿಪಾದಿಸುವುದು.

ಹ್ರೀಂಕಾರದಲ್ಲಿರುವ ' ರ ' ಕಾರವು ಅಗ್ನಿಬೀಜವಾಗಿ ಕಾರ್ಯೋತ್ಪಾದನೆಗೆ ಸಾಧನವಾಗಿರತಕ್ಕ ಶಕ್ತಿಗರ್ಭಿತವಾಗಿ ಈಶ್ವರವಾಚಕವಾದ ಚಿತ್ ಸ್ವರೂಪವೆಂದು ಮೇಲಿನ ಶ್ರೀಶಂಕರಭಗವತ್ಪಾದರವರ ಆಧಾರವಾಕ್ಯದಿಂದ ತಿಳಿಸಿತಷ್ಟೆ? ರಕಾರವು ಅಗ್ನಿಬೀಜವಾಗಿರುವುದೆಂದರೆ ಪರಬ್ರಹ್ಮವು ಸ್ವಯಂಪ್ರಕಾಶಸ್ವರೂಪವೆಂಬುದನ್ನು ಪ್ರತಿಪಾದಿಸುವಿಕೆಯೇ ಹ್ರೀಂಕಾರದಲ್ಲಿರುವ ರಕಾರದ ತತ್ವವಾಗಿರುವುದು. ಸ್ವಯಂಪ್ರಕಾಶವೇ ಚಿತ್ ಸ್ವರೂಪವು. ರಕಾರವು ಅಗ್ನಿಬೀಜವಾಗಿ ಚಿತ್ಸ್ವರೂಪವಾದ ಪರಬ್ರಹ್ಮವನ್ನು ಪ್ರತಿಪಾದಿಸುವ ತತ್ವಕ್ಕೆ ರಾಮ ಎನ್ನುವ ಪದದಲ್ಲಿರುವ ರಕಾರದ ಮಹತ್ವವೂ ಅನ್ವಯವಾಗುವುದು. ಕಾರಣವೇನೆಂದರೆ ಎಲ್ಲಾ ದೇವತಾ ಶಕ್ತಿಗಳ ಮಹತ್ತು ಬೀಜರೂಪವಾದ ಪರಬ್ರಹ್ಮತತ್ವಕ್ಕೆ ಅನ್ವಯವಾಗಲೇಬೇಕು. ರಾಮ ಎನ್ನುವ ಪದದಲ್ಲಿನ ರಕಾರದ ಮಹತ್ವಕ್ಕೆ ರಾಮರಹಸ್ಯೋಪನಿಷತ್ತಿನಲ್ಲಿ

ರಕಾರೊ ವಹ್ನಿವಚನಃ ಪ್ರಕಾಶಃ ಪರ್ಯವಸ್ಯತಿ |
ಸಚ್ಚಿದಾನಂದರೂಪೋಽಸ್ಯ ಪರಮಾತ್ಮಾರ್ಥ ಉಚ್ಯತೆ |

**ತಾತ್ಪರ್ಯ**—ರಕಾರವು ಅಗ್ನಿವಾಚಕವಾದ್ದರಿಂದ ಸ್ವಯಂಪ್ರಕಾಶರೂಪ ವಾಗಿರುವುದು. ರಕಾರದರೂಪವು ಸಚ್ಚಿದಾನಂದವೆಂದು ಪಾರಮಾರ್ಥಿಕ ಅರ್ಥ ವಾಗಿರುವುದು. ಎಂದು ಹೇಳಿದೆ.

ಅಲ್ಲದೆ ರಕಾರವು ಅಗ್ನಿಬೀಜವಾಗಿರುವ ತತ್ವಕ್ಕೆ ಪಂಚೋಪಚಾರ ಪೂಜೆ ಯಲ್ಲೂ ರಂ ಅಗ್ನಿತತ್ವಾತ್ಮಿಕಾಯೈ ದೀಪಂ ದರ್ಶಯಾಮಿ ಎಂಬದಾಗಿ ಹೇಳ ಲ್ಪಡುವುದು. ಅಲ್ಲದೆ ಅಕ್ಷಮಾಲಿಕೋಪನಿಷತ್ತಿನಲ್ಲಿ

ಓಂ ರಂಕಾರ ದಾಹಕರ ವಿಕೃತ ತ್ರಿಚತ್ವಾರಿಂಶೇಕ್ಷೇ ಪ್ರತಿತಿಷ್ಠ ।

ಅಂದರೆ ರಕಾರವು ದಹನವನ್ನುಂಟುಮಾಡುವ ಅಗ್ನಿತತ್ವವಾಗಿ ಶುದ್ಧವಾದ ಕ್ರಿಯಾ ರೂಪವಾಗಿ ನಲವತ್ತಮೂರನೆಯ ಅಕ್ಷರವಾಗಿದೆ. ಎಂದು ಹೇಳಿದೆ. ಅಗ್ನಿತತ್ವವಾದ ರಕಾರದ ಮಹತ್ತಿಗೆ ರಾಮರಹಸ್ಯೋಪನಿಷತ್ತಿನಲ್ಲಿ

ಅಗ್ನೀಷೋಮಾತ್ಮಕಂ ರೂಪಂ ರಾಮಬೀಜೇ ಪ್ರತಿಷ್ಠಿತಮ್ ।
ಯಥೈವ ವಟಬೀಜಸ್ಥಃ ಪ್ರಾಕೃತಶ್ಚ ಮಹಾದ್ರುಮಃ ।
ತಥೈವ ರಾಮಬೀಜಸ್ಥಂ ಜಗದೇ ತಚ್ಚರಾಚರಂ ।

**ತಾತ್ಪರ್ಯ**—ಅಗ್ನೀಷೋಮಾತ್ಮಕರೂಪವು ಅಂದರೆ ಪ್ರಪಂಚವು ರಾಮ ಬೀಜದಲ್ಲಿಯೇ ಇರುವುದು. ಮುಂದಾಗುವ ಆಲದಮರವು ಆಲದ ಬೀಜದಲ್ಲಿ ಹೇಗಿರುವುದೋ ಹಾಗೆಯೇ ಈ ಸಮಸ್ತವಾದ ಪ್ರಪಂಚವು ರಾಮಬೀಜದಲ್ಲೇ ಅಡಗಿರುವುದು. ಎಂದು ಹೇಳಿದೆ.

ಆದುದರಿಂದ ಹ್ರೀಂನಲ್ಲಿರುವ ರಕಾರವು ಅಗ್ನಿಬೀಜವೆಂದರೆ ಪರಬ್ರಹ್ಮ ನಲ್ಲಿರುವ ಸ್ವಯಂಪ್ರಕಾಶವನ್ನು ಪ್ರತಿಪಾದಿಸುವುದು. ಪರಬ್ರಹ್ಮವು ಸ್ವಯಂ ಪ್ರಕಾಶವಾದ ಅಗ್ನಿ ಬೀಜವುಳ್ಳದ್ದಾಗಿ ಇರುವುದರಿಂದಲೇ ಸೂರ್ಯ ಮತ್ತು ಅಗ್ನಿಗಳ ಪ್ರಕಾಶಕ್ಕೂ ಕಾರಣಭೂತವಾಗಿದೆ. ಚಿತ್‌ಸ್ವರೂಪವಾದ ಪರಬ್ರಹ್ಮವು. ಜ್ಞಾನಾಗ್ನಿ, ಚಿಜ್ಜ್ಯೋತಿ, ವಿದ್ಯುಜ್ಜ್ಯೋತಿ ಮುಂತಾದ ನಾಮಗಳಿಂದಲೂ ಕರೆಯ ಲ್ಪಡುವುದು.

ಹ್ರೀಂ ಬೀಜಾಕ್ಷರದಲ್ಲಿರುವ ಹಕಾರ ರಕಾರಗಳ ತತ್ವಗಳನ್ನು ಮೇಲೆ ತಿಳಿಸಿತು. ಹ್ರೀಂನಲ್ಲಿರುವ ಈ ಕಾರವು ಕಾಮಬೀಜವಾಗಿ ಆನಂದಾತ್ಮಕವಾದ ಚೈತನ್ಯವನ್ನು ವಿಶದಪಡಿಸುವುದು. ಈ ತತ್ವಕ್ಕೆ ಶ್ರೀಶಂಕರಭಗವತ್ಪಾದರವರು ಶ್ರೀಲಲಿತಾ ತ್ರಿಶತೀಭಾಷ್ಯದಲ್ಲಿ

"ಈಕಾರಃ ಮನ್ಮಥಬೀಜಂ ತತ್ಕಾರಣ ಲಕ್ಷಕತಯಾ ಸ್ಥಿತಿಹೇತು ವಿಷ್ಣು ರೂಪಂ ಚೈತನ್ಯಮಭಿ ದಧಾತಿ"

ಎಂದು ಹೇಳಿರುತ್ತಾರೆ. ಅಂದರೆ ಈ ಕಾರವು ಮನ್ಮಥಬೀಜ. ಲಕ್ಷಣೆಯಿಂದ ಮನ್ಮಥನಿಗೆ ಅಂದರೆ ಸ್ಥಿತಿಗೆ ಕಾರಣಭೂತವಾದ ವಿಷ್ಣುಚೈತನ್ಯವು ಪ್ರತಿಪಾದಿಸಲ್ಪಡುತ್ತದೆ. ಇದೇ ತಾತ್ಪರ್ಯಕ್ಕೆ ತ್ರಿಪುರಾತಾಪಿನ್ಯುಪನಿಷತ್ತಿನಲ್ಲಿ

"ಸರ್ವಂ ಸರ್ವಾಂತರಭೂತಂ ತುರೀಯಾಕ್ಷರ ಮೀಕಾರಂ"

ಅಂದರೆ ಎಲ್ಲವೂ ಎಲ್ಲಾವಸ್ತುಗಳಲ್ಲಿ ಇರುತಕ್ಕದ್ದಾಗಿಯೂ ಅಕ್ಷರಗಳಲ್ಲಿ ನಾಲಕ್ಕನೆಯದಾಗಿಯೂ ಈ ಇರುವುದು, ಎಂದು ಹೇಳಿದೆ. ಅಲ್ಲದೆ ಅಕ್ಷಮಾಲಿಕೋಪನಿಷತ್ತಿನಲ್ಲಿ

"ಓಂ ಈಂಕಾರ ವಾಕ್ಪ್ರಸಾದಕರ ನಿರ್ಮಲ ಚತುರ್ಥೀಕ್ಷೇಪ್ರತಿತಿಷ್ಠ"

ಅಂದರೆ ಈ ಅಕ್ಷರವು ಶಬ್ದಪ್ರಸಾರಣಕ್ಕೆ ಕಾರಣವಾಗಿಯೂ ನಿರ್ಮಲವಾಗಿಯೂ ನಾಲಕ್ಕನೇ ಅಕ್ಷರವಾಗಿರುವುದೆಂದು ಹೇಳಿದೆ. ಅಲ್ಲದೆ ಸೀತಾಪದದಲ್ಲಿನ ಈಕಾರವೂ ಹ್ರೀಂಬೀಜಾಕ್ಷರದ ಈಕಾರದತತ್ವಕ್ಕೆ ಸರಿಯಾಗಿರುವುದು. ಸೀತೋಪನಿಷತ್ತಿನಲ್ಲಿ

"ವಿಷ್ಣುಃ ಪ್ರಪಂಚ ಬೀಜಂಚಮಾಯಾ ಈಕಾರ ಉಚ್ಯತೆ"

ಎಂದು ಹೇಳಿದೆ. ಅಂದರೆ ಜಗದ್ವ್ಯಾಪಿಯಾದ ಪರಬ್ರಹ್ಮದ ಸೃಷ್ಟಿಕ್ರಮಕ್ಕೆ ಕಾರಣಭೂತವಾಗಿರುವ ಮಾಯಾಬೀಜವನ್ನು ಪ್ರತಿಪಾದಿಸುವುದು. ಸುಖ ಸಂತೋಷ ಕಾಮನೆ ಮುಂತಾದವುಗಳು ಮನ್ಮಥಬೀಜವಾಗಿ ಆನಂದಾಂಶಕ್ಕೆ ಸೇರಿ ವಿಷಯಾನಂದವೆನಿಸುವುದು. ಆ ಪರಬ್ರಹ್ಮಸ್ವರೂಪವಾದರೋ ನಿಜಾನಂದರೂಪವಾಗಿ ಆನಂದಕ್ಕೆಲ್ಲಾ ಬೀಜರೂಪವಾದುದು. "ಆನಂದಂಬ್ರಹ್ಮ" ಎಂಬದಾಗಿ ಬೃಹದಾರಣ್ಯಕ ಶ್ರುತಿವಾಕ್ಯವೂ, "ಆನಂದಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ" ಮತ್ತು "ಆನಂದೀಭವತಿ" ಅಲ್ಲದೆ "ಆನಂದಂ ಬ್ರಹ್ಮಣೋ ವಿದ್ವಾನ್ನಬಿಭೇತಿ ಕುತಶ್ಚನೇತಿ" ಎಂಬ ತೈತ್ತಿರೀಯಕ ಶ್ರುತಿವಾಕ್ಯಗಳು ಪರಬ್ರಹ್ಮವು ಆನಂದ ಸ್ವರೂಪವೆಂದು ತಿಳಿಸುವಪ್ರಕಾರ ಹ್ರೀಂಕಾರದಲ್ಲಿರುವ ಈಕಾರವು ಮನ್ಮಥನಿಗೂ ಕಾರಣವಾದುದೆಂದರೆ ಸೃಷ್ಟಿ ಮತ್ತು ಸ್ಥಿತಿಗಳಿಗೆ ಕಾರಣಬೀಜಭೂತವಾದ ಆನಂದ ರೂಪವಾಗಿರುವುದು.

ಹ್ರೀಂ ಬೀಜಾಕ್ಷರದಲ್ಲಿರುವ ಅನುಸ್ವಾರದ ತತ್ವವೇನೆಂದರೆ—ಹ್ರೀಂ ನಲ್ಲಿರುವ ಅನುಸ್ವಾರವು (ಬಿಂದುವು) ಸೃಷ್ಟಿ ಮತ್ತು ಲಯಕ್ಕೆ ಕಾರಣಭೂತವಾದ ಪ್ರಕೃತಿ

ಬೀಜವನ್ನು ಸೂಚಿಸುತ್ತದೆ. "ಅರ್ಧಮಾತ್ರಾ ಪರಾಜ್ಞೇಯಾ" ಎಂಬ ಶ್ರುತ್ಯಾಧಾರದಂತೆ ಅರ್ಧಮಾತ್ರಾಸ್ವರೂಪವಾದ ಬಿಂದುವು ಸರ್ವಪ್ರಕೃತಿ ಭೂತಗಳಿಗೂ ಬೀಜರೂಪವಾಗಿರುವುದು. ಇದೇ ತಾತ್ಪರ್ಯಕ್ಕೆ ಶ್ರೀ ಶಂಕರಭಗವತ್ಪಾದರವರು ಶ್ರೀಲಲಿತಾ ತ್ರಿಶತೀಭಾಷ್ಯದಲ್ಲಿ

"ಬಿಂದುಃ ಸರ್ವಪ್ರಕೃತಿ ಭೂತಶಬ್ದಾರ್ಥಾತ್ಮಕತಯಾ"

ಅಂದರೆ ಬಿಂದುವು ಸರ್ವಪ್ರಕೃತಿಭೂತಗಳ ಬೀಜರೂಪವು. ಎಂದು ಹೇಳಿರುತ್ತಾರೆ. ಅಲ್ಲದೆ ಬಿಂದುವೆಂದರೆ ಒಂದು ಚುಕ್ಕೆ ಅಥವಾ ಸೊನ್ನೆ. ಅಣುವಿಗೆ ಅಣುವಾಗಿಯೂ ಮಹತ್ತಿಗೆ ಮಹತ್ತಾಗಿಯೂ ಬಿಂದುವು ಇರುವುದು ಸಾಸುವೆ ಕಾಳಿಗಿಂತ ಅತಿಸೂಕ್ಷ್ಮವಾಗಿರುವ ಬಿಂದುವು ಮಹತ್ತರವಾದ ಪರ್ವತಾಕಾರವಾಗಬಹುದು. ಪರ್ವತಾಕಾರವಾಗಿರುವ ಬಿಂದುವು ಅಣುವಿಗೆ ಅಣುವಾಗುವುದು ಇದರಂತೆ ಬಹುದೊಡ್ಡದಾದ ಭೂಮಂಡಲವು ಅಣುವಿಗೆ ಅಣುವಾಗುವುದು. ಇದರಂತೆಯೇ ಮಹತ್ತರವಾದ ಬಿಂದುರೂಪವಾಗಿರುವ ಬ್ರಹ್ಮಾಂಡವೇ ಅಣುವಿಗೆ ಅಣುರೂಪವಾಗಿ ಬಹುಸೂಕ್ಷ್ಮವಾದ ಶಕ್ತಿರೂಪವನ್ನು ಹೊಂದಿ ಪರಬ್ರಹ್ಮನಲ್ಲಿ ಅಡಗಿರುವ ತತ್ವದ ಸೂಚನೆಯೇ ಹ್ರೀಂಕಾರದಲ್ಲಿರುವ ಮತ್ತು ಓಂಕಾರದಲ್ಲಿರುವ ಬಿಂದುಸ್ವರೂಪವಾಗಿರುವುದು. ಇದೇ ಶ್ರೀ ಶಂಕರಭಗವತ್ಪಾದರವರು ಹೇಳಿರುವ ಸರ್ವಪ್ರಕೃತಿ ಭೂತಶಬ್ದಾರ್ಥಾತ್ಮಕವಾದುದು ಹೀಗೆ ಪರಬ್ರಹ್ಮದಲ್ಲಿ ಬಹು ಸೂಕ್ಷ್ಮಸ್ಥಿತಿಯಲ್ಲಿ ಅಡಗಿರುವ ಬ್ರಹ್ಮಾಂಡವು

ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಸ್ಸಂಭೂತಃ । ಆಕಾಶಾದ್ವಾಯುಃ ।
ವಾಯೋರಗ್ನಿಃ । ಅಗ್ನೇರಾಪಃ । ಅದ್ಭ್ಯಃಪೃಥಿವೀ ।

ಎಂಬ ತೈತ್ತಿರೀಯ ಶ್ರುತಿಪ್ರಮಾಣದಂತೆ ಹ್ರೀಂಕಾರದಲ್ಲಿರುವ ಬಿಂದುರೂಪವಾದ ಪರಬ್ರಹ್ಮದಿಂದ ಬ್ರಹ್ಮಾಂಡದ ಸೃಷ್ಟಿಗೆ ಪ್ರಾರಂಭವಾಗುವುದು. ಅನಂತರ ಲಯವಾಗಿ ಕಾರಣವಾದ ಪರಬ್ರಹ್ಮನಾಗುವುದು. ಅಂದರೆ ಪುನಃ ಬಿಂದುರೂಪಕ್ಕೆ ನಿಲ್ಲುವುದು. ಆದುದರಿಂದ ಹ್ರೀಂಕಾರ ಮತ್ತು ಓಂಕಾರಗಳಲ್ಲಿರುವ ಅನುಸ್ವಾರವು ಸರ್ವಪ್ರಕೃತಿಭೂತಗಳಿಗೂ ಬೀಜರೂಪವಾಗಿಯೂ ಸೃಷ್ಟಿ ಮತ್ತು ಲಯಸೂಚಿಕವಾಗಿಯೂ ಇರುವುದು.

ಮುಖ್ಯವಾಗಿ 'ಹ್ರೀಂ' ಕಾರದಲ್ಲಿರುವ 'ಹ' ಕಾರವು ಪರಬ್ರಹ್ಮದ ಸತ್ಸ್ವರೂಪವಾದ ಅದ್ವಿತೀಯತ್ವವನ್ನೂ, 'ರ' ಕಾರವು ಪರಬ್ರಹ್ಮನ ಚಿತ್ಸ್ವರೂಪವಾದ ಸ್ವಪ್ರಕಾಶತ್ವವನ್ನೂ, 'ಈ' ಕಾರವು ಪರಬ್ರಹ್ಮದ ಆನಂದತ್ವವನ್ನೂ, 'ಂ' ಬಿಂದುವು ಪರಬ್ರಹ್ಮರೂಪವಾಗಿಯೇ ಇರುವ ಬ್ರಹ್ಮಾಂಡದ ಬೀಜಶಕ್ತಿಯನ್ನೂ

ಪ್ರತಿಪಾದಿಸುವುವು. ಪರಬ್ರಹ್ಮಕ್ಕೆ ಸತ್, ಚಿತ್, ಆನಂದ ಮತ್ತು ಬ್ರಹ್ಮಾಂಡದ ಬೀಜಶಕ್ತಿರೂಪಗಳು ಸ್ವಾಭಾವಿಕವಾದುದೇ ವಿನಹ ಒಂದಕ್ಕೊಂದು ವಿಶೇಷಣ ವಾದ ಗುಣವಲ್ಲ. ಅಲ್ಲದೆ ಪರಬ್ರಹ್ಮ ವ್ಯತಿರಿಕ್ತವಾದ ಎರಡನೆಯದು ಯಾವುದೂ ಇಲ್ಲ. ಪರಬ್ರಹ್ಮವೆಂದರೆ ಜಗತ್ತಿನ ಬೀಜಶಕ್ತಿರೂಪವಾದ ಸಚ್ಚಿದಾನಂದ ಸ್ವರೂಪವೇ ಆಗಿರುವುದು. ಸೃಷ್ಟಿಗೆ ಪೂರ್ವದಲ್ಲಿ ಪರಬ್ರಹ್ಮವೊಂದೇ ಇತ್ತೆಂದು ತಿಳಿಸುವ "ಸದೇವಸೋಮ್ಯೇದಮಗ್ರ ಆಸೀತ್" ಮತ್ತು "ಆತ್ಮಾವಾ ಇದಮೇಕ ಏವಾಗ್ರ ಆಸೀತ್" ಎಂಬ ಶ್ರುತಿವಾಕ್ಯಗಳಂತೆ ಬ್ರಹ್ಮಾಂಡದ ಬೀಜಶಕ್ತಿರೂಪ ವಾಗಿಯೂ ಸಚ್ಚಿದಾನಂದರೂಪವಾಗಿಯೂ ಪರಬ್ರಹ್ಮವಿತ್ತೆಂದೇ ತಾತ್ಪರ್ಯ ವಾಗಿರುವುದು. ಈ ಮೇಲಿನ ತತ್ವಸಮರ್ಥನೆಗಳಿಂದ 'ಹ್ರೀಂ' ಬೀಜಾಕ್ಷರ ಸ್ವರೂಪಳಾದ ಶ್ರೀಲಲಿತಾಮಹಾತ್ರಿಪುರಸುಂದರೀ ಜಗನ್ಮಾತೆಯು ಸಾಕ್ಷಾತ್ ಪರಬ್ರಹ್ಮಸ್ವರೂಪಿಣಿಯೇ ಆಗಿರುವಳು. ಈ ತತ್ವಸಮರ್ಥನೆಗೆ ತ್ರಿಪುರಾತಾಪಿ ನ್ಯುಪನಿಷತ್ತಿನಲ್ಲಿ

> "ಪರಂಜ್ಯೋತಿರಮಲಂ ಹೃದಿದ್ಯೈವತಂ ಚೈತನ್ಯಸ್ಫುಲಿಙ್ಗಂ ಹೃದಯಾ ಗಾರವಾಸಿನೀ ಹೃಲ್ಲೇಖೇತ್ಯಾದಿನಾಸ್ಪಷ್ಟಂ"

ತಾತ್ಪರ್ಯ—ಹಕಾರದಿಂದ ಪ್ರಾರಂಭವಾಗಿ ಅನುಸ್ವಾರವೇ ಅಂತ್ಯವಾಗುಳ್ಳ ಹೃಲ್ಲೇಖೆಯಿಂದ ಅಂದರೆ ಹ್ರೀಂಕಾರದಿಂದ ಸ್ಪಷ್ಟವಾಗುವುದೇನೆಂದರೆ-ದೇವಿಯು ಪರಂಜ್ಯೋತಿಸ್ವರೂಪಿಣಿಯು ನಿಷ್ಕಲ್ಮಷಳು ಹೃದಯದಲ್ಲಿರತಕ್ಕ ದೇವತೆಯು ಚೈತನ್ಯಸ್ವರೂಪಳು ಹೃದಯವೆಂಬ ಗುಹೆಯಲ್ಲಿ ವಾಸಮಾಡುವವಳು. ಎಂದು ಹೇಳಿದೆ.

ಅಲ್ಲದೆ ಹ್ರೀಂ ಬೀಜಾಕ್ಷರಸ್ವರೂಪಿಣಿಯಾದ ಶ್ರೀಲಲಿತಾಮಹಾತ್ರಿಪುರ ಸುಂದರೀ ಜಗನ್ಮಾತೆಗೆ ತ್ರಿಪುರಸುಂದರೀ ಎಂಬ ಮಹಿಮೆಯು ಇರುವ ತತ್ವಕ್ಕೆ ತ್ರಿಪುರಾತಾಪಿನ್ಯುಪನಿಷತ್ತಿನಲ್ಲಿ

> "ತ್ರಿಪುರಾಭಿದಾ ಭಗವತೀತ್ಯೇವಮಾದಿಶಕ್ತ್ಯಾ ಭೂರ್ಭುವಸ್ತ್ರೀಣಿ ಸ್ವರ್ಗ ಭೂಪಾತಾಳಾನಿ ಹರಮಾಯಾತ್ಮಕೇನ ಹ್ರೀಂಕಾರೇಣ ಹೃಲ್ಲೇಖಾಖ್ಯಾ ಭಗವತೀ ತ್ರಿಕೂಟಾವಸಾನೇ ನಿಲಯೇ ವಿಲಯೇಧಾಮ್ನಿ ಮಹಸಃಘೋ ರೇಣ ವ್ಯಾಪ್ನೋತಿ ಸ್ವೈವೇಯಂ ಭಗವತೀ ತ್ರಿಪುರೇತಿ ವ್ಯಾಪಠ್ಯತೆ!"

**ತಾತ್ಪರ್ಯ**—ತ್ರಿಪುರಾ ಎಂಬ ಹೆಸರಿನಿಂದ ಕೂಡಿದ ಪೂಜ್ಯಳಾದ ಜಗ ನ್ಮಾತೆಯು ಸ್ವರ್ಗ ಮರ್ತ್ಯ ಪಾತಾಳ ಲೋಕಗಳಾದ ಭೂರ್ಭುವಸ್ಸುವರ್ಲೋಕ ಗಳೆಂಬ ಮೂರು ಲೋಕಗಳನ್ನು ಈಶ್ವರ ಮಾಯೆಯಿಂದ ಕೂಡಿದ ಹ್ರೀಂಕಾರ

ದಿಂದ ಆವರಿಸಿ ಹೃಲ್ಲೇಖವೆಂದರೆ ಹಕಾರದಿಂದ ಪ್ರಾರಂಭವಾಗತಕ್ಕ ಹ್ರೀಂಕಾರ ದಿಂದ ಕರೆಯಲ್ಪಡತಕ್ಕವಳಾಗಿರುವಳು. ತ್ರಿಕೂಟವೆಂಬ ಹೆಸರುಳ್ಳ ಲಯವರ್ಜಿತ ವಾದ ಸ್ಥಳದಲ್ಲಿ (ಸಹಸ್ರಾರಕಮಲದಲ್ಲಿ) ಪೂಜ್ಯಳಾದ ಭಗವತಿಯು ಅದ್ಭುತವಾದ ಶಕ್ತಿಯಿಂದ ವ್ಯಾಪಿಸಿರುತ್ತಾಳೆ. ಆದುದರಿಂದ ಅವಳೇ ಪೂಜ್ಯಳಾದ ಮಹಾತ್ರಿಪುರ ಸುಂದರೀ ಪರದೇವತೆಯಾಗಿರುತ್ತಾಳೆ. ಎಂದು ಹೇಳಿದೆ.

ಆದುದರಿಂದ ಹ್ರೀಂ ಬೀಜಾಕ್ಷರಸ್ವರೂಪಿಣಿಯಾದ ಶ್ರೀಲಲಿತಾಮಹಾತ್ರಿ ಪುರಸುಂದರೀ ದೇವಿಯೆಂದರೆ ಸಾಕ್ಷಾತ್ ಪರಬ್ರಹ್ಮವಸ್ತುವೇ ಆಗಿದೆ.

ಶ್ರೀಲಲಿತಾಮಹಾತ್ರಿಪುರಸುಂದರೀ ಬೀಜಮಂತ್ರವಾದ 'ಹ್ರೀಂ' ಕಾರಕ್ಕೂ 'ಓಂ'ಕಾರಕ್ಕೂ ಭೇದವಿಲ್ಲ. ಇವೆರಡೂ ಏಕತತ್ವಾರ್ಥವಾದವುಗಳಾಗಿವೆ. ಹ್ರೀಂನಲ್ಲಿ ಹ, ರ, ಈ, ೦, ಎಂದು ಮೂರು ಅಕ್ಷರಗಳೂ ಅನುಸ್ವಾರವೂ ಇರುವಂತೆ ಓಂಕಾರ ದಲ್ಲೂ ಅ, ಉ, ಮ, ೦ ಎಂದು ಮೂರು ಅಕ್ಷರಗಳೂ ಅನುಸ್ವಾರವೂ ಇರುವುವು. ಓಂ ಎಂಬ ಏಕಾಕ್ಷರದಲ್ಲಿ ಓಕಾರ ಮತ್ತು ಬಿಂದುಗಳಿರುತ್ತವೆ ಓಂಕಾರವನ್ನು ಬಿಡಿ ಸಿದರೆ ಅ, ಉ, ಮ ೦, ಎಂಬುವುಗಳಾಗುತ್ತವೆ. ಅ, ಉ, ಮ ಸೇರಿದರೆ ಓಂಕಾರ ವಾಗುವುದೆಂದು ತಿಳಿಯಬಾರದು. ಜೊತೆಯಲ್ಲಿ ಬಿಂದುವು ಇದ್ದರೇನೆ ಓಂಕಾರ ವಾಗುವುದು. ಆಕಾರ ಉಕಾರದಲ್ಲಿ ಸೇರಿದರೆ ಓಕಾರವಾಗುವುದು ಓಕಾರದ ಜೊತೆಗೆ ಮ ಸೇರಿದರೆ 'ಓಮ' ಆಗುವುದು. ಆದುದರಿಂದ ಜೊತೆಗೆ ಅನುಸ್ವಾರವು ಬಂದೇಬರ ಬೇಕು. ಮ ಅಕ್ಷರವನ್ನು ಅರ್ಧಾಕ್ಷರ ಮಾಡಿಕೊಂಡರೆ ಮ್ ಎಂದಾಗಿ ಅರ್ಧಾ ಕ್ಷರಕ್ಕೆ ಬೆಲೆಯೇ ಇಲ್ಲ. ಅಲ್ಲದೆ ಮ್ ಎಂಬುದನ್ನು ಓ ಅಕ್ಷರದ ಜೊತೆಗೆ ಸೇರಿಸಿದರೆ 'ಓಮ್' ಆಗುವುದು. ಓಮ್ ಎನ್ನುವುದು ಶಾಸ್ತ್ರಸಮ್ಮತವಲ್ಲ. ಓಂಕಾರದ ಜೊತೆಗೆ ಅನುಸ್ವಾರವನ್ನು ಸೇರಿಸುವ ಓಂ ಎನ್ನುವುದೇ ಶಾಸ್ತ್ರಸಮ್ಮತವಾದುದು. ಆದುದರಿಂದ ಅನುಸ್ವಾರವು (೦) ಸೇರಲೇಬೇಕು. ಮಕಾರದ ಜೊತೆಗೆ ಅನು ಸ್ವಾರವನ್ನು ಸೇರಿಸಿ ಉಚ್ಚರಿಸಿದರೂ ಅನುಸ್ವಾರದ ಶಬ್ದವೇ ನಿಲ್ಲುವುದು. ಆದುದರಿಂದ ಹ್ರೀಂ ನಲ್ಲಿ ಹ, ರ, ಈ, ೦ ಗಳು ಹೇಗಿವೆಯೋ ಓಂ ನಲ್ಲು ಅ, ಉ, ಮ, ೦ ಗಳು ಇದ್ದೇ ಇವೆ. ಹ್ರೀಂಕಾರದಲ್ಲಿರುವ ಹ, ರ, ಈ, ೦, ಅಕ್ಷರಗಳು ಹೇಗೆ ಪರಬ್ರಹ್ಮದ ಸಚ್ಚಿದಾನಂದತ್ವವನ್ನು ಪ್ರತಿಪಾದಿಸುವುವೊ ಹಾಗೆಯೇ ಓಂಕಾರದಲ್ಲಿರುವ ಅ, ಉ, ಮ, ೦, ಗಳು ಪರಬ್ರಹ್ಮದ ಸಚ್ಚಿದಾನಂದತ್ವವನ್ನೇ ಪ್ರತಿಪಾದಿಸುತ್ತವೆ. ಈ ತತ್ವಸಮರ್ಥನೆಗೆ ಅಕ್ಷಮಾಲಿಕೋಪನಿಷತ್ತಿನಲ್ಲಿ

ಓಂ ಅಂಕಾರ ಮೃತ್ಯುಂಜಯ ಸರ್ವವ್ಯಾಪಕ ಪ್ರಥಮೇಕ್ಷೇ ಪ್ರತಿತಿಷ್ಠ ।<br>
ಓಂ ಉಂಕಾರ ಸರ್ವಬಲಪ್ರದ ಸಾರತರ ಪಂಚಮೇಕ್ಷೇ ಪ್ರತಿತಿಷ್ಠ ।<br>
ಓಂ ಮಂಕಾರ ವಿದ್ವೇಷಿ ಮೋಹನಕರ ಏಕಚತ್ವಾರಿಂಶೇಕ್ಷೇ ಪ್ರತಿತಿಷ್ಠ ।

**ತಾತ್ಪರ್ಯ**—ಅಕಾರವು ಯಾವ ವಿಕಾರಕ್ಕೂ ಸೇರದ ಅಮೃತಸ್ವರೂಪವಾದುದು ಸರ್ವವ್ಯಾಪಕವಾದುದೂ ಆಗಿ ಅಕ್ಷರಗಳಲ್ಲಿ ಪ್ರಥಮವಾದುದಾಗಿದೆ. ಉಕಾರವು ಸರ್ವಬಲಕ್ಕೂ ಬೀಜರೂಪವಾಗಿಯೂ ತುಂಬಿತುಳುಕುತ್ತಿರುವ ಪ್ರಭೆಯುಳ್ಳದ್ದಾಗಿಯೂ ಐದನೇ ಅಕ್ಷರವಾಗಿದೆ. ಮಕಾರವು ದ್ವೇಷರಹಿತವಾಗಿಯೂ ಆನಂದಪರವಶದ ಬೀಜವಾಗಿಯೂ ನಲವತ್ತೊಂದನೇ ಅಕ್ಷರವಾಗಿದೆ. ಎಂದು ಹೇಳಿರುವುದು.

ಓಂಕಾರದಲ್ಲಿನ ಅಕಾರದ ತತ್ವವು ಅವ್ಯಕ್ತ ಮತ್ತು ಸರ್ವವ್ಯಾಪಕವಾದ ಪರಬ್ರಹ್ಮವೇ ಆದುದರಿಂದ ಸತ್ಸ್ವರೂಪವಾದ ಅದ್ವಿತೀಯತ್ವವನ್ನೇ ಪ್ರತಿಪಾದಿಸುವುದು. ಹ್ರೀಂ ನಲ್ಲಿರುವ ಹಕಾರವೂ ಕೂಡ ಸತ್ಸ್ವರೂಪವಾದ ಅದ್ವಿತೀಯತ್ವವನ್ನೇ ಪ್ರತಿಪಾದಿಸುವುದು. ಓಂಕಾರದಲ್ಲಿನ ಉಕಾರವು ಸರ್ವಬಲಕ್ಕೂ ಬೀಜರೂಪವಾಗಿಯೂ ತುಂಬಿತುಳುಕುತ್ತಿರುವ ಪ್ರಭೆಯುಳ್ಳದ್ದಾಗಿಯೂ ಇರುವುದರಿಂದ ಚಿತ್‌ಸ್ವರೂಪವಾದ ಪರಬ್ರಹ್ಮವನ್ನೇ ಪ್ರತಿಪಾದಿಸುವುದು. ಹ್ರೀಂ ನಲ್ಲಿರುವ ರಕಾರವು ಕೂಡ ಪರಬ್ರಹ್ಮದ ಚಿತ್ಸ್ವರೂಪವನ್ನೇ ಪ್ರತಿಪಾದಿಸುವುದು. ಓಂಕಾರದಲ್ಲಿನ ಮಕಾರವು ಆನಂದಪರವಶದ ಬೀಜವಾಗಿ ಇರುವುದರಿಂದ ಪರಬ್ರಹ್ಮದ ಆನಂದತ್ವವನ್ನು ಪ್ರತಿಪಾದಿಸುವುದು. ಹ್ರೀಂ ನಲ್ಲಿರುವ ಈಕಾರವು ಕೂಡ ಪರಬ್ರಹ್ಮದ ಆನಂದತ್ವವನ್ನು ಪ್ರತಿಪಾದಿಸುವುದು. ಹ್ರೀಂಕಾರ ಮತ್ತು ಓಂಕಾರಗಳೆರಡರಲ್ಲೂ ಅನುಸ್ವಾರವಿರುವುದರಿಂದ ಎರಡರಲ್ಲೂ ಅನುಸ್ವಾರದ ತತ್ವವು ಒಂದೇಯಾಗಿರುವುದು. ಆದುದರಿಂದ "ಓಂ ಇತ್ಯೇಕಾಕ್ಷರಂ ಬ್ರಹ್ಮ" ಎಂಬ ಶ್ರುತಿ ಪ್ರಮಾಣದಂತೆ ಓಂ ಎಂಬ ಅಕ್ಷರವೇ ಹೇಗೆ ಪರಬ್ರಹ್ಮಸ್ವರೂಪವಾಗಿರುವುದೊ ಹಾಗೆಯೇ ಈ ಪ್ರಕರಣದ ಪ್ರಥಮದಾರಭ್ಯ ಆಧಾರವಾಕ್ಯಗಳೊಡನೆ ವಿವರಿಸಿರುವಂತೆ ಹ್ರೀಂ ಎಂಬ ಏಕಾಕ್ಷರವೂಕೂಡ ಪರಬ್ರಹ್ಮಸ್ವರೂಪವಾಗಿದೆ. ಆದುದರಿಂದ ಹ್ರೀಂ ಬೀಜಾಕ್ಷರಸ್ವರೂಪಳಾದ ಶ್ರೀಲಲಿತಾಮಹಾತ್ರಿಪುರಸುಂದರೀ ಜಗನ್ಮಾತೆಯು ಸಾಕ್ಷಾತ್ ಪರಬ್ರಹ್ಮಸ್ವರೂಪಿಣಿಯೆಂಬುದು ನಿಸ್ಸಂಶಯವಾದ ವಿಚಾರವಾಗಿರುವುದು.

———

ಶ್ರೀ.

## ಮೂರನೆಯ ಪ್ರಕರಣ.

# ಶ್ರೀಲಲಿತಾಮಂತ್ರದ ಪ್ರಥಮಪಾದದ ತತ್ವಾರ್ಥ.

## ಕ, ಏ, ಈ, ಲ, ಹ್ರೀಂ

---

ಇದುವರೆಗೂ ಶ್ರೀಲಲಿತಾಮಹಾತ್ರಿಪುರಸುಂದರೀ ಜಗನ್ಮಾತೆಯ ಬೀಜಾಕ್ಷರವೆನಿಸಿದ ಹ್ರೀಂಕಾರದ ಮಹತ್ತನ್ನು ತಿಳಿಸಿತು. ಮಂತ್ರದ ಪ್ರಥಮ ಪಾದವಾದ **ಕ, ಏ, ಈ, ಲ, ಹ್ರೀಂ** ಎಂಬ ಅಕ್ಷರಗಳ ರಹಸ್ಯಾರ್ಥವನ್ನು ವಿವರಿಸೋಣ. ಶ್ರೀಲಲಿತಾಪಂಚದಶಾಕ್ಷರೀ ಮಂತ್ರದ ಅಂತ್ಯದಲ್ಲೆಂದರೆ ಹದಿನೈದನೇ ಅಕ್ಷರವಾಗಿರುವ ಹ್ರೀಂ ಬೀಜಾಕ್ಷರವೇ ಯಾವ ಸೃಷ್ಟಿಯೂ ಇಲ್ಲದಿರುವ ಕಾಲವಾಗಿ ಪರಬ್ರಹ್ಮ ಒಂದೇ ಇರುವಸ್ಥಿತಿಯ ಪ್ರತಿಪಾದಕವಾಗಿರುವುದು. ಬೀಜವು ಮೊಳಕೆಯಾಗಿ ವೃಕ್ಷದ ಸ್ಥಿತಿಗೆ ಬಂದು ವೃಕ್ಷದಿಂದ ಪುನಃ ಬೀಜರೂಪಕ್ಕೆ ಬರುವಂತೆ ಪರಬ್ರಹ್ಮಸ್ವರೂಪದಲ್ಲಿ ಬೀಜರೂಪವಾಗಿದ್ದ ಸೃಷ್ಟಿಕ್ರಮವನ್ನನುಸರಿಸಿ ವ್ಯಕ್ತಸ್ಥಿತಿಯಾದ ಜಗದ್ರೂಪಕ್ಕೆ ಬರುವುದು. ಲಯಕಾಲದಲ್ಲಿ ಜಗತ್ತು ಅವ್ಯಕ್ತಸ್ಥಿತಿಗೆ ಬಂದು ಪುನಃ ಪರಬ್ರಹ್ಮದಲ್ಲಿ ಅಭೇದದಿಂದ ಅಡಗುವುದು ಮಂತ್ರದ ಅಂತ್ಯದಲ್ಲೆಂದರೆ ಹದಿನೈದನೇ ಅಕ್ಷರವಾದ ಹ್ರೀಂ ಬೀಜಾಕ್ಷರವು ಯಾವ ಸೃಷ್ಟಿಯೂ ಇಲ್ಲದ ಕಾಲವಾದ ಪರಬ್ರಹ್ಮವೊಂದೇ ಇರುವ ಸ್ಥಿತಿಯುಷ್ಟೆ? ಪರಬ್ರಹ್ಮರೂಪವಾದ ಹ್ರೀಂ ಬೀಜಾಕ್ಷರದಿಂದ ಸೃಷ್ಟಿಗೆ ಪ್ರಾರಂಭವಾಗುವ ತತ್ವಪ್ರತಿಪಾದನೆಯೇ ಮಂತ್ರದ ಪ್ರಥಮಪಾದದಲ್ಲಿರುವ ನಾಲಕ್ಕು ಅಕ್ಷರಗಳ ತತ್ವವಾಗಿರುವುದು ಮಂತ್ರದ ಪ್ರಥಮಪಾದದ ಅಂತ್ಯದಲ್ಲಿ ಹ್ರೀಂ ಬೀಜಾಕ್ಷರವು ಇರುವುದರ ತತ್ವಸೂಚನೆಯೇ ಸೃಷ್ಟಿಯ ಪೂರ್ಣತ್ವವನ್ನು ಪ್ರತಿಪಾದಿಸುವುದಾಗಿದೆ

ಸೃಷ್ಟಿಯಾದ ಜಗತ್ತು ವ್ಯಾಪಾರದ ಸ್ಥಿತಿಯನ್ನು ಹೊಂದಲೇಬೇಕು. ಸೃಷ್ಟಿಯಾದುದು ವ್ಯಾಪಾರದ ಸ್ಥಿತಿಯನ್ನು ಹೊಂದುವ ತತ್ವಪ್ರತಿಪಾದಕವಾಗಿಯೇ ಮಂತ್ರದ ಎರಡನೆಯ ಪಾದದ ಹ, ಸ, ಕ, ಹ, ಲ, ಹ್ರೀಂ, ಎಂಬ ಅಕ್ಷರಗಳು ಇರುವುದಾಗಿವೆ ಸೃಷ್ಟಿಯಾಗಿ ಸ್ಥಿತಿಯನ್ನು ಪಡೆದ ಜಗತ್ತು ಲಯಕಾಲವನ್ನನುಸರಿಸಿ ಲಯವನ್ನು ಪಡೆಯುವುದರ ತತ್ವಪ್ರತಿಪಾದಕವಾಗಿಯೇ ಮಂತ್ರದ ಅಂತ್ಯಪಾದದ ಸ, ಕ, ಲ, ಹ್ರೀಂ, ಎಂಬ ಅಕ್ಷರಗಳು ಇರುವುವಾಗಿವೆ. ಸೃಷ್ಟಿಯ ಪೂರ್ಣತ್ವದ ತತ್ವಪ್ರತಿಪಾದಕವಾಗಿ ಮಂತ್ರದ ಪ್ರಥಮಪಾದದ ಅಂತ್ಯದಲ್ಲಿ

ಹ್ರೀಂಕಾರವಿದೆ. ವ್ಯಾಪಾರದ ಪೂರ್ಣತತ್ವಪ್ರತಿಪಾದಕವಾಗಿ ಮಂತ್ರದ ದ್ವಿತೀಯ ಪಾದದ ಅಂತ್ಯದಲ್ಲಿ ಹ್ರೀಂಕಾರವಿದೆ. ಲಯದ ಪೂರ್ಣತೆಯ ತತ್ವಪ್ರತಿಪಾದಕ ವಾಗಿ ಮಂತ್ರದ ತೃತೀಯಪಾದದ ಅಂತ್ಯದಲ್ಲಿ ಹ್ರೀಂಕಾರವು ಇರುವುದಾಗಿದೆ. ಲಯವೆಂದರೆ ಸೃಷ್ಟಿಸ್ಥಿತಿಗಳೆರಡೂ ಲಯವನ್ನು ಪಡೆಯಬೇಕಾದುದರಿಂದ ಸರ್ವವೂ ಮಂತ್ರದ ಅಂತ್ಯದಲ್ಲಿರುವ ಹ್ರೀಂ ಬೀಜಾಕ್ಷರ ಪ್ರತಿಪಾದ್ಯವಾದ ಪರಬ್ರಹ್ಮದಲ್ಲಿ ಲಯವಾಗುವುವು. ಆದುದರಿಂದ ಲಯದ ಅನಂತರ ಹ್ರೀಂಕಾರ ಪ್ರತಿಪಾದ್ಯ ವಾದ ಪರಬ್ರಹ್ಮವೇ ಉಳಿಯುವುದು. ಆದುದರಿಂದಲೇ ಮಂತ್ರದ ಅಂತ್ಯ ದಲ್ಲಿರುವ ಹ್ರೀಂಕಾರವು ಪರಬ್ರಹ್ಮವೊಂದೇ ಇರುವ ತತ್ವಪ್ರತಿಪಾದಕವಾಗಿರುವುದು. ಪುನಃ ಸೃಷ್ಟಿಗೆ ಪ್ರಾರಂಭವಾದಾಗ ಮಂತ್ರದ ಪ್ರಥಮಾಕ್ಷರದ ತತ್ವದಿಂದ ಉದಯ ವಾಗುವುದು. ಶ್ರೀ ಗಾಯತ್ರೀ ಮಂತ್ರದಂತೆಯೇ ಶ್ರೀ ಲಲಿತಾಮಂತ್ರವು ಕೂಡ ಮೂರು ಪಾದಗಳುಳ್ಳದ್ದಾಗಿದೆ ಮತ್ತು ಮೂರು ಪಾದಗಳ ತತ್ವಗಳೂ ಸೃಷ್ಟಿ, ಸ್ಥಿತಿ, ಲಯಗಳ ತತ್ವಗಳಾಗಿವೆ.

ಮೇಲೆ ವಿವರಿಸಿರುವ ತತ್ವಗಳಿಂದ ಮಂತ್ರದ ಪ್ರಥಮಾಕ್ಷರವಾದ "ಕ" ಅಕ್ಷರದಿಂದ ಸೃಷ್ಟಿಗೆ ಪ್ರಾರಂಭವಾಗುವುದು. ಮಂತ್ರದ ಪ್ರಥಮಪಾದದಲ್ಲಿರುವ ಕ, ಏ, ಈ, ಲ, ಎಂಬ ನಾಲಕ್ಕು ಅಕ್ಷರಗಳ ತತ್ವಕ್ಕೂ ಕ್ರಮವಾಗಿ ಶಿವಃ, ಶಕ್ತಿಃ, ಕಾಮಃ, ಕ್ಷಿತಿಃ ಎಂಬದಾಗಿ ಶ್ರೀ ಶಂಕರಭಗವತ್ಪಾದರವರು ಸೌಂದರ್ಯಲಹರಿಯಲ್ಲಿ ವಿವರಿಸಿರುತ್ತಾರೆಂದು ಹಿಂದೆಯೇ ತಿಳಿಸಿದೆ. ಮಂತ್ರದ ಪ್ರಥಮಪಾದದ ಅಕ್ಷರ ಗಳಿಗೆ ಸರಿಯಾಗಿ ಶಿವಃ, ಶಕ್ತಿಃ, ಕಾಮಃ, ಕ್ಷಿತಿಃ ಎಂಬುವುಗಳು ಇರುವುದರ ತತ್ವವೇನೆಂದರೆ—ಸೃಷ್ಟಿಗೆ ಪೂರ್ವದಲ್ಲಿ ಪರಬ್ರಹ್ಮಮಾತ್ರವೇ ಇತ್ತೆಂಬ ತತ್ವ ಪ್ರತಿಪಾದಕವಾಗಿ ಮಂತ್ರಾಂತ್ಯದಲ್ಲಿರುವ ಹ್ರೀಂ ಬೀಜಾಕ್ಷರವಿರುವುದೆಂದು ತಿಳಿಸಿತಷ್ಟೆ? ಪರಬ್ರಹ್ಮದಲ್ಲಿರತಕ್ಕ ಸೃಷ್ಟಿಸಬೇಕೆಂಬ ಸಂಕಲ್ಪದ ಶಕ್ತಿಗೆ ಸ್ಪಂದನ ವುಂಟಾಗಿ ಅಂದರೆ ಹ್ರೀಂ ಬೀಜಾಕ್ಷರದಲ್ಲಿರುವ ಮನ್ಮಥಬೀಜಶಕ್ತಿಯಾದ ಈ ಕಾರಕ್ಕೆ ಸ್ಪಂದನವುಂಟಾಗಿ ಪರಬ್ರಹ್ಮಶಕ್ತಿಯೆಂದರೆ ಚಿಚ್ಛಕ್ತಿಯು (ಹ್ರೀಂ ನಲ್ಲಿರುವ ರಕಾರದಶಕ್ತಿ) ಹೊರಉದಯಿಸಿ ತ್ರಿಗುಣಾತ್ಮಿಕವಾದ ಮೂಲಪ್ರಕೃತಿ ಎನಿಸುವುದು. ಈ ತ್ರಿಗುಣಾತ್ಮಿಕವಾದ ಮೂಲಪ್ರಕೃತಿಯಲ್ಲಿ ಪರಬ್ರಹ್ಮಚೈತನ್ಯವು ಪ್ರತಿಫಲಿಸು ವುದು. ತ್ರಿಗುಣಾತ್ಮಿಕವಾದ ಮೂಲಪ್ರಕೃತಿಯು ಕಾರ್ಯಭೇದಗಳಿಗೋಸ್ಕರ ಸತ್ವರಜಸ್ತಮೋಗುಣಗಳ ವಿಭಾಗವಾಗುವುದು. ಈ ಸತ್ವರಜಸ್ತಮೋಗುಣ ಗಳಲ್ಲಿನ ಶುದ್ಧಸತ್ವಗುಣದಲ್ಲಿ ಪರಬ್ರಹ್ಮಚೈತನ್ಯವು ಪ್ರತಿಫಲಿಸಿ ಈಶ್ವರನೆನಿಸಿ ಕೊಳ್ಳುವುದು. ಈ ಈಶ್ವರನೇ ಶ್ರೀಲಲಿತಾಮಂತ್ರದ ಪ್ರಥಮಾಕ್ಷರವಾದ "ಕ" ಅಕ್ಷರದ ತತ್ವದಲ್ಲಿರುತ್ತಾನೆ. ಆದುದರಿಂದಲೇ ಶ್ರೀ ಶಂಕರಭಗವತ್ಪಾದರವರು ಕ ಅಕ್ಷರದ ವಿವರಣೆಯಾಗಿ ಶಿವಃ ಎಂದು ಹೇಳಿರುವರು.

ಪರಬ್ರಹ್ಮಚೈತನ್ಯವು ಶುದ್ಧಸತ್ವಗುಣದಲ್ಲಿ ಪ್ರತಿಫಲಿಸಿ ಈಶ್ವರನೆನಿಸಿಕೊಂಡಿತಷ್ಟೆ? ರಜಸ್ತಮೋಗುಣಗಳೊಡನೆ ಬೆರೆಯದೇ ಇರುವ ಈ ಶುದ್ಧಸತ್ವಗುಣವು ಅತ್ಯಂತ ಶ್ರೇಷ್ಠವಾದುದು. ಚಿಚ್ಛಕ್ತಿಯ ಮಹತ್ವವನ್ನೆಲ್ಲಾ ಒಳಗೊಂಡು ದೇವತಾತ್ಮಕವಾದ ಇಚ್ಛಾಜ್ಞಾನ ಕ್ರಿಯಾಶಕ್ತಿಯಾಗಿ ಶುದ್ಧಸತ್ವಪ್ರಧಾನಮಾಯೆಯೆನಿಸಿಕೊಂಡಿತು. ಈ ಶುದ್ಧಸತ್ವಪ್ರಧಾನಮಾಯಾಶಕ್ತಿಯೇ ಶ್ರೀಲಲಿತಾಮಂತ್ರದ ಎರಡನೇ ಅಕ್ಷರವಾದ ಏ ಅಕ್ಷರದ ತತ್ವವಾಗಿದೆ. ಆದುದರಿಂದಲೇ ಶ್ರೀ ಶಂಕರಭಗವತ್ಪಾದರವರು ಮಂತ್ರದ ಎರಡನೆಯ ಅಕ್ಷರವಾದ ಏ ಅಕ್ಷರದ ತತ್ವವಾಗಿ ಶಕ್ತಿಃ ಎಂದು ಹೇಳಿರುವರು.

ಶ್ರೀಲಲಿತಾಮಂತ್ರದ ಮೂರನೇ ಅಕ್ಷರವಾದ 'ಈ' ಮತ್ತು ಇದರ ವಿವರಣೆಯಾದ ಶ್ರೀ ಶಂಕರಭಗವತ್ಪಾದರವರು ಹೇಳಿರುವ ಕಾಮಃ ಎಂಬುದರ ತತ್ವವೇನೆಂದರೆ—ಹ್ರೀಂ ಬೀಜಾಕ್ಷರದಲ್ಲಿರುವ ಹ ಅಕ್ಷರದ ತತ್ವವಾದ ಶುದ್ಧಸತ್ಸ್ವರೂಪವಾದ ಪರಬ್ರಹ್ಮಚೈತನ್ಯವು ರಸಕನ್ನಡಿಯಿಂದ ಪ್ರತಿಫಲನ ಪ್ರಕಾಶವುಂಟಾಗುವಂತೆ ಶುದ್ಧಸತ್ವದಲ್ಲಿ ಪ್ರತಿಫಲಿಸಿ ಪ್ರತಿಫಲಿತಚೈತನ್ಯವಾಗಿ ಈಶ್ವರನೆನಿಸಿಕೊಂಡು ಮಂತ್ರದ ಪ್ರಥಮಾಕ್ಷರವಾದ ಕ ಅಕ್ಷರದ (ಶಿವಃ) ತತ್ವವಾಗಿ ನಿಂತಿತು. ಹ್ರೀಂ ಬೀಜಾಕ್ಷರದಲ್ಲಿರುವ ರಕಾರದ. ತತ್ವವಾದ ಚಿತ್ಸ್ವರೂಪದಿಂದ ಚಿಚ್ಛಕ್ತಿಯು ಉದಯಿಸಿ ಶುದ್ಧಸತ್ವಪ್ರಧಾನಮಾಯೆ ಎನಿಸಿಕೊಂಡು ಮಂತ್ರದ ದ್ವಿತೀಯಾಕ್ಷರವಾದ ಏ ಅಕ್ಷರದ (ಶಕ್ತಿಃ) ತತ್ವವಾಗಿ ನಿಂತಿತು. ಹ್ರೀಂ ಬೀಜಾಕ್ಷರದಲ್ಲಿನ ಈ ಅಕ್ಷರದತತ್ವವಾದ ಮನ್ಮಥಬೀಜಕ್ಕೆ ಕಾರಣಭೂತವಾದ ಆನಂದವು ಸೃಷ್ಟಿಕಾರ್ಯದ ಸಂಕಲ್ಪಕ್ಕೋಸ್ಕರ ಮನ್ಮಥಬೀಜವನ್ನು ಸ್ಪಂದನದಿಂದ ಉದ್ಬೋಧೆಮಾಡಿ ಶುದ್ಧಸತ್ವಪ್ರಧಾನಮಾಯೆಯು ಮತ್ತು ಈಶ್ವರನ ಸೃಷ್ಟಿಯನ್ನುಂಟುಮಾಡಿತು. ಅಂದರೆ ಪರಬ್ರಹ್ಮದ ಸೃಷ್ಟಿ ಸಂಕಲ್ಪದ ಶಕ್ತಿಯಿಂದ (ಈ, ಅಕ್ಷರದ ತತ್ವದಿಂದ) ಶಿವ, ಶಕ್ತಿಗಳೆರಡೂ ಉಂಟಾಯಿತು. ಪರಬ್ರಹ್ಮದ ಸೃಷ್ಟಿಸಂಕಲ್ಪವು ಹೀಗೆ ಸೃಷ್ಟಿಯನ್ನುಂಟುಮಾಡಿ ಮುಂದಿನ ಕಾರ್ಯಕ್ಕೋಸ್ಕರ ಶುದ್ಧಸತ್ವಮಾಯೆ ಮತ್ತು ಈಶ್ವರನ ಜೊತೆಯಲ್ಲಿಯೇ ತಾನೂ ಅವತರಿಸಿ ಮಂತ್ರದ ಮೂರನೇ ಅಕ್ಷರವಾದ ಈ ಅಕ್ಷರದ ತತ್ವವಾಗಿ ಕಾಮಃ ಎಂದು ಕರೆಯಲ್ಪಡುವುದು. ಅಂದರೆ ಸಚ್ಚಿದಾನಂದತತ್ವದ ಆನಂದದಲ್ಲಿರುವ ಮನ್ಮಥ ಬೀಜವೇ ವ್ಯಕ್ತಸ್ಥಿತಿಯನ್ನು ಪಡೆದು ಕಾಮಃ ಎಂದು ಕರೆಯಲ್ಪಟ್ಟು ಮುಂದಿನ ಕಾರ್ಯಕ್ಕೋಸ್ಕರ ಈಶ್ವರನ ಜೊತೆಯಲ್ಲಿ ಇರುವುದು. ಹ್ರೀಂ ಬೀಜಾಕ್ಷರದಲ್ಲಿರುವ ಈಕಾರಾಕ್ಷರವೇ ಇಲ್ಲೂ ಈಕಾರವಾಗಿ ನಿಂತಿರುವುದು.

ಶ್ರೀಲಲಿತಾಮಂತ್ರದ ಪ್ರಥಮಪಾದದ ಕ, ಏ, ಈ ಎಂಬ ಮೂರು ಅಕ್ಷರಗಳ ವಿಚಾರಗಳನ್ನು ಮೇಲೆ ತಿಳಿಸಿತು. ನಾಲಕ್ಕನೆಯ ಅಕ್ಷರವಾದ ಲ ಅಕ್ಷರ

ಮತ್ತು ಶ್ರೀ ಶಂಕರಭಗವತ್ಪಾದರವರು ಲಕಾರಾಕ್ಷರಕ್ಕೆ ಬರೆದಿರುವ ಕ್ಷಿತಿಃ ಎಂಬು ದರ ತತ್ವವೇನೆಂದರೆ-ಲ ಅಕ್ಷರವು ಪೃಥ್ವೀ ವಾಚಕವಾಗಿರುವುದು. ಇದನ್ನು ಮುಂದೆ ಆಧಾರವಾಕ್ಯಗಳೊಡನೆ ವಿವರಿಸಲ್ಪಡುವುದು. ಲ ಅಕ್ಷರದ ತತ್ವಕ್ಕೆ ಕ್ಷಿತಿಃ ಎಂದು ಶ್ರೀ ಶಂಕರಭಗವತ್ಪಾದರವರೂ ಹೇಳಿರುವುದರಿಂದ ಭೂತತತ್ವ ಅಥವಾ ಪೃಥ್ವೀವಾಚಕವಾದ ಜಗತ್ತೇ ಆಗಿರುವುದು. ಹ್ರೀಂ ಬೀಜಾಕ್ಷರದಲ್ಲಿರುವ ಅನು ಸ್ವಾರವೇ ಸೃಷ್ಟಿಕಾರ್ಯಕ್ಕೋಸ್ಕರ ಅವತರಿಸಿ ಮಂತ್ರದ ನಾಲಕ್ಕನೇ ಅಕ್ಷರವಾದ ಲ ಅಕ್ಷರವಾಗಿ ನಿಂತಿದೆ. ಅಂದರೆ ಹ್ರೀಂ ಬೀಜಾಕ್ಷರದಲ್ಲಿರುವ ಅನುಸ್ವಾರದ ತತ್ವವು ಸರ್ವಪ್ರಕೃತಿ ಭೂತಶಬ್ದಾತ್ಮಕವಾದ ಬೀಜವಾಗಿ ಸೃಷ್ಟಿಲಯಗಳಿಗೆ ಕಾರಣ ವಾದುದೆಂದು ಹಿಂದೆ ತಿಳಿಸಿತಷ್ಟೆ? ಹ್ರೀಂ ಬೀಜಾಕ್ಷರದ ಅನುಸ್ವಾರದಲ್ಲಿ ಅವ್ಯಕ್ತವಾಗಿ ಅಡಗಿದ್ದ ಸರ್ವಪ್ರಕೃತಿಭೂತಗಳೂ ಸೃಷ್ಟಿ ಸಂಕಲ್ಪವನ್ನು ಅನುಸರಿಸಿ ಸ್ಥೂಲವಾದ ಜಗದ್ರೂಪವನ್ನು ಹೊಂದುವಿಕೆಯ ತತ್ವಪ್ರತಿಪಾದನೆಯೇ ಮಂತ್ರದ ನಾಲಕ್ಕನೇ ಅಕ್ಷರವಾಗಿ ಲಕಾರವು ಮತ್ತು ಕ್ಷಿತಿಃ ಎಂಬ ಶ್ರೀ ಶಂಕರಭಗವತ್ಪಾದರವರ ವಿವರ ಣೆಯೂ ಇರುವುದಾಗಿದೆ.

ಇದುವರೆಗೂ ಮಂತ್ರದ ಪ್ರಥಮಪಾದದ ಕ, ಏ, ಈ, ಲ, ಎಂಬ ನಾಲಕ್ಕು ಅಕ್ಷರಗಳ ತತ್ವಗಳನ್ನೂ ಮತ್ತು ಈ ಅಕ್ಷರಗಳ ತತ್ವಗಳು ಮಂತ್ರದ ಅಂತ್ಯದಲ್ಲಿರುವ ಹ್ರೀಂ ಬೀಜಾಕ್ಷರಕ್ಕೆ ಯಾವ ವಿಧವಾದ ಸಂಬಂಧ ಹೊಂದಿರುತ್ತವೆಂಬ ವಿಚಾರ ಗಳನ್ನು ತಿಳಿಸಿತು. ಕ, ಏ, ಈ, ಲ ಎಂಬ ನಾಲಕ್ಕು ಅಕ್ಷರಗಳಿಗೆ ಅನ್ವಯ ವಾಗುವ ಆಧಾರವಾಕ್ಯಗಳನ್ನು ಕೊಟ್ಟು ತತ್ವಗಳನ್ನು ಇನ್ನೂ ಚೆನ್ನಾಗಿ ವಿಶದೀಕರಿ ಸೋಣ. ಮಂತ್ರದ ಪ್ರಥಮಾಕ್ಷರವಾದ ಕ ಎನ್ನುವುದರ ತತ್ವಕ್ಕೆ ಶ್ರೀ ಶಂಕರ ಭಗವತ್ಪಾದರವರು ಶ್ರೀಲಲಿತಾ ತ್ರಿಶತೀಭಾಷ್ಯದಲ್ಲಿ

**ಕಕಾರಃರೂಪಂ ವಾಚಕಂ ಯೇಷಾಂತೇ ಕಕಾರರೂಪಾಃ ।**
**ಹಿರಣ್ಯಗರ್ಭಃ ಉದಕಂ ಉತ್ತಮಾಂಗಂ ಸುಖಾದಿತ್ವ ।**
**ಹಿರಣ್ಯಗರ್ಭನಿಷ್ಠ ಜಗದ್ಧಾರಕತ್ವ ಜಗತ್ಕಾರಕತ್ವಾದಿ ।**
**ಗುಣವತ್ವಂ ಕಕಾರಸ್ಯ ವ್ಯಂಜನಾದಿ ಗುಣವರ್ಣತ್ವೇನ ವರ್ತತಇತಿ ।**

**ತಾತ್ಪರ್ಯ**—ಕಕಾರವು ಯಾರಿಗೆ ರೂಪವಾಗಿಯೂ ಮತ್ತು ವಾಚಕ ವಾಗಿಯೂ ಇರುವುದೋ ಅಂತಹವನಿಗೆ ಕಕಾರರೂಪನು. ಎಂದು ಹೆಸರು. ಕಕಾರವು ಹಿರಣ್ಯಗರ್ಭವನ್ನೂ, ಜಲವನ್ನೂ, ಶಿರಸ್ಸನ್ನೂ, ಮತ್ತು ಸುಖ ಮುಂತಾ ದವುಗಳನ್ನೂ ಪ್ರತಿಪಾದಿಸುತ್ತದೆ. ಹಿರಣ್ಯಗರ್ಭದಲ್ಲಿರತಕ್ಕಂಥ ಜಗತ್ಕಾರಕ ಮತ್ತು ಧಾರಕಶಕ್ತಿಯೇ ಮೊದಲಾದ ಗುಣಗಳು ವ್ಯಂಜನಗಳಲ್ಲಿ ಪ್ರಥಮಾಕ್ಷರ ವಾದುದರಿಂದ ಕಕಾರಕ್ಕೆ ಇರುತ್ತವೆ. ಎಂದು ಹೇಳಿರುತ್ತಾರೆ.

ಮಂತ್ರದ ಪ್ರಥಮಾಕ್ಷರವಾದ ಕ ಅಕ್ಷರಕ್ಕೆ ಮೇಲೆ ವಿವರಿಸಿರುವ ತತ್ವಗಳಿಗೆ ಅನುಸಾರವಾಗಿ ತ್ರಿಪುರಾತಾಪಿನ್ಯುಪನಿಷತ್ತಿನಲ್ಲಿ

"ಕಾಮಂಜಾಯತೆ ನಿರಂಜನೋ ಅಕಾಮತ್ವೇನೋ ಜೃಂಭತೇ ಅ ಕ ಚ ಟ ತ ಪ ಯ ಶಾ ಸೃಜತೇ ತಸ್ಮಾದೀಶ್ವರಃ ಕಾಮೋಭಿಧೀಯತೆ ತತ್ಪರಿಭಾಷಯಾಕಾಮಃ ಕಕಾರಂ ವ್ಯಾಪ್ನೋತಿ ಕಾಮ ಏವೇದಂ ತತ್ತದಿತಿ ಕಕಾರೋ ಗೃಹ್ಯತೆ |"

**ತಾತ್ಪರ್ಯ**—ನಿರಂಜನನಾದ ಈಶ್ವರನು ಯಥೇಚ್ಛವಾಗಿ ಹುಟ್ಟುತ್ತಾನೆ. ನಿಷ್ಕಾಮದಿಂದ ಬೆಳಗುತ್ತಾನೆ. ಅಕಾರಾದಿ ಕ್ಷಕಾರಾಂತ್ಯದವರೆಗಿರುವ ಅ, ಕ, ಚ, ಟ, ತ, ಪ, ಯ, ಶ ವರ್ಗಗಳ ಅಕ್ಷರಗಳ ನಾದೋತ್ಪತ್ತಿಯಿಂದಾಗುವ ಸಕಲ ಬ್ರಹ್ಮಾಂಡದ ಸೃಷ್ಟಿಗೆ ಕಾರಣಭೂತವಾಗಿ ಕಾಮನು ಎಂದು ಕರೆಯಲ್ಪಡುತ್ತಾನೆ. ಆದುದರಿಂದ ಪರಿಭಾಷಾನುಗುಣವಾಗಿ ಈಶ್ವರನು ಕಕಾರವನ್ನು ವ್ಯಾಪಿಸುತ್ತಾನೆ. ಎಂದು ಹೇಳಿದೆ.

ವ್ಯಂಜನಾಕ್ಷರಗಳಿಗೆ ಪ್ರಥಮವಾದ ಕ ಅಕ್ಷರದಲ್ಲಿ ಅಕ್ಷರಗಳಿಗೇ ಪ್ರಥಮವಾದ ಅ ಸ್ವರಾಕ್ಷರವೂ ಸೇರಿರುವುದು. ಅಂದರೆ ಅಕಾರವೂ ಈಶ್ವರತತ್ವಕ್ಕೆ ಅನ್ವಯವು. ಅ ಮತ್ತು ಕ ಅಕ್ಷರಗಳ ಮಹಿಮೆಗೆ ಅಕ್ಷಮಾಲಿಕೋಪನಿಷತ್ತಿನಲ್ಲಿ

ಓಂ ಅಂಕಾರಮೃತ್ಯುಂಜಯ ಸರ್ವವ್ಯಾಪಕ ಪ್ರಥಮೇಕ್ಷೇ ಪ್ರತಿತಿಷ್ಠ |
ಓಂ ಕಂಕಾರ ಸರ್ವವಿಷಹರ ಕಲ್ಯಾಣದ ಸಪ್ತದಶೇಕ್ಷೆ ಪ್ರತಿತಿಷ್ಠ |

ಅಂದರೆ ಅಕಾರವು ಅಮೃತವೂ ಸರ್ವವ್ಯಾಪಕವೂ ಆಗಿ ಅಕ್ಷರಗಳಲ್ಲಿ ಪ್ರಥಮಾಕ್ಷರವಾಗಿದೆ. ಕಕಾರವು ಸರ್ವ ವಿಪತ್ತನ್ನೂ ಸಂಹರಿಸಿ ಕಲ್ಯಾಣಗಳನ್ನು ಕೊಡತಕ್ಕದ್ದಾಗಿ ಹದಿನೇಳನೇ ಅಕ್ಷರವಾಗಿದೆ. ಎಂದು ಹೇಳಿದೆ.

ಕಕಾರಾಕ್ಷರಕ್ಕೆ ಶಿವಃ ಎಂದು ಶ್ರೀ ಶಂಕರಭಗವತ್ಪಾದರವರು ತಿಳಿಸಿರುತ್ತಾರಷ್ಟೆ! ಶಿವಃ ಎನ್ನುವುದರ ಶಬ್ದಾರ್ಥವೂ ತತ್ವಸಮರ್ಥನೆಗೆ ಸಹಕಾರಿಯಾಗಿರುವುದು. ಶಿವಃ ಎಂದರೆ "ಶಾಮ್ಯತಿ ಪರಮಾನಂದ ರೂಪತ್ವಾನ್ನಿರ್ವಿಕಾರೋಭವತೀತಿ ಶಿವಃ" ಪರಮಾನಂದಸ್ವರೂಪನೂ ನಿರ್ವಿಕಾರಿಯೂ ಆದಕಾರಣ ಶಾಂತನಾಗಿರುವನು. "ಶಿವಪ್ರದತ್ವಾದ್ವಾ ಶಿವಃ" ಕಲ್ಯಾಣವನ್ನುಂಟುಮಾಡುವವನು ಶಿವನು. ಆದುದರಿಂದ ಈ ಮೇಲಿನ ಆಧಾರವಾಕ್ಯಗಳಿಂದಲೂ, ಮಂತ್ರದ ಪ್ರಥಮಾಕ್ಷರವಾದ ಕಕಾರವು ಜಗತ್ಸೃಷ್ಟಿ ಮತ್ತು ಧಾರಕವಾದ ಈಶ್ವರಚೈತನ್ಯವನ್ನು ಪ್ರತಿಪಾದಿಸುವುದರಿಂದಲೂ ಶ್ರೀ ಶಂಕರಭಗವತ್ಪಾದರವರು ಕಕಾರದ ತತ್ವಕ್ಕೆ ಶಿವಃ ಎಂದು ಹೇಳಿರುತ್ತಾರೆ.

ಮಂತ್ರದ ದ್ವಿತೀಯಾಕ್ಷರವಾದ ಏ ಮತ್ತು ಶ್ರೀ ಶಂಕರಭಗವತ್ಪಾದರವರು ಏ ಅಕ್ಷರಕ್ಕೆ ವಿವರಿಸಿರುವ ಶಕ್ತಿಃ ಎನ್ನುವ ತತ್ವಸಮರ್ಥನೆಗೆ ತ್ರಿಪುರಾತಾಪಿನ್ಯು ಪನಿಷತ್ತಿನಲ್ಲಿ

> " ತ್ರಿಪುರಾಪರಮೇಶ್ವರೀ ಮಹಾಕುಂಡಲಿನೀದೇವೀಜಾತವೇದಸ ಮಂಡಲಂ ಯೋಧೀತೇಸರ್ವಂ ವ್ಯಾಪ್ಯತೇ ತ್ರಿಕೋಣಶಕ್ತಿರೇಕಾರೇಣ ಮಹಾಭಾಗೇನ ಪ್ರಸೂತೇತಸ್ಮಾದೇಕಾರ ಏವಗೃಹ್ಯತೆ |"

ತಾತ್ಪರ್ಯ—ಪರಮೇಶ್ವರಿಯಾದ ಮಹಾಕುಂಡಲಿನೀ ದೇವಿಯಾದ ಶ್ರೀ ಲಲಿತಾ ತ್ರಿಪುರಸುಂದರಿಯು ಅಗ್ನಿಮಂಡಲವನ್ನು ಧರಿಸಿ ಅಂದರೆ ಚಿಚ್ಛಕ್ತಿಯ ರೂಪವನ್ನು ತಾಳಿ ಅಗ್ನಿಯ ಕಾರ್ಯದ ತತ್ವವಾದ ಸೃಷ್ಟಿಸ್ಥಿತಿಗಳನ್ನು ಧರಿಸಿ ಸರ್ವ ಜಗತ್ತನ್ನೂ ವ್ಯಾಪಿಸುತ್ತಾಳೆ. ತ್ರಿಕೋಣಾಕಾರದ ಶಕ್ತಿ (ತ್ರಿಮೂರ್ತಿಶಕ್ತಿ) ಯಿಂದ ಕೂಡಿದ ದೇವಿಯು ಬಲಿಷ್ಠವಾದ ಏ ಅಕ್ಷರದಿಂದ ಸೃಷ್ಟಿಗೆ ಕಾರಣವಾಗಿರುತ್ತಾಳೆ. ಆದಕಾರಣ ಏಕಾರವು ಗ್ರಹಿಸಲ್ಪಟ್ಟಿದೆ. ಎಂದು ಹೇಳಿದೆ.

ಏ, ಅಕ್ಷರದ ಮಹತ್ತಿಗೆ ಅಕ್ಷಮಾಲಿಕೋಪನಿಷತ್ತಿನಲ್ಲಿ

ಓಂ ಏಂಕಾರ ಸರ್ವವಶ್ಯಕರ ಶುದ್ಧಸತ್ವ ಏಕಾದಶೇಕ್ಷೆ ಪ್ರತಿತಿಷ್ಠ |

ಅಂದರೆ ಏಕಾರವು ಸರ್ವವನ್ನೂ ಅಧೀನದಲ್ಲಿಟ್ಟುಕೊಳ್ಳುವ ಶಕ್ತಿ ಮತ್ತು ಪವಿತ್ರ ವಾದ ಶುದ್ಧಸತ್ವಗುಣವಾಗಿ ಹನ್ನೊಂದನೇ ಅಕ್ಷರವಾಗಿದೆ. ಎಂದು ಹೇಳಿದೆ. ಅಲ್ಲದೆ ಶ್ರೀಶಂಕರಭಗವತ್ಪಾದರವರು ಏ ಅಕ್ಷರಕ್ಕೆ ಶಕ್ತಿಃ ಎಂದು ಹೇಳಿರುವುದರಿಂದ ಶಕ್ತಿಯೆಂದರೆ "ಶಕ್-ಸಮರ್ಥನೆ" ಎಂದರ್ಥ. ಆದುದರಿಂದ ಈ ಮೇಲಿನ ಆಧಾರವಾಕ್ಯಗಳಿಂದಲೂ ಮಂತ್ರದ ಎರಡನೆಯ ಅಕ್ಷರವಾದ ಏಕಾರವು ಜಗಜ್ಜನನಿ ಯಾದ ಚಿಚ್ಛಕ್ತಿಯ ತತ್ವವನ್ನೇ ಪ್ರತಿಪಾದಿಸುವುದು. ಹೀಗೆ ಏಕಾರವು ಚಿಚ್ಛ ಕ್ತಿಯ ತತ್ವವನ್ನೇ ಪ್ರತಿಪಾದಿಸುವುದರಿಂದಲೇ ಶ್ರೀ ಶಂಕರಭಗವತ್ಪಾದರವರು ಏಕಾರಕ್ಕೆ ಶಕ್ತಿಃ ಎಂದು ಹೇಳಿರುವರು.

ಮಂತ್ರದ ತೃತಿಯಾಕ್ಷರವಾದ ಈ ಅಕ್ಷರ ಮತ್ತು ಶ್ರೀ ಶಂಕರಭಗವತ್ಪಾದ ರವರು ಈ ಅಕ್ಷರಕ್ಕೆ ಹೇಳಿರುವ ಕಾಮಃ ಎನ್ನುವ ತತ್ವಸಮರ್ಥನೆಗೆ ತ್ರಿಪುರಾತಾ ಪಿನ್ಯುಪನಿಷತ್ತಿನಲ್ಲಿ

ಸರ್ವಂ ಸರ್ವಾಂತರಭೂತಂ ತುರೀಯಾಕ್ಷರ ಮೀಕಾರಂ |

ಅಂದರೆ ಸರ್ವವೂ ಮತ್ತು ಸರ್ವವಸ್ತುಗಳಲ್ಲಿ ಇರುವುದಾಗಿಯೂ ನಾಲಕ್ಕನೇ ಅಕ್ಷರ ವಾಗಿಯೂ ಇರುವುದೇ ಈಅಕ್ಷರವು. ಎಂದು ಹೇಳಿದೆ. ಅಲ್ಲದೆ ಸೀತೋಪನಿಷತ್ತಿನಲ್ಲಿ

ವಿಷ್ಣುಃ ಪ್ರಪಂಚ ಬೀಜಂಚಮಾಯಾ ಈಕಾರ ಉಚ್ಯತೇ ।

ಅಂದರೆ ಪ್ರಪಂಚಕ್ಕೆ ಆಧಾರಭೂತವಾದಂಥ ವಿಷ್ಣುವು ಮತ್ತು ಮಾಯೆಯೂ ಈ ಅಕ್ಷರದಲ್ಲಿ ಪ್ರತಿಪಾದಿಸಲ್ಪಡುತ್ತಾರೆಂದು ಹೇಳಿದೆ. ಅಲ್ಲದೆ ಶ್ರೀಲಲಿತಾತ್ರಿಶತೀ ಭಾಷ್ಯದಲ್ಲಿ ಶ್ರೀ ಶಂಕರಭಗವತ್ಪಾದರವರು

ಈಕಾರಃ ಮನ್ಮಥಬೀಜಂ ತತ್ಕಾರಣ ಲಕ್ಷಕತಯಾ ಸ್ಥಿತಿಹೇತು ವಿಷ್ಣು ರೂಪಂ ಚೈತನ್ಯಮಭಿದಧಾತಿ ।

ಅಂದರೆ ಈ ಅಕ್ಷರವು ಮನ್ಮಥಬೀಜ. ಲಕ್ಷಣೆಯಿಂದ ಮನ್ಮಥನಿಗೆ ಅಂದರೆ ಸೃಷ್ಟಿ ಸ್ಥಿತಿಗೆ ಕಾರಣಭೂತವಾದ ವಿಷ್ಣುಚೈತನ್ಯವು ಪ್ರತಿಪಾದಿಸಲ್ಪಡುತ್ತದೆ. ಎಂದು ಹೇಳಿರುತ್ತಾರೆ.

ಮಂತ್ರದ ನಾಲಕ್ಕನೆಯ ಅಕ್ಷರವಾದ ಲ ಎಂಬ ಅಕ್ಷರ ಮತ್ತು ಈ ಲ, ಅಕ್ಷರದ ವಿವರಣೆಗೆ ಶ್ರೀ ಶಂಕರಭಗವತ್ಪಾದರವರು ಹೇಳಿರುವ ಕ್ಷಿತಿಃ ಎಂಬುದರ ತತ್ವಸಮರ್ಥನೆಗೆ ತ್ರಿಪುರಾತಾಪಿನ್ಯುಪನಿಷತ್ತಿನಲ್ಲಿ

ಮಹತ್ವಂ ಜಡತ್ವಂ ಕಾಠಿನ್ಯಂ ವಿದ್ಯತೆ ಯಸ್ಮಿನ್ನಕ್ಷರೇ ತನ್ಮಹೀಲಕಾರಃ ಪರಂಧಾಮ ಕಾಠಿನ್ಯಾರ್ಥಂ ಸಸಾಗರಂ ಸಪರ್ವತಂ ಸಸಪ್ತದ್ವೀಪಂ ಸಕಾನನ ಮುಜ್ವಲದ್ರೂಪಂ ಮಂಡಲಮೇವೋಕ್ತಂ ಲಕಾರೇಣ ಪೃಥ್ವೀ ದೇವೀ ಮಹೀತ್ಯನೇನ ವ್ಯಾಚಕ್ಷತೆ ।

ತಾತ್ಪರ್ಯ—ಯಾವ ಅಕ್ಷರದಲ್ಲಿ ಮಹತ್ವವೂ ಜಡತ್ವವೂ ಕಠಿಣತೆಯೂ ಇರುತ್ತವೆಯೋ ಅದೇ ಲ ಅಕ್ಷರವು. ಈ ಲಕಾರದಿಂದ ಭೂದೇವಿಯು ಸಾಗರ ಗಳಿಂದಲೂ ಪರ್ವತಗಳಿಂದಲೂ ಸಪ್ತದ್ವೀಪಗಳಿಂದಲೂ ಕಾನನಗಳಿಂದಲೂ ಕೂಡಿದ ಜಾಜ್ವಲ್ಯಮಾನವಾದ ಭೂಮಂಡಲದಿಂದ ಕೂಡಿದ ಮಹೀ ಎಂಬದಾಗಿ ಹೇಳ ಲ್ಪಡುತ್ತಾಳೆ. ಎಂದು ಹೇಳಿದೆ.

ಲ ಅಕ್ಷರದ ಮಹತ್ತಿಗೆ ಅಕ್ಷಮಾಲಿಕೋಪನಿಷತ್ತಿನಲ್ಲಿ ಓಂ ಲಂಕಾರ ವಿಶ್ವಂಭರ ಭಾಸುರ ಚತುಶ್ಚತ್ವಾರಿಂಶೇಕ್ಷೇ ಪ್ರತಿತಿಷ್ಠ ।

ಅಂದರೆ ಲ ಅಕ್ಷರವು ಪ್ರಪಂಚವನ್ನು ಧರಿಸುವುದು ಮತ್ತು ಪ್ರಕಾಶಮಾನ ವಾದುದಾಗಿ ನಲವತ್ತನಾಲಕ್ಕನೇ ಅಕ್ಷರವಾಗಿದೆ. ಎಂದು ಹೇಳಿದೆ. ಶ್ರೀ ಶಂಕರ ಭಗವತ್ಪಾದರವರು ಈ ಲ ಅಕ್ಷರದ ಮಹಿಮೆಗೆ ಶ್ರೀಲಲಿತಾತ್ರಿಶತೀಭಾಷ್ಯದಲ್ಲಿ

ಲಕಾರಯುಕ್ತಸ್ಯ ಮಾಯಾಬೀಜಸ್ಯವಾ ಮಾಯೇತ್ಯರ್ಥಃ ।
ಲಮಿತಿ ಪೃಥಿವೀವಾಚಕಂ ಬೀಜಂ ತದುಪ ಲಕ್ಷಿತಂ ಜಗಲ್ಲಕ್ಷ್ಯತೇ ।

ಅಂದರೆ ಲಕಾರಸಹಿತವಾದಂತಹ ಮಾಯಾಬೀಜದ ಮಾಯೆಯು ಯಾರಿಗುಂಟೋ ಅವಳು ಲಕಾರಸ್ವರೂಪಳು. ಲಂ ಎಂಬುದು ಪೃಥಿವೀವಾಚಕವಾದ ಬೀಜವು. ಆದುದರಿಂದ ಜಗತ್ತು ಎಂದು ಹೇಳಿರುತ್ತಾರೆ.

ಪಂಚೋಪಚಾರ ಪೂಜೆಯಲ್ಲಿ ಲಂ ಪೃಥ್ವೀತತ್ವಾತ್ಮಿಕಾಯೈ ಗಂಧಂ ಪರಿಕಲ್ಪಯಾಮಿ ಎಂದು ಹೇಳಲ್ಪಡುವುದು. ಮಂತ್ರದ ನಾಲಕ್ಕನೆಯ ಅಕ್ಷರವಾದ ಲಕಾರಕ್ಕೆ ಶ್ರೀ ಶಂಕರಭಗವತ್ಪಾದರವರು ಕ್ಷಿತಿಃ ಎಂಬ ವಿವರಣೆಯನ್ನು ಹೇಳಿರುತ್ತಾರೆ. ಕ್ಷಿತಿಃ ಎಂಬ ಪದದ ಅರ್ಥವೂ ಕೂಡ "ಕ್ಷೀಯಂತಿ ನಿವಸಂತಿ ಸರ್ವೇಸ್ಯಾಮಿತಿ ಕ್ಷಿತಿಃ (ಕ್ಷೀನಿವಾಸಗತ್ಯೋಃ) ಇದರಲ್ಲಿ ವಾಸಿಸುವರು. ಎಂದು ಅರ್ಥವಾದುದರಿಂದ ವಾಸಕ್ಕೆ ಸ್ಥಾನವೇ ಜಗತ್ತಾಗಿರುವುದರಿಂದ ಜಗತ್ಸ್ವರೂಪವೇ ಲಕಾರದ ತತ್ವವಾಗಿರುವುದು.

ಇದುವರೆಗೂ ಶ್ರೀ ಲಲಿತಾಮಂತ್ರದ ಪ್ರಥಮ ನಾಲಕ್ಕು ಅಕ್ಷರಗಳ ತತ್ವಗಳನ್ನೂ ಮತ್ತು ನಾಲಕ್ಕು ಅಕ್ಷರಗಳಿಗೂ ಮಂತ್ರಾಂತ್ಯದಲ್ಲಿರುವ ಬೀಜಾಕ್ಷರವಾದ ಹ್ರೀಂಕಾರಕ್ಕೂ ಇರುವ ಸಂಬಂಧವನ್ನೂ ತಿಳಿಸಿತು. ಅಲ್ಲದೆ ಅಕ್ಷರಗಳ ತತ್ವಕ್ಕನುಸಾರವಾದ ಶ್ರುತ್ಯಾದಿ ಆಧಾರವಾಕ್ಯಗಳನ್ನೂ ಸಹ ಕೊಟ್ಟು ತತ್ವವು ದೃಢೀಕರಿಸಲ್ಪಟ್ಟಿತು. ಮಂತ್ರದ ಪ್ರಥಮ ಪಾದವು ಸೃಷ್ಟಿತತ್ವಪ್ರತಿಪಾದಕವಾದ ರಹಸ್ಯಾರ್ಥವಾದುದೆಂದು ಹಿಂದೆ ತಿಳಿಸಿತಷ್ಟೆ! ಪ್ರಥಮಪಾದದ ಅಕ್ಷರಗಳ ತತ್ವಗಳಿಂದಾಗುವ ಸೃಷ್ಟಿಯ ಕಾರ್ಯದ ವಿಚಾರಗಳನ್ನು ವಿವರಿಸೋಣ. ಹ್ರೀಂ ಬೀಜಾಕ್ಷರಸ್ವರೂಪವಾದ ಪರಬ್ರಹ್ಮದಿಂದ ಪ್ರತಿಫಲಿತ (ಚಿದಾಭಾಸ) ಚೈತನ್ಯನಾದ ಈಶ್ವರನೂ, ಚಿಚ್ಛಕ್ತಿಯಾದ ಶುದ್ಧಸತ್ವಪ್ರಧಾನ ಮಾಯಾಶಕ್ತಿಯೂ, ಆನಂದವಾದ ಮನ್ಮಥಬೀಜದ ವ್ಯಕ್ತಸ್ಥಿತಿಯಾದ ಕಾಮವೂ, ಭೂತ ತತ್ವಪ್ರತಿಪಾದಕವಾದ ಸ್ಥೂಲಜಗತ್ತೂ ಪ್ರಥಮ ಪಾದದ ನಾಲಕ್ಕು ಅಕ್ಷರಗಳ ತತ್ವವಾಗಿ ವಿವರಣೆಯಾಗಿ ಹೊರಸೂಸಲ್ಪಟ್ಟವು. ಸೃಷ್ಟಿಕಾರ್ಯಕ್ಕೋಸ್ಕರಲೇ ಪರಬ್ರಹ್ಮವು ಪ್ರತಿಫಲಿತಚೈತನ್ಯನಾದ ಈಶ್ವರನಾಗಿ ಅವತರಿಸುವುದು. ಆದುದರಿಂದ ಸೃಷ್ಟಿಕಾರ್ಯವೇ ಪ್ರಥಮದಲ್ಲುಂಟಾಗಬೇಕು. ಅಲ್ಲದೆ ಹ್ರೀಂ ಬೀಜಾಕ್ಷರದಲ್ಲಿರುವ ಈ ಅಕ್ಷರದ ತತ್ವವಾದ ಆನಂದತ್ವದ ಮನ್ಮಥಬೀಜವು ಕಾರಣಕ್ಕೆಲ್ಲಾ ಕಾರಣವಾಗಿ ಜಗತ್ತಿನ ಸೃಷ್ಟಿ ಸ್ಥಿತಿ, ಲಯಗಳಾದ ಮೂರಕ್ಕೂ, ಕಾರಣವಾಗಿರುವುದರಿಂದಲೇ ಪ್ರಥಮದಲ್ಲಿ ಮನ್ಮಥಬೀಜಕ್ಕೇ ಸ್ಪಂದನವುಂಟಾಗಿ ಈಶ್ವರನನ್ನೂ ಮಾಯಾಶಕ್ತಿಯನ್ನೂ ಸೃಷ್ಟಿಸಿಕೊಂಡು ತಾನೂ ಜೊತೆಯಲ್ಲಿ ಕಾಮಃ ಎಂಬ ನಾಮಧೇಯದಿಂದ ಇರುವುದರಿಂದ ಮುಂದಿನ ಕಾರ್ಯಗಳನ್ನು ಮಾಡಿಸದೇ ತಟಸ್ಥವಾಗಿರುವುದಿಲ್ಲ. ಈಶ್ವರನೂ ಶಕ್ತಿಯೂ ಕಾರ್ಯಮಾಡದೆ ತಟಸ್ಥ

ವಾಗಿದ್ದರೂ ಕಾಮನು ಅವರ ತಾಟಸ್ಥ್ಯವನ್ನು ಹೋಗಲಾಡಿಸಿ ಕಾರ್ಯೋನ್ಮುಖರನ್ನಾಗಿ ಮಾಡಿಸಿಯೇ ಮಾಡಿಸುವರು. ಕಾಮನ ಕಾರ್ಯವೇನೆಂದರೆ— "ಕಾಮಯತಿ ಸುರತೇಚ್ಛಾಮುತ್ಪಾದಯತೀತಿ ಕಾಮಃ" ಸುರತೇಚ್ಛೆಯನ್ನುಂಟು ಮಾಡುವನು. ಅಂದರೆ ಈಶ್ವರ ಮತ್ತು ಶಕ್ತಿಯನ್ನು ಸೇರಿಸಿ ಜಗತ್ತಿನ ಸೃಷ್ಟಿಯನ್ನುಂಟುಮಾಡಿಸುವನು.

ಈ ಮೇಲಿನ ತತ್ವಾರ್ಥಸಮರ್ಥನೆಗೆ ಶ್ರುತಿ ಮತ್ತು ಪುರಾಣೋಕ್ತವಾದ ಈಶ್ವರನ ಚರಿತ್ರೆಯು ಇಲ್ಲಿಗೆ ಮುದ್ದಾಗಿ ಅನ್ವಯವಾಗುವುದು. ಈಶ್ವರನು ದಕ್ಷ ಬ್ರಹ್ಮನ ಯಾಗಪನಿಮಿತ್ತವಾಗಿ ಪಾರ್ವತಿಯ ಅಗಲಿಕೆಯಿಂದ ತಪಸ್ಸಿನಲ್ಲಿ ನಿರತನಾಗಿದ್ದನು. ಇವನನ್ನು ತಪಸ್ಸಿನಿಂದ ಬಹಿರ್ಮುಖನನ್ನಾಗಿ ಮಾಡಿ ಪಾರ್ವತಿಯೊಡನೆ ಕೂಡಿಸಬೇಕೆಂದು ಮನ್ಮಥನು ತನ್ನ ಪುಷ್ಪಬಾಣವಾದ ಕಾಮಬಾಣದ ಪ್ರಯೋಗ ಮಾಡಿ ಈಶ್ವರನನ್ನು ತಪಸ್ಸಿನಿಂದ ಬಹಿರ್ಮುಖನನ್ನಾಗಿ ಮಾಡಿದನು. ಈಶ್ವರನೂ ಮನ್ಮಥನನ್ನು ಅನಂಗನನ್ನಾಗಿ ಮಾಡಲು ದಹಿಸಿ ಅನಂತರ ಪಾರ್ವತಿಯೊಡನೆ ಕೂಡಿಕೊಂಡನು. ಈಶ್ವರ ಚೈತನ್ಯವನ್ನು ಶಕ್ತಿಯಾದ ಪಾರ್ವತಿಯೊಡನೆ ಸೇರುವಂತೆಮಾಡಿದವನು ಮನ್ಮಥನು. ಆದುದರಿಂದ ಸೃಷ್ಟಿಗೆ ಕಾರಣವಾದುದೇ ಮಂತ್ರದ ಈಕಾರದ ತತ್ವದಲ್ಲಿರುವ ಕಾಮಶಕ್ತಿಯು. ಈಶ್ವರನು ಕಾಮಬಾಣಕ್ಕೆ ಒಳಪಟ್ಟರೂ ಕಾಮನಿಗಿಂತಲೂ ಹೆಚ್ಚು ಶಕ್ತಿಯುಳ್ಳವನೆಂದೂ ಕಾಮನಿಗೆ ನಿಯಂತೃವೆಂದೂ ಸೂಚಿಸುವ ತತ್ವಕ್ಕೋಸ್ಕರಲೇ ಕಾಮನನ್ನು ದಹನಮಾಡಿ ಅನಂಗನನ್ನಾಗಿ ಮಾಡಿದನು. ಆದುದರಿಂದ ಈಶ್ವರನೂ ಶಕ್ತಿಯೂ ಸೇರಿ ಸಕಲ ಜಗತ್ತನ್ನೂ ಸೃಷ್ಟಿಸುವಿಕೆಯ ತತ್ವಾರ್ಥವೇ ಮಂತ್ರದ ಪ್ರಥಮಪಾದದ ರಹಸ್ಯಾರ್ಥವಾಗಿರುವುದು. ಈ ತತ್ವಸಮರ್ಥನೆಗೆ ಶ್ವೇತಾಶ್ವತರೋಪನಿಷತ್ತಿನಲ್ಲಿ

ಮಾಯಾಂತುಪ್ರಕೃತಿಂ ವಿದ್ಯಾನ್ಮಾಯಿನಂತು ಮಹೇಶ್ವರಂ ।
ಅಸ್ಮಾನ್ಮಾಯೀ ಸೃಜತೆ ವಿಶ್ವಮೇತತ್ ।

**ತಾತ್ಪರ್ಯ**—ಮಾಯಾಶಕ್ತಿಯನ್ನು ಪ್ರಕೃತಿಯೆಂದು ತಿಳಿ. ಮಾಯೆಯನ್ನು ತನ್ನ ಅಧೀನದಲ್ಲಿ ಇಟ್ಟುಕೊಂಡು ಇರುವವನು ಮಹೇಶ್ವರನೆಂದು ತಿಳಿ. ಆದುದರಿಂದ ಮಾಯಿಯಾದ ಮಹೇಶ್ವರನು ಜಗತ್ತನ್ನೆಲ್ಲಾ ಸೃಷ್ಟಿಸುತ್ತಾನೆ. ಎಂದು ಹೇಳಿದೆ.

ಇದೇ ತಾತ್ಪರ್ಯಕ್ಕೆ ತೈತ್ತಿರೀಯೋಪನಿಷತ್ತಿನಲ್ಲಿ

ಸೋಕಾಮಯತ । ಬಹುಸ್ಯಾಂ ಪ್ರಜಾಯೇಯೇತಿ । ಸತಪೋತಪ್ಯತ ।
ಸತಪಸ್ತಪ್ತ್ವಾ । ಇದಂಸರ್ವಮ ಸೃಜತ । ಯದಿದಂ ಕಿಂಚ ।

**ತಾತ್ಪರ್ಯ**— ಸಮಸ್ತ ಪ್ರಜೋತ್ಪತ್ತಿಗೂ ಸಂಕಲ್ಪಿಸಿದನು. ಆದುದರಿಂದ ತಪಸ್ಸನ್ನು ಆಚರಿಸಿದನು. ತಪಶ್ಚರಣೆಯಿಂದ ಈ ಎಲ್ಲಾ ಜಗತ್ತನ್ನೂ ಸೃಷ್ಟಿಸಿದನು. ಎಂದು ಹೇಳಿದೆ. ಐತರೇಯ ಶ್ರುತಿಯಲ್ಲಿ

> ಆತ್ಮಾವಾ ಇದಮೇಕ ಏವಾಗ್ರಆಸೀನ್ನಾನ್ಯತ್ಕಿಂಚನ ಮಿಷತ್ಸ ಈಕ್ಷತ
> ಲೋಕಾನ್ನು ಸೃಜಾ ಇತಿ । ಸ ಇಮಾ್ಲೋಕಾನಸೃಜತ ।

ತಾತ್ಪರ್ಯ—ಸೃಷ್ಟಿಗಿಂತಲೂ ಪೂರ್ವದಲ್ಲಿ ಪರಬ್ರಹ್ಮಮಾತ್ರವೇ ಇತ್ತು. ಪರಬ್ರಹ್ಮನು ಸೃಷ್ಟಿಸುವೆನೆಂದು ಸಂಕಲ್ಪಿಸಿದನು ಮತ್ತು ತನ್ನ ಸಂಕಲ್ಪದಿಂದ ಸರ್ವಜಗತ್ತನ್ನೂ ಸೃಷ್ಟಿಸಿದನು. ಎಂದು ಹೇಳಿದೆ.

ಮೇಲಿನ ಶ್ರುತಿವಾಕ್ಯಗಳು ಪರಬ್ರಹ್ಮಸ್ವರೂಪವಾದ ಹ್ರೀಂಕಾರದಿಂದ ಮಂತ್ರದ ಪ್ರಥಮ ಪಾದದಲ್ಲಿನ ಈಶ್ವರ, ಶುದ್ಧಸತ್ವಪ್ರಧಾನ ಮಾಯಾಶಕ್ತಿ ಮತ್ತು ಕಾಮಶಕ್ತಿಗಳು ಉತ್ಪತ್ತಿಯಾಗುವ ಸಂಕಲ್ಪದ ತತ್ವವನ್ನೆಂದರೆ ಹ್ರೀಕಾರದ ಈ ಅಕ್ಷರದ ಸ್ಪಂದನಕ್ಕೂ ಮತ್ತು ಈಶ್ವರನು ಪ್ರಪಂಚದ ಸೃಷ್ಟಿಸಂಕಲ್ಪದ ತತ್ವಕ್ಕೂ ಆಧಾರವಾಗಿವೆ. ಶಕ್ತ ಶಕ್ತಿಗಳೆರಡೂ ಸೇರಿ ಸೃಷ್ಟಿಸುವರೆಂಬ ತತ್ವಕ್ಕೆ ಪ್ರಶ್ನೋಪನಿಷತ್ತಿನಲ್ಲಿ

> ರಯಿಂಚ ಪ್ರಾಣಂಚೇತ್ಯೇತೌಮೇ ಬಹುಧಾಪ್ರಜಾಃ ಕರಿಷ್ಯತ ಇತಿ ।
> ಆದಿತ್ಯೋಹವೈ ಪ್ರಾಣೋ ರಯಿರೇವಚಂದ್ರಮಾಃ ॥

**ತಾತ್ಪರ್ಯ**—ಚಂದ್ರ ಸೂರ್ಯರಿಂದ ಸಕಲ ಸೃಷ್ಟಿಗಳೂ ಆಗಿರುವುವು. ಆದಿತ್ಯನೆಂದರೆ ಪ್ರತಿಫಲಿತ ಚೈತನ್ಯನಾದ ಈಶ್ವರನೇ ಪ್ರಾಣ. ಪರಾಶಕ್ತಿಯೇ ಚಂದ್ರನು. ಎಂದು ಹೇಳಿದೆ.

ಅಸ್ಮದಾದಿಗಳು ಕಾಮಕ್ಕೆ ಸೋಲುವಂತೆ ಈಶ್ವರನು ಕಾಮ ಬದ್ಧನಲ್ಲ. ಜೀವರುಗಳಿಗೆ ಉಂಟಾಗುವ ಕಾಮವು ಅವಿದ್ಯಾಬಂಧನಕ್ಕೊಳಗಾದ ಕಾಮವು. ಈಶ್ವರನಿಗೆ ಇರುವ ಕಾಮವಾದರೋ

> ಸತ್ಯಕಾಮಃ ಸತ್ಯಸಂಕಲ್ಪಃ । ಕಾಮಂಜಾಯತೇ ನಿರಂಜನೋ
> ಅಕಾಮತ್ವೇನೋ ಜೃಂಭತೇ ।

ಎಂಬದಾಗಿ ಶ್ರುತಿಗಳು ಮೊರೆಯಿಡುವಂತೆ ಈಶ್ವರನು ಸತ್ಯಕಾಮನು, ಸತ್ಯಸಂಕಲ್ಪದವನು ಮತ್ತು ಸತ್ಯಕಾಮನಾದರೂ ನಿಷ್ಕಾಮದಿಂದ ಬೆಳಗುತ್ತಾನೆ. ಆದುದರಿಂದ ಈಶ್ವರನ ಕಾಮಕ್ಕೂ ಅಸ್ಮದಾದಿಗಳ ಕಾಮಕ್ಕೂ ಸಂಬಂಧವಿಲ್ಲ. ಅಸ್ಮದಾದಿಗಳಲ್ಲೂ ಶ್ರೇಷ್ಠ ಜ್ಞಾನನಿಷ್ಠರು ನಿಷ್ಕಾಮಕರ್ಮಿಗಳಾಗುವರು.

ಈಶ್ವರನೂ, ಶುದ್ಧಮಾಯಾಶಕ್ತಿಯೂ, ಮನ್ಮಥಶಕ್ತಿಯೂ ಹ್ರೀಂ ಬೀಜಾಕ್ಷರವಾದ ಪರಬ್ರಹ್ಮದಿಂದ ಉದಯಿಸಿ ಕಳಾಸ್ವರೂಪದಲ್ಲಿ ನೆಲೆಸುತ್ತಾರೆ. ಹೇಗೆಂದರೆ, ಹ್ರೀಂಕಾರ ಅಥವಾ ಓಂಕಾರದಿಂದ ಬಿಂದು, ನಾದ ಕಳೆಗಳಲ್ಲಿ ಕಳೆಯೇ ಪ್ರಥಮದಲ್ಲಿ ಉದಯಿಸುವುದು. ಕಳೆಯೆಂದರೆ ಅವ್ಯಕ್ತವಾಗಿಯೂ ಅಸ್ಫುಟವಾಗಿಯೂ ಪ್ರಕಾಶವುಳ್ಳದ್ದಾಗಿಯೂ, ಹೃದಯಂಗಮವಾಗಿಯೂ ಇರುವ ಸ್ಥಿತಿಯೇ ಕಳಾಸ್ವರೂಪ. ಕಳಾಸ್ವರೂಪವು ಇಂದ್ರಿಯಕ್ಕೆ ಗೋಚರವಾಗದೇ ಇರುವಂತಹ ನಾದಬ್ರಹ್ಮದಸ್ವರೂಪವು. ಇಂತಹ ಕಳಾಸ್ವರೂಪದಲ್ಲೇ ಈಶ್ವರ, ಶಕ್ತಿ ಮತ್ತು ಕಾಮಶಕ್ತಿಯು ನೆಲೆಸುತ್ತಾರೆ. ಈ ಸೋಪಾನವೇ ದೇವತಾತ್ಮಕವಾದ ಶುದ್ಧ ಸತ್ವಗುಣದ ಸೋಪಾನ. ಈ ಸೋಪಾನದಲ್ಲಿಯೇ ಈಶ್ವರನು ಸೂರ್ಯಕಳಾ, ಶಕ್ತಿಯು ಚಂದ್ರಕಳಾ, ಕಾಮನು ಮನ್ಮಥಕಳಾಸ್ವರೂಪರೆನಿಸಿಕೊಳ್ಳುತ್ತಾರೆ. ಅವ್ಯಕ್ತವಾದ ಸೂರ್ಯಚಂದ್ರರ ಕಳೆಗಳೇ ಮುಂದೆ ಸ್ಥೂಲವಾದ ಸೂರ್ಯಚಂದ್ರರ ಮಂಡಲಗಳಿಗೆ ಕಾರಣವಾಗುತ್ತವೆ.

ಇದುವರೆಗೂ ಮಂತ್ರದ ಪ್ರಥಮ ಮೂರು ಅಕ್ಷರಗಳ ತತ್ವವಾದ ಶಿವಃ ಶಕ್ತಿಃ, ಕಾಮಃ ಎಂಬುವುಗಳ ಕಾರ್ಯದ ರಹಸ್ಯಾರ್ಥಗಳು ಆಧಾರವಾಕ್ಯಗಳೊಡನೆ ವಿವರಿಸಲ್ಪಟ್ಟವು. ಮಂತ್ರದ ನಾಲಕ್ಕನೆಯ ಅಕ್ಷರವಾದ ಲ ಮತ್ತು ಇದರ ವಿವರಣೆಯಾದ ಕ್ಷಿತಿಃ ಎಂಬುದರ ಕಾರ್ಯದ ವಿಚಾರವನ್ನು ವಿವರಿಸೋಣ. ಲಕಾರವು ಹ್ರೀಂ ಬೀಜಾಕ್ಷರದಲ್ಲಿನ ಸರ್ವಪ್ರಕೃತಿಭೂತಶಬ್ದಾತ್ಮಕವಾದ ಅನುಸ್ವಾರದತತ್ವವಾಗಿ ಕ್ಷಿತಿಃ ಎಂದರೆ ಭೂಶಬ್ದವಾಚ್ಯವಾದುದೆಂದು ಹಿಂದೆ ಆಧಾರವಾಕ್ಯಗಳನ್ನು ಕೊಟ್ಟು ತಿಳಿಸಿರುತ್ತಷ್ಟೆ? ಸರ್ವಪ್ರಕೃತಿಭೂತ ಶಬ್ದಾತ್ಮಕವಾದುದೆಂದರೆ—ಜಡ ಅಥವ ತಮಃಪ್ರಧಾನಪ್ರಕೃತಿಯ ಕಾರ್ಯವನ್ನು ಪ್ರತಿಪಾದಿಸುವುದರಿಂದಲೇ ಮಂತ್ರದ ನಾಲಕ್ಕನೆಯ ಅಕ್ಷರವಾಗಿ ಲ ಅಕ್ಷರವೂ ಅದರ ವಿವರಣೆಯಾದ ಕ್ಷಿತಿಃ ಎಂಬುದೂ ಇವೆ. ಪಂಚಭೂತಗಳೂ, ರಜೋಗುಣ, ತಮೋಗುಣ ಮುಂತಾದವುಗಳು ತಮಃ ಪ್ರಧಾನಪ್ರಕೃತಿಗೆ ಸೇರಿದವುಗಳು. ಈ ತಮಃ ಪ್ರಧಾನಪ್ರಕೃತಿಯೇ ಪ್ರಾಣಿಗಳ ಅಜ್ಞಾನಕ್ಕೂ ಕಾರಣವಾದುದು. ಸೃಷ್ಟಿ ಕ್ರಮದಲ್ಲಿ ತಮಃಪ್ರಧಾನಪ್ರಕೃತಿಯ ಕಾರ್ಯವೇನೆಂದರೆ, ಶ್ರೀ ವಿದ್ಯಾರಣ್ಯ ಸ್ವಾಮಿಗಳವರು ಶ್ರುತಿತಾತ್ಪರ್ಯವನ್ನನುಸರಿಸಿ ಪಂಚದಶಿಯಲ್ಲಿ ಹೇಳಿರುವಂತೆ

ತಮಃ ಪ್ರಧಾನ ಪ್ರಕೃತೇ ಸ್ತದ್ಭೋಗಾಯೇಶ್ವರಾಜ್ಞಯಾ ।
ವಿಯತ್ಪವನತೇಜೋಂಬು ಭುವೋ ಭೂತಾನಿ ಜಜ್ಞಿರೆ ।

**ತಾತ್ಪರ್ಯ**—ಜೀವರ ಭೋಗಕ್ಕಾಗಿ ತಮೋಗುಣವೇ ಪ್ರಧಾನವಾಗುಳ್ಳ ಪ್ರಕೃತಿಯು ಈಶ್ವರನ ಆಜ್ಞೆಯಿಂದ ಪಂಚಭೂತಗಳನ್ನೂ ಸ್ಥೂಲವಾದ ಜಗತ್ತನ್ನೂ

ಸೃಷ್ಟಿಸಿತು. ಮಂತ್ರದ ಎರಡನೆಯ ಅಕ್ಷರವಾದ ಏ ಅಕ್ಷರದಲ್ಲಿ ಶಕ್ತಿಪ್ರತಿಪಾದ್ಯ ವಾಗಿ ಶುದ್ಧಸತ್ವಪ್ರಧಾನಮಾಯೆಯ ವಿಚಾರವನ್ನು ತಿಳಿಸಿತು. ನಾಲಕ್ಕನೇ ಅಕ್ಷರವಾದ ಲ ಅಕ್ಷರದ ವಿವರಣೆಯಾದ ಕ್ಷಿತಿಃ ಎನ್ನುವುದರಲ್ಲಿ ತಮಃಪ್ರಧಾನ ಮಾಯಾವಿಚಾರವು ಬಂದಿರುವುದು. ಇವೆರಡರಲ್ಲಿ ಶುದ್ಧಸತ್ವಪ್ರಧಾನಪ್ರಕೃತಿಯು ದೇವತಾತ್ಮಕವಾದುದು ಮತ್ತು ಅತ್ಯಂತ ಶ್ರೇಷ್ಠವಾದುದು. ತಮಃಪ್ರಧಾನ ಪ್ರಕೃತಿಯು ಬಹು ಕೀಳಾದುದು. ಈ ತಾತ್ಪರ್ಯಕ್ಕೆ ಶ್ರೀ ಕೃಷ್ಣಪರಮಾತ್ಮನು ಭಗವದ್ಗೀತೆಯಲ್ಲಿ

ಭೂಮಿರಾಪೋ ನಲೋವಾಯುಃ ಖಂಮನೋ ಬುದ್ಧಿರೇವಚ ।
ಅಹಂಕಾರ ಇತೀಯಂಮೇ ಭಿನ್ನಾಪ್ರಕೃತಿರಷ್ಟಧಾ ॥
ಅಪರೇಯಮಿತಿಸ್ತ್ವನ್ಯಾಂ ಪ್ರಕೃತಿಂ ವಿದ್ಧಿಮೇಪರಾಂ ।
ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್ ॥

**ತಾತ್ಪರ್ಯ**—ಎಲೈ ಅರ್ಜುನನೆ! ಪ್ರಕೃತಿಯು ಭೂಮಿ, ನೀರು, ಅಗ್ನಿ, ವಾಯು, ಆಕಾಶ, ಮನಸ್ಸು, ಬುದ್ಧಿ, ಅಹಂಕಾರಸ್ವರೂಪಗಳಾದ ಎಂಟು ಬಗೆ ಯಾಗಿರುವುದು. ಈ ಪ್ರಕೃತಿಯು ಕೀಳಾದುದು. ಈ ಪ್ರಕೃತಿಗಿಂತಲೂ ಬೇರೆ ಯಾಗಿ ಈ ಜಗತ್ತನ್ನೆಲ್ಲಾ ನಿರ್ವಾಹಮಾಡುತ್ತಿರುವ ಜೀವಭೂತವೆಂದರೆ ಪ್ರಾಣಿ ಗಳ ಇರುವಿಕೆಗೆ ಕಾರಣವಾದ ಶುದ್ಧಸತ್ವವೆನಿಸುವ ತನ್ನ ಪರಿಶುದ್ಧವಾದ ಪ್ರಕೃತಿ ಯೆಂದರೆ ಶುದ್ಧಸತ್ವಪ್ರಧಾನಮಾಯೆಯು ಶ್ರೇಷ್ಠವಾದುದೆಂದು ತಿಳಿ. ಎಂದು ಹೇಳಿರುವನು.

ತಮಃ ಪ್ರಧಾನಪ್ರಕೃತಿಯ ಕಾರ್ಯವಾದ ಜಗತ್ತಿಗೆ ನಾಶವುಂಟು. ತಮಃ ಪ್ರಧಾನಪ್ರಕೃತಿಯ ತತ್ವವಿರುವ ಪ್ರಥಮಪಾದದ ನಾಲಕ್ಕನೆಯ ಅಕ್ಷರಕ್ಕೆ ಕ್ಷಿತಿಃ ಎಂಬ ವಿವರಣೆಯು ಇರುವುದಷ್ಟೆ? ಕ್ಷಿತಿಃ ಶಬ್ದಕ್ಕೂ "ಕ್ಷೀಯತ ಇತಿ ಕ್ಷಿತಿಃ" ನಶಿಸುವುದು ಅಥವಾ ನಾಶವಾಗುವುದೆಂದು ಅರ್ಥವಾಗುವುದರಿಂದ ಜಗತ್ತಿಗೆ ನಾಶವುಂಟು. ನಾಶವೆಂದರೆ ವಸ್ತುವೇ ಇಲ್ಲದಂತಾಗುವುದಿಲ್ಲ. ರೂಪಭೇದದಿಂದ ಸ್ಥೂಲವಾದ ಮತ್ತು ಬಹು ಸೂಕ್ಷ್ಮವಾದ ಅವ್ಯಕ್ತಸ್ಥಿತಿಗೆ ಬಂದು ಪರಬ್ರಹ್ಮ ದಲ್ಲೆಂದರೆ ಹ್ರೀಂ ಬೀಜಾಕ್ಷರದಲ್ಲಿರುವ ಬಿಂದುರೂಪದಲ್ಲಿ ಅಡಗುವುದು. ವಸ್ತು ನಾಶವೆಂದು ಹೇಳುವುದಾದರೆ ಪರಬ್ರಹ್ಮಕ್ಕೇ ನಾಶವೆಂದು ಹೇಳಬೇಕಾಗುವುದು. ಪರಿಣಾಮಭೇದವೇ ಹೊರತು ವಸ್ತುನಾಶವಿಲ್ಲದಿದುರಿಂದಲೇ "ಸರ್ವಂ ಖಲ್ವಿದಂ ಬ್ರಹ್ಮ; ಏಕಮೇವಾದ್ವಿತೀಯಂ ಬ್ರಹ್ಮ" ಸರ್ವವೂ ಪರಬ್ರಹ್ಮವೇ ಎಂದು ಶ್ರುತಿಯು ಸಾರುತಲಿದೆ. ತಮಃಪ್ರಧಾನಪ್ರಕೃತಿಯ ಕಾರ್ಯಕ್ಕೆ ನಾಶವಿರು ವಂತೆ ಶುದ್ಧಸತ್ವಪ್ರಧಾನ ಪ್ರಕೃತಿಗೆ ಪರಿಣಾಮಭೇದವೂ ಇಲ್ಲದೆ ತಮಃಪ್ರಧಾನ

ಪ್ರಕೃತಿಗೆ ನಿಯಂತೃವೂ ಆಗಿರುವುದರಿಂದ ಇದು ಪರಾ ಎಂದೂ ಪ್ರಕೃತಿಯೆಂದೂ, ವಿದ್ಯೆಯೆಂದೂ, ಶುದ್ಧ ಸತ್ವಮಾಯೆಯೆಂದೂ ಕರೆಯಲ್ಪಡುವುದು. ತಮಃಪ್ರಧಾನ ಪ್ರಕೃತಿಯು ವಿಕೃತಿಯೆಂದೂ, ಅಪರಾ ಎಂದೂ, ಅವಿದ್ಯೆಯೆಂದೂ, ಮಲಿನ ಮಾಯೆಯೆಂದೂ, ಕರೆಯಲ್ಪಡುವುದು. ಈ ಮೇಲಿನ ಆಧಾರವಾಕ್ಯಗಳಿಂದಲೂ ಮತ್ತು ತತ್ವಗಳಿಂದಲೂ ಮಂತ್ರದ ನಾಲಕ್ಕನೆಯ ಅಕ್ಷರ ಮತ್ತು ಅದರ ವಿವರಣೆ ಯಾದ ಕ್ಷಿತಿಃ ಎಂಬುದರ ತತ್ವವು ತಮಃಪ್ರಧಾನ ಮಾಯಾಕಾರ್ಯವಾದ ಬ್ರಹ್ಮಾಂಡದ ಸ್ಥೂಲಸೃಷ್ಟಿಯ ವಿಚಾರವಾಗಿದೆ.

ಮಂತ್ರದ ಪ್ರಥಮಪಾದದ ಅಂತ್ಯದಲ್ಲಿರುವ ಹ್ರೀಂ ಅಕ್ಷರದ ತತ್ವ ವೇನೆಂದರೆ--ಪ್ರಥಮಪಾದವು ಸೃಷ್ಟಿಯ ತತ್ವದ್ದಾಗಿರುವುದೆಂಬುದನ್ನು ಇದುವರೆಗೂ ವಿವರಿಸಿದೆಯಷ್ಟೆ ? ಸೃಷ್ಟಿಯ ಅಂತ್ಯದಲ್ಲಿ ಪರಬ್ರಹ್ಮಸ್ವರೂಪವಾದ ಹ್ರೀಂ ಕಾರವು ಬಂದಿರುವುದರಿಂದ ಸೃಷ್ಟಿಯ ಸಕಲ ತತ್ವಗಳೂ ಪರಬ್ರಹ್ಮಸ್ವರೂಪವಾಗಿರುವು ದೆಂಬ ತತ್ವವನ್ನು ಪ್ರತಿಪಾದಿಸುವುದಕ್ಕೋಸ್ಕರಲೇ ಹ್ರೀಂಕಾರವು ಪ್ರಥಮಪಾದದ ಅಂತ್ಯದಲ್ಲಿ ಬಂದಿರುವುದಾಗಿದೆ. ಬೀಜದಿಂದ ಉತ್ಪನ್ನವಾದ ವೃಕ್ಷವು ಬೀಜ ಸ್ವರೂಪವೇ ಆಗಿರುವುದಲ್ಲದೆ ಅನ್ಯಥಾ ಇಲ್ಲ. ಆದುದರಿಂದಲೇ "ಸರ್ವಂ ಖಲ್ವಿದಂ ಬ್ರಹ್ಮ; ಏಕಮೇವಾದ್ವಿತೀಯಂ ಬ್ರಹ್ಮ" ಎಂಬಂತೆ ಸರ್ವವೂ ಪರಬ್ರಹ್ಮ ಸ್ವರೂಪವೆಂದು ಶ್ರುತಿಗಳು ಸಾರುತ್ತಿವೆ. ಈ ಮೇಲಿನ ತತ್ವಕ್ಕನುಸಾರವಾಗಿ ಶ್ರೀ ಶಂಕರಭಗವತ್ಪಾದರವರು ಶ್ರೀ ಲಲಿತಾತ್ರಿಶತೀ ಭಾಷ್ಯದಲ್ಲಿ

> " ಕೇವಲ ಮಾಯಾವಾಚಕಃ ಹ್ರೀಂಕಾರಃ ತಥಾ ಹಕಾರಃ ಶ್ವೇತಪದಾರ್ಥಕಃ ರೇಫರೋಹಿತ ಪದಾರ್ಥಕಃ ಈಕಾರ ನೀಲಾರ್ಥಕಃ ತಥಾಚ ವಿಶಿಷ್ಟಸ್ಯ ಶುಕ್ಲರಕ್ತನೀಲವತ್ಪದಾರ್ಥ ವಾಚಕತಯಾ ಸತ್ವರಜಸ್ತಮೋಗುಣವತ್ಪ್ರಕೃತಿ ವಾಚಕತ್ವಂ "

ಅಂದರೆ ಹ್ರೀಂಕಾರವು ಕೇವಲವಾಗಿ ಮಾಯೆಯನ್ನು ಪ್ರತಿಪಾದಿಸುವಾಗ ಹಕಾರವು ಶ್ವೇತಪದಾರ್ಥವನ್ನು, ರಕಾರವು ಕೆಂಪುಪಧಾರ್ಥವನ್ನು, ಈಕಾರವು ನೀಲಿವರ್ಣ ವನ್ನೂ ಸೂಚಿಸುವುದರಿಂದ ಸತ್ವರಜಸ್ತಮೋಗುಣಗಳ ಸ್ವಭಾವಗಳನ್ನು ಸೂಚಿ ಸುತ್ತದೆ. ಎಂದು ಹೇಳಿರುವರು. ಅಲ್ಲದೆ ಹ್ರೀಂಕಾರಸ್ವರೂಪವಾದ ಪರಬ್ರಹ್ಮವೇ ಸರ್ವಪ್ರಾಣಿಮಯವಾಗಿಯೂ ಸರ್ವಪ್ರಾಣಿಗಳಲ್ಲೂ ಅಂತರ್ಯಾಮಿಯಾಗಿಯೂ ಬೆಳಗುತ್ತಿರುವುದೆಂಬುದಕ್ಕೆ ಶ್ರುತಿಪ್ರಮಾಣವೂ ಇದೆ.

> ಯಸ್ಸರ್ವೇಷು ಭೂತೇಷು ತಿಷ್ಠ್ಠ ಸರ್ವೇಭ್ಯೋ ಭೂತೇಭ್ಯೋಂತ ರೋಯಂ ಸರ್ವಾಣಿ ಭೂತಾನಿ ನವಿದುರ್ಯಸ್ಯ ಸರ್ವಾಣಿ ಭೂತಾನಿ

ಶರೀರಂ ಯಸ್ಸರ್ವಾಣಿ ಭೂತಾನ್ಯಂತರೋಯ ಮಯತ್ಯೇಷತ ಆತ್ಮಾಂತರ್ಯಾಮ್ಯಮೃತ ಇತಿ ।

ಅಂದರೆ ಯಾರು ಸರ್ವಪ್ರಾಣಿಗಳಲ್ಲೂ ವಾಸಮಾಡುತ್ತಾ ಸರ್ವಪ್ರಾಣಿಗಳಲ್ಲೂ ಅಂತರ್ಯಾಮಿಯಾಗಿರುವನೋ, ಯಾರನ್ನು ಎಲ್ಲಾ ಪ್ರಾಣಿಗಳೂ ತಿಳಿದುಕೊಂಡಿಲ್ಲವೋ, ಎಲ್ಲಾ ಪ್ರಾಣಿಗಳೂ ಯಾರ ಶರೀರವೋ, ಯಾರು ಸರ್ವಾಂತರ್ಯಾಮಿಯಾಗಿ ಬೆಳಗುತ್ತಿರುವನೋ ಅವನೇ ಅಮೃತವೆಂದರೆ ಪರಬ್ರಹ್ಮನು ಎಂಬದಾಗಿ ಹೇಳಲ್ಪಡುವನು. ಎಂದು ಹೇಳಿರುವುದರಿಂದ ಸೃಷ್ಟಿಯ ಸಕಲ ತತ್ವಗಳೂ ಪರಬ್ರಹ್ಮಸ್ವರೂಪವೆಂದು ಪ್ರತಿಪಾದಿಸಲ್ಪಡುವುದಕ್ಕೋಸ್ಕರ ಮಂತ್ರದ ಪ್ರಥಮಪಾದದ ಅಂತ್ಯದಲ್ಲಿ ಹ್ರೀಂಕಾರವು ಇರುವುದಾಗಿದೆ.

ಶ್ರೀಲಲಿತಾಮಂತ್ರದ ಪ್ರಥಮ ಪಾದವಾದ ಕ, ಏ, ಈ, ಲ, ಹ್ರೀಂ ಎಂಬುದರ ರಹಸ್ಯಾರ್ಥವು ಇದುವರೆಗೂ ವಿವರಿಸಿರುವಂತೆ ಪರಬ್ರಹ್ಮದಿಂದ ಈಶ್ವರ ಮೊದಲುಗೊಂಡು ಚರಾಚರಸ್ವರೂಪವಾದ ಜಗತ್ತಿನ ಸಕಲ ಸೃಷ್ಟಿಯ ವಿಚಾರಗಳನ್ನೊಳಗೊಂಡಿರುವುದು. ಮಂತ್ರದ ಎರಡನೆಯ ಪಾದದ ರಹಸ್ಯಾರ್ಥವನ್ನು ತಿಳಿಯಲು ಮುಂದುವರಿಯೋಣ.

———

*

ಶ್ರೀ.

## ನಾಲಕ್ಕನೆಯ ಪ್ರಕರಣ.

# ಶ್ರೀಲಲಿತಾಮಂತ್ರದ ದ್ವಿತೀಯಪಾದದ ತತ್ವಾರ್ಥ.

## (ಹ, ಸ, ಕ, ಹ, ಲ, ಹ್ರೀಂ)

---

ಶ್ರೀಲಲಿತಾಮಂತ್ರದ ಅಂತ್ಯಾಕ್ಷರವಾದ ಹ್ರೀಂ ಬೀಜಾಕ್ಷರವು ಸೃಷ್ಟಿಗೆ ಪೂರ್ವದಲ್ಲಿ ಪರಬ್ರಹ್ಮಮಾತ್ರ ಇತ್ತೆಂಬ ಪರಬ್ರಹ್ಮಸ್ವರೂಪವನ್ನು ಪ್ರತಿಪಾದಿಸುವ ರಹಸ್ಯಾರ್ಥವೆಂದು ತಿಳಿಸಿತು. ಅನಂತರ ಮಂತ್ರದ ಪ್ರಥಮಪಾದವು ಪರಬ್ರಹ್ಮದಿಂದ ಜಗತ್ತಿನ ಸೃಷ್ಟಿಯ ಉದಯದ ವಿಚಾರ ಮತ್ತು ಚರಾಚರಸ್ವರೂಪವಾದ ಜಗತ್ತಿನ ಸಕಲ ಸೃಷ್ಟಿಯು ಪೂರ್ಣವಾಗುವಿಕೆಯ ವಿಚಾರಗಳ ರಹಸ್ಯಾರ್ಥಗಳೆಂದೂ ತಿಳಿಸಿತು. ಮಂತ್ರದ ಎರಡನೆಯ ಪಾದವು ಸೃಷ್ಟಿಯಾದ ಜಗತ್ತಿನ ಸ್ಥಿತಿಯೆಂದರೆ ಜಗತ್ತಿನ ವ್ಯಾಪಾರದ ರಹಸ್ಯಾರ್ಥ ಪ್ರತಿಪಾದಕವಾಗಿದೆ. ಇದನ್ನು ವಿವರಿಸಲು ಮುಂದುವರಿಯೋಣ.

ಶ್ರೀಲಲಿತಾಮಂತ್ರದ ಎರಡನೆಯ ಪಾದದಲ್ಲಿ ಹ, ಸ, ಕ, ಹ, ಲ ಎಂಬ ಅಕ್ಷರಗಳೂ, ಈ ಅಕ್ಷರಗಳ ವಿವರಣೆಗೆ ಶ್ರೀ ಶಂಕರಭಗವತ್ಪಾದರವರು ತಿಳಿಸಿರುವ ರವಿಃ, ಶೀತಕಿರಣಃ, ಸ್ಮರಃ, ಹಂಸಃ, ಶಕ್ರಃ ಎಂಬ ಪದಗಳೂ, ಪಾದದ ಅಂತ್ಯದಲ್ಲಿ ಹ್ರೀಂಕಾರವೂ ಇವೆ. ಇವುಗಳಲ್ಲಿ ಪ್ರಥಮಾಕ್ಷರವಾದ ಹ ಅಕ್ಷರಕ್ಕೆ ರವಿಃ ಎಂಬ ಶ್ರೀ ಶಂಕರಭಗವತ್ಪಾದರವರ ವಿವರಣೆಯು ಇರುವುದು. ಅಂದರೆ ಹ ಅಕ್ಷರವು ಈ ಸ್ಥಳದಲ್ಲಿ ರವಿಯನ್ನು ಪ್ರತಿಪಾದಿಸುತ್ತದೆ. ಹ್ರೀಂಕಾರದ ವಿವರಣೆಯಲ್ಲಿ ಹಕಾರವು ಸತ್‌ಸ್ವರೂಪವಾದ ಪರಬ್ರಹ್ಮವನ್ನು ಪ್ರತಿಪಾದಿಸುವುದೆಂತ ಅನೇಕ ಆಧಾರವಾಕ್ಯಗಳೊಡನೆ ವಿವರಿಸಿರುವುದಷ್ಟೆ? ಹ ಅಕ್ಷರವು ರವಿಗೂ ಹೇಗೆ ಅನ್ವಯವಾಗುವುದೆಂದರೆ— ಹಕಾರದ ತತ್ವವಾದ ಪರಬ್ರಹ್ಮವೇ ರವಿಯಾಗಿರುತ್ತಾನೆ. ರವಿಯು ಪರಬ್ರಹ್ಮನ ಪ್ರತಿಫಲಿತಚೈತನ್ಯನು. ಬಿಂಬದ ಚೈತನ್ಯಕ್ಕೂ ಪ್ರತಿಫಲಿತ ಚೈತನ್ಯಕ್ಕೂ, ಚೈತನ್ಯತ್ವದಲ್ಲಿ ಭೇದವಿಲ್ಲ. ಹೇಗೆಂದರೆ, ಸರ್ವವ್ಯಾಪಿಯಾದ ಸೂರ್ಯನ ಪ್ರಕಾಶದಲ್ಲಿ ರಸಕನ್ನಡಿಯನ್ನು ಹಿಡಿದರೆ ಪ್ರತಿಫಲನ ಪ್ರಕಾಶವು ಉಂಟಾಗುವುದು. ಸೂರ್ಯನ ಪ್ರಕಾಶವೇ ಪ್ರತಿಫಲನಪ್ರಕಾಶವು. ಇದರಂತೆಯೇ ರವಿಯ ಚೈತನ್ಯಕ್ಕೂ ಪರಬ್ರಹ್ಮಚೈತನ್ಯಕ್ಕೂ ಭೇದವಿಲ್ಲ. ರಸಕನ್ನಡಿಯಲ್ಲಿ ಸೂರ್ಯನ ಪ್ರಕಾಶ ಮತ್ತು ಪ್ರತಿಫಲನ ಪ್ರಕಾಶಗಳೆರಡೂ ಇರುವುವು.

ಇದರಂತೆ ರವಿಯಲ್ಲಿ ಪರಬ್ರಹ್ಮ ಚೈತನ್ಯ ಮತ್ತು ಪ್ರತಿಫಲನವಾದ ರವಿಯ ಚೈತನ್ಯಗಳೆರಡೂ ಇರುವುವು. ರಸಕನ್ನಡಿಯಿಂದ ಹೊರಡುವ ಪ್ರತಿಫಲನಕ್ಕೆ ನಮಗೆ ಗೋಚರವಾಗುವ ಸೂರ್ಯಪ್ರಕಾಶವು ಕಾರಣವಾಗಿರುವಂತೆ ರವಿಯ ಪ್ರಕಾಶಸ್ವರೂಪಕ್ಕೆ ಅವನಲ್ಲಿರುವ ಸ್ವಯಂಪ್ರಕಾಶವಾದ ಪರಬ್ರಹ್ಮವೇ ಕಾರಣ ವಾಗಿದೆ. ಆದುದರಿಂದ ಹ ಅಕ್ಷರದ ತತ್ವವಾದ ಪರಬ್ರಹ್ಮವೇ ರವಿಯ ರೂಪ ದಲ್ಲಿರುವುದರಿಂದ ರವಿಯ ತತ್ವಕ್ಕೆ ಹ ಅಕ್ಷರವು ಇರುತ್ತದೆ. ಈ ತತ್ವಾರ್ಥ ಸಮರ್ಥನೆಗೆ ಮಹಾನಾರಾಯಣೋಪನಿಷತ್ತಿನಲ್ಲಿ

"ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷಃ"

ಅಂದರೆ ರವಿಯ ಅಂತರ್ಗತವಾಗಿ ಸ್ವಯಂಪ್ರಕಾಶನಾದ ಪರಬ್ರಹ್ಮನಿರುವನು. ಎಂದು ಹೇಳಿದೆ. ಪ್ರಶ್ನೋಪನಿಷತ್ತಿನಲ್ಲಿ

"ತ್ವಮಂತರಿಕ್ಷೇ ಚರಸಿ ಸೂರ್ಯಸ್ತ್ವಂ ಜ್ಯೋತಿಷಾಂಪತಿಃ"

ಅಂದರೆ ನೀನೇ (ಪರಬ್ರಹ್ಮನೇ) ಸೂರ್ಯನಾಗಿ ಅಂತರಿಕ್ಷದಲ್ಲಿ ಚರಿಸುತ್ತೀಯೆ. ಸರ್ವತೇಜಸ್ಸುಗಳಿಗೂ ಕಾಂತಿಯನ್ನು ಕೊಡತಕ್ಕವನು ನೀನೇ. ಎಂದು ಹೇಳಿದೆ. ಅಲ್ಲದೆ "ಅಸಾವಾದಿತ್ಯೋ ಬ್ರಹ್ಮ" ಈ ಕಾಣುವ ರವಿಯೇ ಪರಬ್ರಹ್ಮನು. ಎಂಬ ಶ್ರುತಿವಾಕ್ಯವೂ ಇರುವುದು. ಅಲ್ಲದೆ ಮಂತ್ರದ ಪ್ರಥಮಪಾದದ ಪ್ರಥ ಮಾಕ್ಷರವಾದ ಕ ಅಕ್ಷರದ ತತ್ವವು ಈಶ್ವರಸ್ವರೂಪವೆಂದು ತಿಳಿಸಿರುವುದಷ್ಟೆ! ಆ ಈಶ್ವರನೇ ಸಗುಣಮೂರ್ತಿಯಾಗಿ ಸೂರ್ಯರೂಪವಾಗಿ ಬೆಳಗುತ್ತಲಿರುವನು. ಈಶ್ವರನು ಸೃಷ್ಟಿಯ ಕಾರ್ಯಗಳಿಗೆ ಹೇಗೆ ನಿಯಂತೃವಾಗಿ ಜಗತ್ಸೃಷ್ಟಿ ಮಾಡಿದನೋ ಹಾಗೆಯೇ ಜಗದ್ವ್ಯಾಪಾರ ನಡೆಯಲು ಸೂರ್ಯರೂಪದಲ್ಲಿ ಜಗದ್ವ್ಯಾಪಾರಕ್ಕೆ ಪ್ರೇರಕನಾಗಿರುವನು. ನಮಗೆ ಪ್ರತ್ಯಕ್ಷವಾಗಿ ಗೋಚರಿಸುವ ಜಗದ್ವ್ಯಾಪಾರ ಪ್ರೇರಕನಾಗಿರುವವನೇ ಸೂರ್ಯಭಗವಂತನು. ಈ ತತ್ವಸಮ ರ್ಥನೆಗೆ

> ನಮಸ್ತೆ ಆದಿತ್ಯತ್ವಮೇವ ಪ್ರತ್ಯಕ್ಷಂ ಕರ್ಮಕರ್ತಾಸಿ । ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ । ತ್ವಮೇವ ಪ್ರತ್ಯಕ್ಷಂ ವಿಷ್ಣುರಸಿ । ತ್ವಮೇವ ಪ್ರತ್ಯಕ್ಷಂ ರುದ್ರೋಽಸಿ ।

ಅಂದರೆ ಎಲೈ ಸೂರ್ಯಭಗವಂತನೆ! ನೀನೇ ಪ್ರತ್ಯಕ್ಷವಾಗಿ ಸರ್ವಜೀವರಾಶಿಗಳ ಕರ್ಮಕ್ಕೆ ಪ್ರೇರಕನಾಗಿರುವೆ. ನೀನೇ ಪ್ರತ್ಯಕ್ಷವಾದ ಬ್ರಹ್ಮನೂ, ವಿಷ್ಣುವೂ, ರುದ್ರನೂ ಆಗಿರುವೆ. ಎಂಬ ಶ್ರುತ್ಯಾಧಾರವಿದೆ. ಅಲ್ಲದೆ ಕೇನೋಪನಿಷತ್ತಿನಲ್ಲಿ

ಪೂಷನ್ನೇಕರ್ಷೆ ಯಮಸೂರ್ಯ ಪ್ರಾಜಾಪತ್ಯ ವ್ಯೂಹರಸ್ಮೀನ್ । ಸಮೂಹ ತೇಜಃ ಯತ್ತೇರೂಪಂ ಕಲ್ಯಾಣತಮಂ । ತತ್ತೇಪಶ್ಯಾಮಿ ಯೋಸಾವಸೌ ಪುರುಷಸ್ಸೋಹಮಸ್ಮಿ ।

ಅಂದರೆ ಜಗತ್ತನ್ನು ಪೋಷಿಸುವ, ಅದ್ವಿತೀಯನಾಗಿರುವ, ಸರ್ವರನ್ನೂ ನಿಯಮಿಸುವ ಎಲೈ ಸೂರ್ಯಭಗವಂತನೆ ! ಮಂಗಳಸ್ವರೂಪವಾದ ನಿನ್ನ ದಿವ್ಯ ರೂಪವನ್ನು ನಿನ್ನ ಅನುಗ್ರಹದಿಂದ ನೋಡುತ್ತಿರುವೆನು. ಪರಬ್ರಹ್ಮಸ್ವರೂಪ ವನ್ನು ಹೊಂದಲು ನಿನ್ನ ತೇಜಸ್ಸು ಮರೆಯಾಗಿರುವುದು. ನಿನ್ನ ತೇಜಸ್ಸಿನಲ್ಲಿ ಅಂತರ್ಯಾಮಿಯಾಗಿರುವ ಆ ಪರಬ್ರಹ್ಮವೇ ನನ್ನ ನಿಜವಾದ ಸ್ವರೂಪವಾಗಿದೆ. ನನ್ನ ನಿಜವಾದ ಸ್ವರೂಪವನ್ನು ಹೊಂದಲು ಅನುಗ್ರಹಮಾಡು. ಎಂದಿರುವುದು.

ರವಿಯು ಪರಬ್ರಹ್ಮಸ್ವರೂಪನೆನ್ನುವುದಕ್ಕೆ ಅನೇಕಾನೇಕ ಶ್ರುತಿ ಪ್ರಮಾಣ ಗಳಿವೆ. ಅಹರಭಿಮಾನ ದೇವತೆಯಾಗಿ ಪ್ರಾಣಿಗಳನ್ನು ರಕ್ಷಿಸತಕ್ಕ ದೇವ ಶ್ರೇಷ್ಠನಾದ ಸೂರ್ಯಭಗವಂತನು ಪ್ರಾಣಿಗಳನ್ನು ಕರ್ಮಾನುಸಾರ ನಿಯಮಿ ಸುತ್ತಾ ಭೂಮ್ಯಾಕಾಶಗಳನ್ನು ಧರಿಸಿ ಪ್ರಾಣಿಗಳನ್ನು ಜಾಗರೂಕನಾಗಿ ಎಲ್ಲಾ ಕಡೆಯಲ್ಲಿಯೂ ಪ್ರಕಾಶಪಡಿಸುತ್ತಾನೆ. ಆದ್ದರಿಂದ ಜಗತ್ತಿನ ವ್ಯಾಪಾರಕ್ಕೆ ಪರ ಬ್ರಹ್ಮವೇ ರವಿಯರೂಪವಾಗಿ ಬೆಳಗುತ್ತಿರುವುದರಿಂದಲೇ ಜಗತ್ತಿನ ವ್ಯಾಪಾರದ ತತ್ವವಾದ ಮಂತ್ರದ ದ್ವಿತೀಯಪಾದದ ಪ್ರಥಮಾಕ್ಷರದ ಸ್ಥಾನವು ರವಿಯ ಸ್ಥಾನ ವಾಗಿದೆ. ಅಲ್ಲದೆ ಹ್ರೀಂ ಬೀಜಾಕ್ಷರದ ಪರಬ್ರಹ್ಮದ ಸತ್ಸ್ವರೂಪ ಪ್ರತಿಪಾದಕ ವಾಗಿ ಪ್ರಥಮಾಕ್ಷರವಾದ ಹ ಅಕ್ಷರವೇ ಮಂತ್ರದ ದ್ವಿತೀಯಪಾದದ ಪ್ರಥಮಾ ಕ್ಷರವಾಗಿರುವುದು.

ಮಂತ್ರದ ದ್ವಿತೀಯಪಾದದ ಎರಡನೆಯ ಅಕ್ಷರವಾದ ಸ ಅಕ್ಷರಕ್ಕೆ ಶ್ರೀ ಶಂಕರಭಗವತ್ಪಾದರವರ ವಿವರಣೆಯಾದ ಶೀತಕಿರಣಃ ಎಂಬುದರ ತತ್ವವನ್ನು ವಿವರಿಸಲು ಪ್ರಾರಂಭಿಸೋಣ. ಶೀತಕಿರಣಃ ಎಂದರೆ ಚಂದ್ರನು. ಶೀತವೆಂದರೆ ಹಿಮ. ಶೀತಕಿರಣವೆಂದರೆ ಅಮೃತೋತ್ಪಾದಕನಾಗಿ ಅಮೃತರೂಪವಾದ ಕಿರಣ ಗಳಿಂದ ಪ್ರಾಣಿಗಳನ್ನು ಜೀವಿಸುವಂತೆ ಮಾಡುವವನು ಶೀತಕಿರಣನು ಅಥವಾ ಚಂದ್ರನು. ಪ್ರಪಂಚದ ಸ್ಥಿತಿಗೆ ಸೂರ್ಯನ ತೇಜಸ್ಸ್ವರೂಪವಾದ ಶಾಖವು ಹೇಗೆ ಅಗತ್ಯವೊ ಹಾಗೆಯೇ ಅಮೃತರೂಪವಾದ ಶೈತ್ಯವೂ ಅಗತ್ಯವಾದುದಾಗಿದೆ ಆದುದರಿಂದ ಪ್ರಪಂಚದ ಸ್ಥಿತಿಗೆ ರವಿ ಮತ್ತು ಚಂದ್ರರು ಬಹು ಮುಖ್ಯರಾಗಿರುವು ದರಿಂದಲೇ ಶ್ರೀಲಲಿತಾಮಂತ್ರದಲ್ಲಿ ರವಿಯ ಪಕ್ಕದಲ್ಲೇ ಚಂದ್ರನಿರುತ್ತಾನೆ. ಮಂತ್ರದ ದ್ವಿತೀಯಪಾದದ ದ್ವಿತೀಯಾಕ್ಷರವಾದ ಸ ಅಕ್ಷರದ ತತ್ವವೂ ಅಮೃತ ಸ್ವರೂಪನಾದ ಚಂದ್ರನ ತತ್ವಕ್ಕೆ ಆಶ್ರಯವಾಗುವುದು. ಈ ತತ್ವಸಮರ್ಥನೆಗೆ

ಜಗನ್ಮಾತೆಯಾದ ಸೀತಾದೇವಿಯ ಹೆಸರಿನಲ್ಲಿರುವ ಸ ಅಕ್ಷರವೂ ಅನ್ವಯ ವಾಗುವುದು. ಸೀತೋಪನಿಷತ್ತಿನಲ್ಲಿ

ಸಕಾರಸ್ಸತ್ಯವಮೃತಂ ಪ್ರಾಪ್ತಸ್ಸೋಮಶ್ಚ ಕೀರ್ತ್ಯತೇ ।

ಅಂದರೆ ಸ ಅಕ್ಷರವು ಸತ್ಯವನ್ನೂ ಅಮೃತವನ್ನೂ ಚಂದ್ರನನ್ನೂ ತಿಳಿಸುತ್ತದೆ. ಎಂದು ಹೇಳಿದೆ. ಅಲ್ಲದೆ ಸ ಅಕ್ಷರದ ತತ್ವಕ್ಕೆ ಅಕ್ಷಮಾಲಿಕೋಪನಿಷತ್ತಿನಲ್ಲಿ

ಓಂ ಸಂಕಾರ ಸ್ವರಕಾರಣ ಸಾರ್ವವರ್ಣಿಕಾಪ್ಸ ಚತ್ವಾರಿಂಶೇಕ್ಷೇ ಪ್ರತಿತಿಷ್ಠ ।

ಅಂದರೆ ಸಕಾರವು ಎಲ್ಲಾ ಸ್ವರಗಳಿಗೂ ಕಾರಣಭೂತವಾದುದು ಮತ್ತು ಎಲ್ಲಾ ಅಕ್ಷರಗಳಲ್ಲಿಯೂ ಇರತಕ್ಕಂಥಾದ್ದಾಗಿ ಅಕ್ಷರಗಳಲ್ಲಿ ನಲವತ್ತೆಂಟನೆಯದಾಗಿದೆ. ಎಂದು ಹೇಳಿದೆ. ಸ ಅಕ್ಷರವು ಎಲ್ಲಾ ಸ್ವರಗಳಿಗೂ ಕಾರಣಭೂತವಾದುದೆಂದರೆ ಪರಬ್ರಹ್ಮತತ್ವದಮೇಲೆಯೇ ನಿಂತಿರುವ ನಮ್ಮ ಸಂಗೀತ ಶಾಸ್ತ್ರದಲ್ಲಿ ಸ ಅಕ್ಷರವು (ಷಡ್ಜಸ್ವರವು) ಸಪ್ತಸ್ವರಗಳಲ್ಲಿ ಸರ್ವಸ್ವರಗಳಿಗೂ ಮೂಲರೂಪವಾಗಿಯೂ ಅಂತ್ಯರೂಪವಾಗಿಯೂ ಸಾಕ್ಷಾತ್ ಪರಬ್ರಹ್ಮವನ್ನು ಪ್ರತಿಪಾದಿಸುವುದಾಗಿಯೂ ಇದೆ. ಈ ತತ್ವದ ವಿವರಣೆಯು ಸರಸ್ವತೀಮಹಿಮಾಪ್ರತಿಪಾದಕವಾದ ವೀಣಾ ರಹಸ್ಯ ಗ್ರಂಥದಲ್ಲಿ ತಿಳಿಸಿರುವುದು. ಅಲ್ಲದೆ ಸ ಅಕ್ಷರವು ಎಲ್ಲಾ ಅಕ್ಷರಗಳಲ್ಲಿಯೂ ವ್ಯಾಪಿಸಿರುವುದೆಂದು ಮೇಲಿನ ಶ್ರುತಿವಾಕ್ಯವು ತಿಳಿಸಿರುವುದರ ತತ್ವವೂ ಕೂಡ ಅಮೃತಸ್ವರೂಪವಾದ ಪರಬ್ರಹ್ಮವೇ ಚಂದ್ರರೂಪವಾಗಿರುವುದೆಂತಲೂ ಸರ್ವ ವ್ಯಾಪಕವಾದುದೆಂತಲೂ ಪ್ರತಿಪಾದಿಸಲ್ಪಡುವುದು.

ಅಲ್ಲದೆ ರವಿಯು ಪಿತೃಕಾರಕ, ಚಂದ್ರನು ಮಾತೃಕಾರಕನೆಂದು ಜ್ಯೋತಿಷ್ಯ ಮುಂತಾದ ಅನೇಕ ಶಾಸ್ತ್ರಗಳು ತಿಳಿಸುತ್ತವೆ. ಪ್ರಕೃತಿ ಪುರುಷತ್ವಗಳ ವಿಭಾಗ ವಾಗುವ ಈಶ್ವರಸೋಪಾನದಲ್ಲಿ ಈಶ್ವರನು ಪುರುಷನೆಂದರೆ ಶಕ್ತನಾಗಿಯೂ, ಪ್ರಕೃತಿಯೇ ಶಕ್ತಿಯಾಗಿಯೂ ಇರುತ್ತಾರೆ. ಅಂದರೆ ಈಶ್ವರನೇ ಜಗತ್ತಿಗೆ ತಂದೆ ಯಾಗಿಯೂ ಶಕ್ತಿಯೇ ಜಗತ್ತಿಗೆ ತಾಯಿಯಾಗಿಯೂ ಇರುತ್ತಾರೆ. ಪರಬ್ರಹ್ಮವು ಶಕ್ತ ಮತ್ತು ಶಕ್ತಿಗಳೆರಡರ ರೂಪವೂ ಆಗಿದೆ. ನಮಗೆ ಸ್ಥೂಲವಾಗಿ ಗೋಚರ ವಾಗುವ ಸೂರ್ಯ ಚಂದ್ರರುಗಳಲ್ಲಿ ಮಾತೃಕಾರಕನಾದ ಚಂದ್ರನಲ್ಲೇ ಶಕ್ತಿಯ ಅಭಿವ್ಯಕ್ತಸ್ಥಾನವಿದೆ. ಆದುದರಿಂದಲೇ ಮಂತ್ರದ ಪ್ರಥಮಪಾದದಲ್ಲಿರುವ ಶಿವಃ, ಶಕ್ತಿಃ ಎಂಬುವುಗಳೇ ಮಂತ್ರದ ದ್ವಿತೀಯಪಾದದಲ್ಲಿ ರವಿಃ, ಶೀತಕಿರಣಃ ಎಂಬವು ಗಳಾಗಿ ನಿಂತಿವೆ. ಪರಾಶಕ್ತಿಯಾದ ಜಗನ್ಮಾತೆಯು ಚಂದ್ರಮಂಡಲದಲ್ಲಿ ನೆಲಿಸಿ ಪ್ರಪಂಚವನ್ನು ಕಾಪಾಡುತ್ತಿರುವಳೆಂಬುದಕ್ಕೆ ತ್ರಿಪುರತಾಪಿನ್ಯುಪನಿಷತ್ತಿನಲ್ಲಿ

ಪರಾಂ ಭಗವತೀಂ ಚಂದ್ರಮಂಡಲಮಧ್ಯವರ್ತಿನೀಂ ಚಂದ್ರಕಳಾಂ ಚಿತ್ಕಳಾಂ ಮಹಾಲಕ್ಷ್ಮೀಂ ಮಹಾತ್ರಿಪುರಾಂ ದೇವೀಂ ಧ್ಯಾಯೇತ್ ।

ಅಂದರೆ ಪರಾಶಕ್ತಿಯಾಗಿಯೂ, ಚಂದ್ರಮಂಡಲ ಮಧ್ಯದಲ್ಲಿರುವವಳಾಗಿಯೂ, ಚಂದ್ರಕಳಾರೂಪಳಾಗಿಯೂ, ಅಮೃತರೂಪಳಾದ ಚಿಚ್ಛಕ್ತಿಯಾಗಿಯೂ, ಮಹಾಲಕ್ಷ್ಮೀದೇವಿಯಾಗಿಯೂ ಆದ ಮಹಾತ್ರಿಪುರಸುಂದರೀ ದೇವಿಯನ್ನು ಧ್ಯಾನಿಸುತ್ತೇನೆ. ಎಂದು ಹೇಳಿರುವುದು. ಮೇಲಿನ ತತ್ವಸಮರ್ಥನೆಗೆ ಶ್ರೀ ಶಂಕರಭಗವತ್ಪಾದರವರು ಸೌಂದರ್ಯಲಹರಿಯಲ್ಲಿ

ಸುಧಾಧಾರಾ ಸಾರೈಶ್ಚರಣಯುಗಳಾಂತ ರ್ವಿಗಳಿತೈಃ ।
ಪ್ರಪಂಚಂ ಸಿಂಚಂತೀಪುನರಪಿ ರಸಾಮ್ನಾಯಮಹಸಃ ॥
ಅವಾಪ್ಯಂ ಸ್ವಾಂ ಭೂಮಿಂ ಭುಜಗನಿಭ ಮಧ್ಯುಷ್ಟವಲಯಂ ।
ಸ್ವಮಾತ್ಮಾನಂ ಕೃತ್ವಾಸ್ವಪಿಷಿಕುಲಕುಂಡೇ ಕುಹರಿಣಿ ॥

**ತಾತ್ಪರ್ಯ**—ಎಲೌ ! ಜಗನ್ಮಾತೆಯೆ ನೀನು ಸಹಸ್ರಾರಕಮಲದಲ್ಲಿರುವ ನಿನ್ನ ಚರಣಯುಗಳದಿಂದ ಜನಿಸಿದ ಅಮೃತವೃಷ್ಟಿ ಪ್ರವಾಹದಿಂದ ದೇಹದಲ್ಲಿರುವ ಎಪ್ಪತ್ತೆರಡು ಸಾವಿರ ನಾಡಿಗಳನ್ನೂ ತೋಯಿಸಿ ಅಮೃತರಸದ ಅತಿಶಯವಾದ ಕಾಂತಿಯುಳ್ಳ ಚಂದ್ರನಮೂಲಕ ಪುನಃ ಬ್ರಹ್ಮರಂಧ್ರದ ಬಾಗಿಲಾದ ಮೂಲಾಧಾರ ಚಕ್ರವನ್ನು ಸೇರಿ ಸರ್ಪದಂತೆ ಕುಂಡಲಾಕಾರವಾಗಿ ತೆಕ್ಕೆ ಹಾಕಿಕೊಂಡು ನಿನ್ನ ಶಕ್ತಿರೂಪವನ್ನು ತಾಳಿ (ಕುಂಡಲಿನೀ ಶಕ್ತಿಯಾಗಿ) ನಿಶ್ಚಲವಾಗಿರುವೆ. ಎಂದು ಹೇಳಿರುತ್ತಾರೆ.

ಮೇಲಿನತತ್ವಾರ್ಥಗಳಿಂದ ಶ್ರೀಲಲಿತಾಮಂತ್ರದ ದ್ವಿತೀಯಪಾದದ ದ್ವಿತೀಯಾಕ್ಷರವಾದ ಸ ಅಕ್ಷರ ಮತ್ತು ಶ್ರೀ ಶಂಕರಭಗವತ್ಪಾದರವರ ವಿವರಣೆಯಾದ ಶೀತಕಿರಣಃ ಎಂಬುವುಗಳ ತತ್ವಗಳು ಪರಬ್ರಹ್ಮಶಕ್ತಿಯೇ ಪ್ರಪಂಚವ್ಯಾಪಾರಕ್ಕೋಸ್ಕರ ಚಂದ್ರರೂಪವಾಗಿರುವುದೆಂತ ಪ್ರತಿಪಾದಿಸುತ್ತವೆ.

ಶ್ರೀಲಲಿತಾಮಂತ್ರದ ದ್ವಿತೀಯಪಾದದ ತೃತೀಯಾಕ್ಷರವಾದ ಕ ಅಕ್ಷರ ಮತ್ತು ಶ್ರೀ ಶಂಕರಭಗವತ್ಪಾದರವರ ವಿವರಣೆಯಾದ ಸ್ಮರಃ ಎಂಬುದರ ತತ್ವವೇನೆಂದರೆ–ಮಂತ್ರದ ದ್ವಿತೀಯಪಾದದ ತತ್ವಾರ್ಥವು ಜಗತ್ತಿನ ವ್ಯಾಪಾರಪ್ರತಿಪಾದಕವಾದುದೆಂದು ತಿಳಿಸಿ ಸೂರ್ಯ ಮತ್ತು ಚಂದ್ರರ ವಿಚಾರವನ್ನು ತಿಳಿಸಿತು. ಜಗತ್ತಿನ ಇರುವಿಕೆಯೆಂದರೆ ಪ್ರಾಣಿಗಳ ವ್ಯಾಪಾರವು ನಡೆಯುವುದಾಗಿದೆ. ಸೃಷ್ಟಿಗೆ ಮನ್ಮಥಬೀಜವು ಹೇಗೆ ಕಾರಣವಾಗಿ ಸೃಷ್ಟಿಯ ತತ್ವವಾದ ಪ್ರಥಮಪಾದದಲ್ಲಿ ಕಾಮಃ ಎಂಬ ರೂಪದಿಂದಿತ್ತೋ ಹಾಗೆಯೇ ಮನ್ಮಥಬೀಜವು ಪ್ರಾಣಿಗಳ

ವ್ಯಾಪಾರಕ್ಕೆ ಕಾರಣವಾದದ್ದಾಗಿ ಸ್ಮರಃ ರೂಪದಲ್ಲಿರುವುದು. ಸ್ಮರಃ ಎಂದರೆ "ಸ್ಮರಂತ್ಯನೇನ ಕಾಮಿನಃ ಕಾಮಿನೀರಿತಿ ಸ್ಮರಃ" ಈತನಿಂದ ಕಾಮುಕರು ಕಾಮಿನಿಯರನ್ನು ಸ್ಮರಿಸುವರಾದಕಾರಣ ಸ್ಮರನು ಎಂಬ ವ್ಯುತ್ಪತ್ತಿಯಾಗುವುದು. ಅಲ್ಲದೆ "ಸ್ಮರ್ಯಂತೆ ಅನೇನ ವಿಷಯಾ ಇತಿ ಸ್ಮರಃ" ಎಂಬ ವ್ಯುತ್ಪತ್ತಿಯೂ ಆಗುವುದು. ಕಾಮುಕರು ಕಾಮಿನಿಯರನ್ನು ಸ್ಮರಿಸುವಿಕೆ ಮತ್ತು ಭೋಗಪಡುವಿಕೆಗಳಿಗೆ ಮನ್ಮಥಶಕ್ತಿಯು ಹೇಗೆ ಕಾರಣವೊ ಹಾಗೆಯೇ ಜೀವರು ಪ್ರಪಂಚದ ವಿಷಯೋಪಭೋಗಗಳನ್ನು ಸ್ಮರಿಸಿಕ್ಕೊಂಡು ವಿಷಯಾಸಕ್ತಿಯಾದ ಜಗದ್ವ್ಯಾಪಾರದಲ್ಲಿರಲು ವಿಷ್ಣುರೂಪವಾದ ಮನ್ಮಥಶಕ್ತಿಯೇ ಕಾರಣವೆಂಬ ತತ್ವಕ್ಕೋಸ್ಕರಲೇ ಮಂತ್ರದ ದ್ವಿತೀಯ ಪಾದದಲ್ಲಿ ಸ್ಮರಃ ಎಂಬುದು ಬಂದಿರುವುದಾಗಿದೆ. ವಿಷಯೋಪಭೋಗಗಳನ್ನು ಅನುಭವಿಸುವಂತೆ ಮಾಡುವ ಮನ್ಮಥಬೀಜವು ಮಂತ್ರದ ದ್ವಿತೀಯಪಾದದಲ್ಲಿ ಇರುವುದರಿಂದ ವಿಷಯೋಪಭೋಗಗಳನ್ನು ಅನುಭವಿಸುವ ಜೀವರ ಸೋಪಾನವು ಕೂಡ ಮಂತ್ರದ ದ್ವಿತೀಯಪಾದದಲ್ಲಿಯೇ ಸ್ಮರಃ ಎಂಬುದರ ಮುಂದಿನ ಅಕ್ಷರದ ವಿವರಣೆಯಾದ ಹಂಸಃ ತತ್ವದಲ್ಲಿಯೇ ಇರುವುದು. ಆದುದರಿಂದ ಸೂರ್ಯ, ಚಂದ್ರ, ಸ್ಮರ ಈ ಮೂವರೂ ಜಗತ್ತಿನ ಇರುವಿಕೆಗೂ ಜೀವರ ವಿಷಯೋಪಭೋಗಗಳ ವ್ಯಾಪಾರಕ್ಕೂ ಕಾರಣರಾಗಿರುತ್ತಾರೆ.

ಕ ಅಕ್ಷರವು ಮಂತ್ರದ ಪ್ರಥಮಪಾದದ ಪ್ರಥಮಾಕ್ಷರವಾಗಿ ಈಶ್ವರ ಸೋಪಾನದ ತತ್ವವಾಗಿ ಬಂದಿತ್ತು ಪುನಃ ಕಕಾರವು ದ್ವಿತೀಯಪಾದದಲ್ಲಿ ಮನ್ಮಥ ಶಕ್ತಿಯಾದ ಸ್ಮರಃ ಎನ್ನುವುದರಲ್ಲಿ ಬಂದಿರುವುದು. ಆದುದರಿಂದ ಸೃಷ್ಟಿ ಸ್ಥಿತಿ ಲಯಗಳನ್ನು ಅನುಸರಿಸಿ ಅಕ್ಷರಶಕ್ತಿಗಳು ಯಾವ ಯಾವ ತತ್ವಗಳ ಶಕ್ತಿಗಳಾಗುವುವೋ ಅಲ್ಪಜ್ಞರಾದ ಅಸ್ಮದಾದಿಗಳಿಗೆ ತಿಳಿಯಲು ಅಸಾಧ್ಯವಾದುದು. ಆದರೂ ಈಶ್ವರನು ಸೃಷ್ಟಿಕಾಮನೆಯೊಡನೆ ಕ ಅಕ್ಷರವನ್ನು ವ್ಯಾಪಿಸಿರುತ್ತಾನಾದ್ದರಿಂದ "ಕಾಮಂ ಜಾಯತೆ ನಿರಂಜನೋ" ಮತ್ತು "ಕಾಮಃ ಕಕಾರಂ ವ್ಯಾಪ್ನೋತಿ" ಎಂಬ ಶ್ರುತ್ಯಾಧಾರಗಳಂತೆ ಕಕಾರವು ಮನ್ಮಥಸ್ಥಾನವಾದ ಸ್ಮರಃ ಎಂಬ ಸ್ಥಾನಕ್ಕೆ ಅನ್ವಯವಾಗುವುದು. ಮುಖ್ಯವಾಗಿ ವಿಷಯ ವ್ಯಾಪಾರಸ್ವರೂಪವಾದ ಅವಿದ್ಯಾಕಾರ್ಯಕ್ಕೂ ಕಾರಣಬೇಕು. ಅವಿದ್ಯವೇ ಸ್ವತಂತ್ರವಾಗಿ ಕಾರಣವಾಗಲಾರದು. ಆದುದರಿಂದ ಸೃಷ್ಟಿಗೆ ಕಾರಣವಾದ ಮನ್ಮಥಶಕ್ತಿಯೇ ವ್ಯಾಪಾರಕ್ಕೂ ಕಾರಣವಾಗಿದೆ. ಸೃಷ್ಟಿವ್ಯಾಪಾರಗಳಿಗೆ ಕಾರಣವಾದ ವಿಷ್ಣುರೂಪವಾದ ಮನ್ಮಥಶಕ್ತಿಯೇ ಮೋಕ್ಷಕ್ಕೂ ಕಾರಣವಾಗುವುದು. ವಿಷಯವ್ಯಾಪಾರದ ಸ್ಮರಣೆಯನ್ನು ತ್ಯಜಿಸಿ ಪರಬ್ರಹ್ಮವನ್ನು ಸ್ಮರಿಸಿಕ್ಕೊಂಡು ಬ್ರಹ್ಮಸಾಕ್ಷಾತ್ಕಾರಕ್ಕೂ ಕಾರಣವಾದುದರಿಂದಲೇ ಸ್ಮರಃ ಎಂಬ ಮನ್ಮಥಶಕ್ತಿಯು ಈ ಸ್ಥಾನದಲ್ಲಿದೆ. ಮೋಕ್ಷಕ್ಕೆ ಅನ್ವಯಿಸಿರುವ ವಿಚಾರವು ಮುಂದೆ ಬರುವುದು.

ಅಲ್ಲದೆ ಕ ಅಕ್ಷರದ ತತ್ವಕ್ಕೆ ಸುಖ ಎಂದು ಶ್ರುತಿಯು ತಿಳಿಸುವುದರಿಂದ ಕ ಅಕ್ಷರದ ತತ್ವವು ಅನಿತ್ಯವಾದ ವಿಷಯಸುಖಕ್ಕೂ ಅನ್ವಯಿಸುವುದು ಮತ್ತು ನಿತ್ಯವಾದ ಆತ್ಮಸುಖಕ್ಕೂ ಅನ್ವಯಿಸುವುದು. ಆದುದರಿಂದ ಕ ಅಕ್ಷರವೂ ಸ್ಮರಃ ಎಂಬ ವಿವರಣೆಯೂ ಈ ಸ್ಥಳದಲ್ಲಿರುವುದು. ವಿಷಯೋಪಭೋಗಗಳನ್ನು ಅನುಭವಿಸುವ ಜೀವರ ಸೋಪಾನವಾದ ಮುಂದಿನ ಅಕ್ಷರದ ತತ್ವವನ್ನು ಪ್ರಾರಂಭಿಸೋಣ.

ಶ್ರೀಲಲಿತಾಮಂತ್ರದ ದ್ವಿತೀಯಪಾದದ ನಾಲಕ್ಕನೆಯ ಅಕ್ಷರವಾದ ಹ ಅಕ್ಷರ ಮತ್ತು ಇದಕ್ಕೆ ಶ್ರೀ ಶಂಕರಭಗವತ್ಪಾದರವರ ವಿವರಣೆಯಾದ ಹಂಸಃ ಎಂಬುದರ ತತ್ವವು ವಿಷಯೋಪಭೋಗಗಳನ್ನು ಅನುಭವಿಸುವ ಜೀವರ ಸೋಪಾನ ಮತ್ತು ಜೀವನು ವಿಷಯೋಪಭೋಗಗಳನ್ನು ಅನಿತ್ಯವಾದವುಗಳೆಂದು ತಿಳಿದು ನಿತ್ಯವಾದ ಪರಮಾತ್ಮೇಚ್ಛೆಗೆ ತಿರುಗುವ ಸೋಪಾನಗಳನ್ನು ಪ್ರತಿಪಾದಿಸುತ್ತದೆ. ಹ ಅಕ್ಷರಕ್ಕೆ ಹಂಸಃ ಎಂಬ ಶ್ರೀ ಶಂಕರಭಗವತ್ಪಾದರವರ ವಿವರಣೆಯು ಇರುವುದರಿಂದ ಹಂಸಃ ಪದದ ಅರ್ಥವು ಜೀವನಿಗೂ ಪರಬ್ರಹ್ಮನಿಗೂ ಅನ್ವಯವಾಗುವುದು. ಜೀವನು ಹಂಸನೆಂದು ಕರೆಯಲು ಕಾರಣವೇನೆಂದರೆ, ಧ್ಯಾನಬಿಂದು ಮುಂತಾದ ಉಪನಿಷತ್ತುಗಳಲ್ಲಿ

ಹಕಾರೇಣ ಬಹಿರ್ಯಾತಿ ಸಕಾರೇಣ ವಿಶೇತ್ಪುನಃ ।
ಹಂಸ ಹಂಸೇತ್ಯಮುಂ ಮಂತ್ರಂ ಜೀವೋ ಜಪತಿ ಸರ್ವದಾ ॥

ಅಂದರೆ ಶ್ವಾಸೋಚ್ಛ್ವಾಸವು ಹಕಾರದಿಂದ ಹೊರಕ್ಕೆ ಬರುತ್ತದೆ. ಸಕಾರದಿಂದ ಪುನಃ ಮೇಲಕ್ಕೆ ಹೋಗುವುದು. ಪ್ರಾಣಿಗಳಿಗೆ ಹೀಗೆ ಮೇಲಕ್ಕೂ ಕೆಳಕ್ಕೂ ಹೋಗುತ್ತಲೂ ಬರುತ್ತಲೂ ಶ್ವಾಸೋಚ್ಛ್ವಾಸರೂಪವು ಇದ್ದೇ ಇರುತ್ತದೆ. ಈ ರೀತಿಯಾಗಿ ಹಂಸ ಹಂಸ (ಅಹಂಸಃ) ಎಂಬದಾಗಿ ಜೀವನು ಪುನರಾವರ್ತಿ ಮಾಡುತ್ತಲೇ ಇರುತ್ತಾನೆ. ಎಂದು ಹೇಳಿದೆ.

ಅಂದರೆ ಶ್ವಾಸೋಚ್ಛ್ವಾಸವು ಹೀಗೆ ಏಕಪ್ರಕಾರವಾಗಿ ಆಡುತ್ತಿರುವುದೇ ಪ್ರಾಣಿಗಳು ಜೀವಿಸಿರುವುದಕ್ಕೆ ಕಾರಣ. ಏಕಪ್ರಕಾರವಾಗಿ ಶ್ವಾಸೋಚ್ಛ್ವಾಸವು ಆಡುವುದರಿಂದ ಪ್ರಾಣ, ಅಪಾನವಾಯುಗಳ ಕಾರ್ಯನಡೆದು ದೇಹದ ಕಾರ್ಯಗಳು ನಡೆಯುತ್ತವೆ. ಅಲ್ಲದೆ ಶ್ವಾಸೋಚ್ಛ್ವಾಸವು ಆಡುವುದರಿಂದ ವಿಷಯವೃತ್ತಿಗಳು ಉದ್ಭವಿಸಿ ನಮ್ಮ ಮನಸ್ಸನ್ನು ಯಾವಾಗಲೂ ವಿಷಯಾಕಾರವಾಗಿ ಮಾಡಿರುತ್ತದೆ. ಅನಂತರ ಮನಸ್ಸು ಅವಿದ್ಯಾಶಕ್ತಿಯಾದ ವಿಷಯವೃತ್ತಿ ಮತ್ತು ಇಂದ್ರಿಯಾಕರ್ಷಣಗಳಿಗೆ ಒಳಪಟ್ಟು ವಿಷಯಗಳನ್ನು ಭೋಗಿಸುತ್ತದೆ. ಮನಸ್ಸು ವಿಷಯಭೋಗಗಳಿಗೆ ಪ್ರವರ್ತಿಸಲು ಅಜ್ಞಾನಸ್ವರೂಪವಾದ ವಿಷಯ

ವಾಸನಾ ಮತ್ತು ಶ್ವಾಸೋಚ್ಛ್ವಾಸಗಳೆರಡೂ ಕಾರಣಗಳೆಂದು ಯೋಗಕುಂಡಲಿನೀ ಉಪನಿಷತ್ತಿನಲ್ಲಿ

ಹೇತುದ್ವಯಂ ಹಿ ಚಿತ್ತಸ್ಯ ವಾಸನಾಚ ಸಮೀರಣಃ |

ಎಂದು ಹೇಳಿದೆ. ಆದುದರಿಂದ ಜೀವನು ಹಂಸನೆಂದು ಕರೆಯಲು ಜೀವಿಸಿರುವುದಕ್ಕೆ ಕಾರಣಗಳಾದ ಶ್ವಾಸೋಚ್ಛ್ವಾಸ, ಪಂಚಪ್ರಾಣಗಳಕಾರ್ಯ, ವಿಷಯವಾಸನಾವೃತ್ತಿ ಮತ್ತು ವಿಷಯಭೋಗಾನುಭವಗಳೇ ಕಾರಣಗಳಾಗಿವೆ. ಇವುಗಳಲ್ಲಿ ಮುಖ್ಯವಾದುದು ಶ್ವಾಸೋಚ್ಛ್ವಾಸದಗಮನ. ಶ್ವಾಸೋಚ್ಛ್ವಾಸವಾಡಲು ಕಾರಣವಾದ ಶಕ್ತಿಗಳು ಯಾವುವೆಂದರೆ— ನಮ್ಮಲ್ಲಿ ಸೂರ್ಯಶಕ್ತಿ ಇರುವ ಸೂರ್ಯನಾಡಿ, ಚಂದ್ರಶಕ್ತಿ ಇರುವ ಚಂದ್ರನಾಡಿ ಮತ್ತು ಪ್ರಕೃತಿಭೂತಶಬ್ದವಾಚ್ಯವಾದ ರಜಸ್ತಮೋಗುಣಗಳು. ಈ ಪ್ರತಿಪಾದಕವಾದ ತತ್ವಗಳು ಹಂಸಃ ಎಂಬ ಪದದ ಅಕ್ಷರಗಳಲ್ಲಿಯೇ ಇರುವುವು. ಹಕಾರವೇ ಸೂರ್ಯನಾಗಿಯೂ ಸಕಾರವೇ ಚಂದ್ರನಾಗಿಯೂ ಇರುವರಷ್ಟೆ? ಇವರೇ ಪ್ರಪಂಚವ್ಯಾಪಾರಕ್ಕೆ ಮುಖ್ಯರಾದವರೆಂಬುದು ಮಂತ್ರದ ಈ ಪಾದದಲ್ಲಿಯೇ ಬಂದಿರುವುದು. ಹಂಸ ಎನ್ನುವ ಪದದ ಮಧ್ಯದಲ್ಲಿರುವ ಬಿಂದುವೇ ಪರಬ್ರಹ್ಮಸ್ವರೂಪವಾದ ಹ್ರೀಂ ಬೀಜಾಕ್ಷರದಲ್ಲಿ ಪ್ರಕೃತಿಭೂತ ಶಬ್ದಾತ್ಮಕವಾದುದೆಂದು ಹಿಂದೆಯೇ ತಿಳಿಸಿದೆ. ಅಲ್ಲದೆ ಈ ಪ್ರಕೃತಿಭೂತಶಬ್ದಾತ್ಮಕವಾದ ಬಿಂದುವೇ ಮಂತ್ರದ ಪ್ರಥಮಪಾದವಾದ ಸೃಷ್ಟಿತತ್ವದಲ್ಲಿ ರಜಸ್ತಮೋಗುಣಗಳಾದ ತಮಃಪ್ರಧಾನಪ್ರಕೃತಿಯ ತತ್ವದ್ದೆಂದು ತಿಳಿಸಿಯೇ ಇದೆ. ಈ ತಮಃಪ್ರಧಾನಪ್ರಕೃತಿಯೇ ಜೀವರ ವ್ಯಾಪಾರಸ್ವರೂಪದಲ್ಲಿ ಅಜ್ಞಾನದ ಶಕ್ತಿಯಾಗಿರುತ್ತದೆಂಬ ತತ್ವಪ್ರತಿಪಾದನೆಗೋಸ್ಕರಲೇ ಹಂಸಃ ಪದದ ಮಧ್ಯದಲ್ಲಿ ಬಿಂದುವು ಇರುವುದಾಗಿದೆ. ಅಂದರೆ ಜೀವರೆನಿಸಿಕೊಳ್ಳಬೇಕಾದರೂ ಜೀವತ್ವದ ವ್ಯಾಪಾರಗಳು ನಡೆಯಬೇಕಾದರೂ ಪ್ರತಿದೇಹದಲ್ಲಿರುವ ಸೂರ್ಯನಾಡಿ, ಚಂದ್ರನಾಡಿ ಮತ್ತು ಅವಿದ್ಯಾಶಕ್ತಿಗಳೇ ಮುಖ್ಯಕಾರಣವಾಗಿರುತ್ತವೆ. ಆದುದರಿಂದ ಹಂಸನೆಂದರೆ ಜೀವನು.

ಜೀವನು ಯಾರು? ಇವನ ಸ್ವರೂಪವೇನು? ಇವನಿಗೆ ಜೀವತ್ವಬರಲು ಕಾರಣಗಳೇನೆಂಬುದನ್ನು ಇಲ್ಲಿ ತಿಳಿಸಬೇಕಾಗಿದೆ. ಪ್ರತಿಪ್ರಾಣಿಗಳ ಸ್ಥೂಲದೇಹದಲ್ಲಿ ಸೂಕ್ಷ್ಮಶರೀರವೆನಿಸುವ ಅಂತಃಕರಣವು ಇರುವುದು. ಅಂತಃಕರಣವೇ ಕಾರ್ಯಭೇದದಿಂದ ಬುದ್ಧಿ, ಮನಸ್ಸು, ಅಹಂಕಾರ, ಚಿತ್ತಗಳೆನಿಸಿಕೊಳ್ಳುತ್ತದೆ. ಈ ಅಂತಃಕರಣವು ಪಂಚಭೂತಗಳಲ್ಲಿರುವ ಸತ್ವಾಂಶದಿಂದ ಸೃಷ್ಟಿಯಾಗಿರುವುದು. ದೇಹವ್ಯಾಪಾರಕ್ಕೆ ಒಳಗಡೆಯ ಮುಖ್ಯಸಾಧನ ಸಾಮಗ್ರಿಯವಾಗಿ ಇರುವುದರಿಂದ ಇದಕ್ಕೆ ಅಂತಃಕರಣವೆಂದು ಹೆಸರು ಬಂದಿರುವುದು. ಈ ಅಂತಃಕರಣದಲ್ಲಿ

ಪರಬ್ರಹ್ಮವು ಪ್ರತಿಫಲಿಸಿ ಪ್ರತಿಫಲಿತಚೈತನ್ಯ (ಚಿದಾಭಾಸ ಚೈತನ್ಯ)ವಾಗುವುದು. ಪ್ರತಿಫಲಿಸುವುದೆಂದರೆ ರಸಕನ್ನಡಿಯಲ್ಲಿ ಮುಖವನ್ನು ನೋಡಿದರೆ ಪ್ರತಿಬಿಂಬವು ಕಾಣುವಂತಲ್ಲ. ರಸಕನ್ನಡಿಯಲ್ಲಿ ಕಾಣುವ ನಮ್ಮ ಪ್ರತಿಬಿಂಬವೆನಿಸುವ ನಮ್ಮ ನೆರಳು ನಮ್ಮಂತೆ ಚೈತನ್ಯವುಳ್ಳದ್ದಲ್ಲ. ಪ್ರತಿಫಲನವೆಂದರೆ ಒಂದು ಪ್ರಕಾಶದಿಂದ ಪ್ರತಿಫಲಿಸಿ ಮತ್ತೊಂದು ಪ್ರಕಾಶವಾಗುವಿಕೆಯೆಂದು ಹಿಂದೆ ಸೂರ್ಯನ ತತ್ವದಲ್ಲಿಯೇ ತಿಳಿಸಿರುತ್ತಷ್ಟೆ? ಪ್ರತಿಫಲನ ಪ್ರಕಾಶವು ಬಿಂಬಪ್ರಕಾಶದ ರೂಪವೇ ಆಗಿ ಬಿಂಬಪ್ರಕಾಶದ ಮಹತ್ತನ್ನೆಲ್ಲಾ ಒಳಗೊಂಡಿರುವುದು. ಆದುದರಿಂದ ಅಂತಃಕರಣದಲ್ಲಿ ಪ್ರತಿಫಲಿಸಿದ ಪರಬ್ರಹ್ಮಚೈತನ್ಯವೇ ಪ್ರತಿಫಲಿತಚೈತನ್ಯವೆನಿಸಿಕೊಳ್ಳುತ್ತದೆ. ಈ ಪ್ರತಿಫಲಿತಚೈತನ್ಯವೇ ಜೀವಚೈತನ್ಯವಾಗಿರುವುದು.

ಈ ಪ್ರತಿಫಲಿತಚೈತನ್ಯಕ್ಕೆ ಜೀವಚೈತನ್ಯನೆಂದು ಹೆಸರು ಬರಲು ಕಾರಣವೇನೆಂದರೆ- ಪ್ರತಿಫಲಿತಚೈತನ್ಯನು ಅಂತಃಕರಣಕ್ಕುಂಟಾಗುವ ಮೇಲೆ ತಿಳಿಸಿರುವಂತೆ ಶ್ವಾಸೋಚ್ಛ್ವಾಸ, ವಿಷಯವಾಸನಾವೃತ್ತಿ ಮತ್ತು ಈ ವಿಷಯವಾಸನಾವೃತ್ತಿಗಳ ದೆಸೆಯಿಂದ ಉಂಟಾಗುವ ಇಂದ್ರಿಯಗಳ ಮೂಲಕ ವಿಷಯಭೋಗಗಳ ಅನುಭವ ಇವುಗಳ ಪ್ರಕಾಶಕನಾಗಿ ತಾದಾತ್ಮ್ಯವನ್ನು ಹೊಂದುತ್ತಾನಾದ್ದರಿಂದ ಪ್ರತಿಫಲಿತಚೈತನ್ಯಕ್ಕೆ ಜೀವಚೈತನ್ಯನೆಂಬ ಹೆಸರು ಬಂದಿರುವುದು. ವಿಷಯವಾಸನಾವೃತ್ತಿ ಮತ್ತು ವಿಷಯೋಪ ಭೋಗಗಳಿಗೆ ಕಾರಣವಾಗಿರುವುದೇ ರಜಸ್ತಮೋಗುಣರೂಪವಾದ ತಮಃಪ್ರಧಾನಪ್ರಕೃತಿಯೆಂದು ಮೇಲೆಯೇ ತಿಳಿಸಿರುತ್ತಷ್ಟೆ? ಈ ತಮಃಪ್ರಧಾನಪ್ರಕೃತಿಗೆ ಅಜ್ಞಾನ ಅವಿದ್ಯೆಗಳೆಂದು ಹೆಸರು. ಪ್ರತಿಫಲಿತಚೈತನ್ಯನು ಅಜ್ಞಾನದ ತೊಂದರೆ ಅಂದರೆ ಉಪಾಧಿಯಿಂದಲೇ ಜೀವನೆಂದು ಕರೆಯಲ್ಪಡುವನು. ಈ ತಾತ್ಪರ್ಯಕ್ಕೆ ಶ್ರುತಿವಾಕ್ಯವಿರುವುದು.

ಅವಿದ್ಯೋಪಾಧಿಕೋ ಜೀವಃ ಮಾಯೋಪಾಧಿಕ ಈಶ್ವರಃ ||

ಅಂದರೆ ಜೀವನು ಅವಿದ್ಯೆಯೆಂಬ ಉಪಾಧಿಯಿಂದ ಕೂಡಿದವನು. ಈಶ್ವರನು ಮಾಯಾ ಉಪಾಧಿಯಿಂದ ಕೂಡಿದವನು. ಆದುದರಿಂದ ಮಂತ್ರದ ದ್ವಿತೀಯ ಪಾದದಲ್ಲಿನ ನಾಲಕ್ಕನೆಯ ಅಕ್ಷರವಾದ ಹ ಅಕ್ಷರಕ್ಕೆ ಹಂಸಃ ಎಂಬ ವಿವರಣೆಯ ತತ್ವವು ಅವಿದ್ಯಾಕಾರ್ಯದೊಡಗೂಡಿದ ಜೀವಚೈತನ್ಯನ ಸ್ಥಾನವಾಗಿದೆ. ಹ್ರೀಂಕಾರದಲ್ಲಿರುವ ಬಿಂದುವಿನ ತತ್ವವಾದ ಸರ್ವಪ್ರಕೃತಿಭೂತಶಬ್ದಾತ್ಮಕವಾದ ಬೀಜವು ಸೃಷ್ಟಿಕ್ರಮವನ್ನು ಅನುಸರಿಸಿ ಮಂತ್ರದ ಪ್ರಥಮಪಾದದ ನಾಲಕ್ಕನೆಯ ಅಕ್ಷರದ ತತ್ವದಲ್ಲಿ ತಮಃಪ್ರಧಾನಪ್ರಕೃತಿಯಾಗಿ ಮೊಳಕೆಯಾಗಿ ಬೆಳೆಯಿತು. ಪ್ರಪಂಚ ವ್ಯಾಪಾರದ ತತ್ವವಾದ ಮಂತ್ರದ ದ್ವಿತೀಯಪಾದದ ನಾಲಕ್ಕನೆಯ ಅಕ್ಷರದಲ್ಲೇ ಪುನಃ ತಮಃಪ್ರಧಾನಪ್ರಕೃತಿಯೆಂದರೆ ಅಜ್ಞಾನದ ಕಾರ್ಯವೇ ಬಂದಿರುವುದು.

ಶ್ರೀಲಲಿತಾಮಂತ್ರದಲ್ಲಿ ಪ್ರಥಮಾಕ್ಷರದಿಂದ ಇದುವರೆಗೂ ಜಗತ್ತಿನ ಸೃಷ್ಟಿಯ ಮತ್ತು ಸ್ಥಿತಿಯೆಂದರೆ ವ್ಯಾಪಾರದ ತತ್ವಗಳು ಕ್ರಮವಾಗಿ ಬಂದವು. ಸೃಷ್ಟಿಯಾದ ಜಗತ್ತು ಸ್ಥಿತಿಯಲ್ಲಿಯೇ ನಿಂತಿರುತ್ತದೆಯೇ ಅಥವಾ ಲಯದ ಮಾರ್ಗವನ್ನು ಅನುಸರಿಸಿ ಪುನಃ ಅವ್ಯಕ್ತವಾದ ಬೀಜಸ್ಥಿತಿಗೆ ಬಂದು ಪರಬ್ರಹ್ಮ ಸ್ವರೂಪವಾಗುತ್ತದೆಯೇ ಎಂಬ ಪ್ರಶ್ನೆಯೂ ಮತ್ತು ಅವಿದ್ಯೆಯ ತಾದಾತ್ಮ್ಯದಿಂದ ಪ್ರಕಾಶಕನಾಗಿರುವ ಪ್ರತಿಫಲಿತಚೈತನ್ಯನಿಗೆ ಜೀವತ್ವಹೋಗಿ ತನ್ನ ನಿಜಸ್ವರೂಪ ವಾದ ಪರಬ್ರಹ್ಮನಾಗುತ್ತಾನೆಯೇ ಎಂಬ ಪ್ರಶ್ನೆಗಳು ಸ್ವಾಭಾವಿಕವಾಗಿ ಸರ್ವರಿಗೂ ಉದಯವಾಗತಕ್ಕದ್ದಾಗಿರುವುವು. ಇವುಗಳಿಗೆ ಉತ್ತರವೇನೆಂದರೆ—ಸೃಷ್ಟಿಯಾಗಿ ಸ್ಥಿತಿಯಲ್ಲಿರುವ ಜಗತ್ತು ಲಯಕ್ರಮವನ್ನನುಸರಿಸಿ ಬೀಜವಾದ ಪರಬ್ರಹ್ಮಸ್ವರೂಪ ವಾಗುವುದು. ಜೀವನು ಕೂಡ ಲಯ (ಮೋಕ್ಷ) ದ ಮಾರ್ಗದ ಅಧಿಕಾರಿಯಾಗಿ ಅವಿದ್ಯಾಬಂಧನವನ್ನು ಪರಿಹರಿಸಿಕೊಂಡು ತನ್ನ ಸ್ವಸ್ವರೂಪವಾದ ಪರಬ್ರಹ್ಮ ಸ್ವರೂಪನಾಗಬಹುದು. ಪ್ರಪಂಚವು ಲಯವಾಗುವ, ಜೀವನು ಪರಬ್ರಹ್ಮ ಸ್ವರೂಪನಾಗುವ ಮಾರ್ಗಗಳೆರಡರ ವಿವರಣೆಗಳೂ ಸಾಕ್ಷಾತ್ ಜಗನ್ಮಾತೆಯಾದ ಶ್ರೀಲಲಿತಾಮಹಾತ್ರಿಪುರಸುಂದರೀದೇವಿಯ ಮಂತ್ರದಲ್ಲೇ ಇರುವುದು. ಮಂತ್ರದ ದ್ವಿತೀಯಪಾದದ ಚತುರ್ಥಾಕ್ಷರವಾದ ಹ ಅಕ್ಷರ ಮತ್ತು ಹ ಅಕ್ಷರದ ವಿವರಣೆ ಯಾದ ಹಂಸಃ ಎಂಬುದರಿಂದಲೇ ಪ್ರಾರಂಭವಾಗಿ ಮಂತ್ರಾಂತ್ಯದವರೆಗೆ ಇರುವ ಅಕ್ಷರಗಳ ತತ್ವಗಳಲ್ಲಿಯೇ ಪ್ರತಿಪಾದಿತವಾಗಿವೆ. ಇವುಗಳನ್ನರಿಯಲು ಮುಂದು ವರಿಯೋಣ.

ಹಂಸಃ ಎಂಬ ಪದದ ತತ್ವವು ಜೀವಚೈತನ್ಯನಿಗೆ ಅನ್ವಯವಾದ ವಿಚಾರ ವನ್ನು ಮೇಲೆ ತಿಳಿಸಿತಷ್ಟೆ. ಹಂಸಃ ಎಂಬ ಪದದ ತತ್ವವು ಜೀವಚೈತನ್ಯನು ಜೀವತ್ವಕ್ಕೆ ಕಾರಣವಾದ ಅವಿದ್ಯಾ ಉಪಾಧಿಯಿಂದ ಬಿಡಿಸಿಕೊಂಡು ಸ್ವಸ್ವರೂಪ ವಾದ ಪರಬ್ರಹ್ಮನಾಗುವುದಕ್ಕೂ ಅನ್ವಯವಾಗುವುದು. ಹೇಗೆಂದರೆ, ಮರ ಎಂಬ ಪದವನ್ನು ಏಕಪ್ರಕಾರವಾಗಿ ಉಚ್ಚರಿಸುತ್ತಿದ್ದರೆ ಹೇಗೆ ರಾಮ ಎಂದಾಗುವುದೋ ಹಾಗೆಯೇ ಹಂಸ ಎಂಬ ಪದವನ್ನು ಏಕಪ್ರಕಾರವಾಗಿ ಉಚ್ಚರಿಸುವುದರಿಂದ "ಅಹಂಸಃ, ಸೋಽಹಂ" ಎಂಬ ಪರಿಣಾಮವಾಗುವುದು. ಅಂದರೆ ಆ ಬ್ರಹ್ಮವೇ ನಾನು, ಅನಿತ್ಯವಾದ ಭೂತಾತ್ಮಕವಾದ ದೇಹ ಮತ್ತು ವಿಷಯಗಳು ನಾನಲ್ಲ ವೆಂದು ತಿರುಗಿದರೆ ಹಂಸಃ ಎನ್ನುವುದು ಮಾರ್ಪಟ್ಟು ಸೋಹಂ ಆಗುವುದು. ಹಂಸಃ ಎಂಬ ಪದದಲ್ಲಿನ ಅಕ್ಷರಗಳೇ ಒಂದಕ್ಕೊಂದು ಮಾರ್ಪಡುವುದರಿಂದ ಸೋಹಂ ಆಗುವುದು. ಹಂಸ ಎಂಬ ಪದದಲ್ಲಿನ ಸ ಅಕ್ಷರವು ಪ್ರಥಮಕೆ ಬರುವುದು ಅನಂತರ ಹ ಅಕ್ಷರವು, ತದನಂತರ ಬಿಂದುವು ಬರುವ ಬದಲಾವಣೆ ಗಳಾಗುವುವು. ಅಂದರೆ ಹಂಸ ಎನ್ನುವುದರಲ್ಲಿ ಹ ಅಕ್ಷರಕ್ಕೂ ಸ ಅಕ್ಷರಕೂ

ಮಧ್ಯೆ ಬಿಂದುವು ಇರುವುದರಿಂದ ಎರಡೂ ಜೊತೆಗೆ ಸೇರಲು ಅವಕಾಶವಿಲ್ಲ. ಹಂಸವೇ ಸೋಹಂ ಆದಾಗ ಸ ಅಕ್ಷರವು ಹ ಅಕ್ಷರದೊಡನೆ ಸೇರುವುದು. ಅಂದರೆ ಸ ಅಕ್ಷರದ ತತ್ವವಾದ ಚಂದ್ರನು ಹ ಅಕ್ಷರದ ತತ್ವವಾದ ಸೂರ್ಯ ನೊಡನೆ ಸೇರಿ ಅಮಾವಾಸ್ಯಾ ತತ್ವವುಂಟಾಗುವುದು. ಸೂರ್ಯಚಂದ್ರರು ಸೇರಿದ ಅಮಾವಾಸ್ಯಾ ತತ್ವವೇ ಅವಿದ್ಯಾಬಂಧನದಿಂದ ಬಿಡುಗಡೆಯಾದ ಮೋಕ್ಷ. ಆದುದರಿಂದ ಹಂಸ ಎನ್ನುವ ತತ್ವದಲ್ಲಿಯೇ ಜೀವ ಮತ್ತು ಪರಬ್ರಹ್ಮರ ತತ್ವ ಗಳೂ ಮತ್ತು ಜೀವನು ತನ್ನ ಸ್ವಸ್ವರೂಪವಾದ ಪರಬ್ರಹ್ಮನಾಗಲು ತಿರುಗುವ ದಾರಿಯು ಕ್ರಮವೂ ಇರುವುವು. ಈ ಮೇಲಿನ ತತ್ವಗಳ ಸಮರ್ಥನೆಗೆ ಪಾಶುಪತ ಬ್ರಹ್ಮೋಪನಿಷತ್ತಿನಲ್ಲಿ

> ಮಾನಸಂ ಹಂಸಃ ಸೋಹಂ ಹಂಸಃ । ಇತಿ ತನ್ಮಯ ಯಜ್ಞೋ ನಾದಾನು ಸಂಧಾನಂ । ತನ್ಮಯ ವಿಕಾರೋ ಜೀವಃ । ಪರಮಾತ್ಮರೂಪೋ ಹಂಸಃ । ಹಂಸಃಪ್ರಣವಯೋರಭೇದಃ ।

ಅಂದರೆ ತಿಳಿಯತಕ್ಕವನೂ ಪರಬ್ರಹ್ಮನು. ಅಹಂಪ್ರತ್ಯಯಕ್ಕೆ ವಿಷಯನಾಗಿ ಜೀವಸ್ವರೂಪನಾಗಿರುವ ನಾನು ಪರಬ್ರಹ್ಮನೇ. ಓಂಕಾರನಾದಾನುಸಂಧಾನ ವೆಂದರೆ ಜೀವಬ್ರಹ್ಮಸಾಕ್ಷಾತ್ಕಾರದ ಅನುಸಂಧಾನವು. ಇದೇ ಯಜ್ಞವು. ಜೀವ ಬ್ರಹ್ಮಸಾಕ್ಷಾತ್ಕಾರವನ್ನು ಪಡೆಯದ ಬಹಿರ್ವ್ಯಾಪಾರ ಪ್ರಕಾಶಕನು ಜೀವನು. ಪರಮಾತ್ಮಚೈತನ್ಯವೇ ಜೀವಚೈತನ್ಯನು. ಜೀವಬ್ರಹ್ಮರ ಚೈತನ್ಯದಲ್ಲಿ ಭೇದವಿಲ್ಲ. ಎಂದು ಹೇಳಿದೆ. ಇದೇ ತಾತ್ಪರ್ಯಕ್ಕೆ ಶ್ರೀ ಕೃಷ್ಣಪರಮಾತ್ಮನು ಉತ್ತರ ಗೀತೆಯಲ್ಲಿ

> ಆತ್ಮಮಂತ್ರಸ್ಯ ಹಂಸಸ್ಯ ಪರಸ್ಪರ ಸಮನ್ವಯಾತ್ ।
> ಯೋಗೇನ ಗತಕಾಮಾನಾಂ ಭಾವನಾ ಬ್ರಹ್ಮಚಕ್ಷತೆ ॥

ಅಂದರೆ ಆತ್ಮಮಂತ್ರಸ್ವರೂಪವಾದ ಬ್ರಹ್ಮವೇ ನಾನೆಂದು ಬ್ರಹ್ಮನಿಗೂ ತನಗೂ ಅನ್ಯೋನ್ಯ ಐಕ್ಯದಿಂದ ಸಮಾಧಿಯ ಅಭ್ಯಾಸದಿಂದ ಅವಿದ್ಯಾವೃತ್ತಿಗಳನ್ನು ನಿಗ್ರಹಿಸಿ ದವರು ಹೊಂದುವ ಸ್ವರೂಪವೇ ಪರಬ್ರಹ್ಮಸ್ವರೂಪ. ಎಂದು ಹೇಳಿರುವನು. ಇದೇ ತಾತ್ಪರ್ಯಕ್ಕೆ ಶ್ರೀ ಶಂಕರಭಗವತ್ಪಾದರವರು ಶ್ರೀಲಲಿತಾತ್ರಿಶತೀಭಾಷ್ಯದಲ್ಲಿ

> ಹಂತಿ ದೇಹಾದ್ದೇಹಂ ಗಚ್ಛತಿ ಸ್ವಕರ್ಮವಶೇನೇತಿ ಹಂಸೋಜೀವಃ । ತಸ್ಯ ಗತಿಃ ಪ್ರಾಪ್ಯಸ್ಥಾನಂ ಮುಕ್ತಿರಿತ್ಯರ್ಥಃ । ಅಥವಾಹಂತಿ ಸ್ವಕಾರ್ಯಭೂತಂ ಜಗತ್ ಪ್ರವಿಶತೀತಿ ಹಂಸಃ । ಹಂಸಸ್ತುಪರಮೇಶ್ವರ ಇತಿ ನೃಸಿಂಹ ತಾಪನೀಯೇ ॥

ಅಂದರೆ ತನ್ನ ಕರ್ಮವಶದಿಂದ ಒಂದು ದೇಹದಿಂದ ಮತ್ತೊಂದು ದೇಹಕ್ಕೆ ಹೋಗುತ್ತದೆ. ಅಂತಹ ಜೀವನ ಪ್ರಾಪ್ಯಸ್ಥಾನವು ಮುಕ್ತಿಯಾಗಿರುತ್ತದೆ. ಎಂದು ಅರ್ಥ. ಅಥವಾ ತನ್ನ ಕಾರ್ಯವಾದಂತಹ ಜಗತ್ತನ್ನು ಪ್ರವೇಶಿಸಿ ಅನಂತರ ಉಪಸಂಹಾರವನ್ನೂ ಮಾಡಿಕೊಳ್ಳುವವನಿಗೆ ಹಂಸಃ ಎಂದರ್ಥ. ಹಂಸನೆಂದರೆ ಪರಮೇಶ್ವರನೆಂದು ನೃಸಿಂಹತಾಪನೀಯೋಪನಿಷತ್ತಿನಲ್ಲಿ ಹೇಳಿದೆ. ಎಂದು ಹೇಳಿರುವರು.

ಪರಬ್ರಹ್ಮವೇ ಜೀವಚೈತನ್ಯ ಎನ್ನುವ ತತ್ವಕ್ಕೆ ಸರಿಯಾಗಿ ಪರಬ್ರಹ್ಮತತ್ವ ಪ್ರತಿಪಾದಕವಾದ ಹ್ರೀಂ ಬೀಜಾಕ್ಷರದಲ್ಲಿರುವ ಹಕಾರವೇ ಜೀವಸೋಪಾನವಾದ ಮಂತ್ರದ ದ್ವಿತೀಯಪಾದದ ಚತುರ್ಥಾಕ್ಷರವಾಗಿದೆ. ಅಲ್ಲದೆ ರವಿಯ ತತ್ವದಲ್ಲೂ ಹ ಅಕ್ಷರವೇ ಬಂದಿರುವುದು. ಅಂದರೆ ಪ್ರತಿಫಲಿತಚೈತನ್ಯರಾದ ರವಿಯೂ ಜೀವಾತ್ಮನೂ ಪರಬ್ರಹ್ಮಚೈತನ್ಯರೆಂಬುದು ನಿಸ್ಸಂಶಯವಾದ ವಿಚಾರವಾಗಿರುವುದು. ಪ್ರತಿಫಲಿತಚೈತನ್ಯನಾದ ಜೀವನೇ ಪರಬ್ರಹ್ಮನೆನ್ನುವುದಕ್ಕೆ ಅನೇಕಾನೇಕ ಶ್ರುತಿ ಪ್ರಮಾಣಗಳಿವೆ. ಮಹಾನಾರಾಯಣೋಪನಿಷತ್ತಿನಲ್ಲಿ "ಸರ್ವೇಜೀವಾಶ್ಚ ಸ್ವ ಸ್ವರೂಪಂ ಭಜಂತೆ" ಸಮಸ್ತ ಜೀವರೂ ಸ್ವಸ್ವರೂಪವಾದ ಪರಬ್ರಹ್ಮಸ್ವರೂಪ ವನ್ನು ಪಡೆಯುವರು. ತೇಜೋಬಿಂದೂಪನಿಷತ್ತಿನಲ್ಲಿ "ತ್ವಂ ಬ್ರಹ್ಮಾಸಿ ನಸಂ ಶಯಃ" ನೀನು ಬ್ರಹ್ಮನೆಂಬುದು ನಿಸ್ಸಂಶಯವಾದ ವಿಚಾರ. ಬೃಹದಾರಣ್ಯ ಕೋಪನಿಷತ್ತಿನಲ್ಲಿ "ಅನೇನ ಜೀವೇನಾತ್ಮಾ ನಾನು ಪ್ರವಿಶ್ಯ" ಪರಬ್ರಹ್ಮನು ಜೀವಚೈತನ್ಯನಾಗಿ ಪ್ರವೇಶಿಸುತ್ತಾನೆ. ರಾಮರಹಸ್ಯೋಪನಿಷತ್ತಿನಲ್ಲಿ

ಪರಂಬ್ರಹ್ಮ ರಾಮಚಂದ್ರ ಚಿದಾತ್ಮಕ ಸ್ಸೋಹಂ ।
ಓಂ ತದ್ರಾಮಭದ್ರಂ ಪರಂಜ್ಯೋತೀರಸೋಹಂ ॥

ಅಂದರೆ ಚಿತ್ಸ್ವರೂಪನೆನಿಸಿದ ಪರಬ್ರಹ್ಮನಾದ ಶ್ರೀರಾಮಚಂದ್ರನೇ ನಾನು. ಪರಂಜ್ಯೋತಿ ತತ್ವವೆನಿಸುವ ಶ್ರೀ ರಾಮಚಂದ್ರನೇ ನಾನು. ಎಂಬದಾಗಿ ಹೇಳಿದೆ.

ಆದುದರಿಂದ ಪರಬ್ರಹ್ಮ ಮತ್ತು ಜೀವರ ಚೈತನ್ಯಗಳಲ್ಲಿ ಭೇದವಿಲ್ಲ. ಜೀವನು ಸ್ವಸ್ವರೂಪನಾದ ಪರಬ್ರಹ್ಮನಾಗಲು ಅವಿದ್ಯಾಉಪಾಧಿಯನ್ನು ಬಿಡುಗಡೆಮಾಡಿ ಕೊಳ್ಳಬೇಕು. ಜೀವನು ಅವಿದ್ಯಾಉಪಾಧಿಯನ್ನು ಬಿಡುಗಡೆಮಾಡಿಕೊಳ್ಳಲು ಮಾಡಬೇಕಾದ ಕರ್ತವ್ಯಗಳಲ್ಲಿ ಪ್ರಥಮಕರ್ತವ್ಯವು ಯಾವುದೆಂದರೆ—ವಿಷಯೋಪ ಭೋಗಗಳು ಅನಿತ್ಯವಾದವುಗಳೆಂದೂ, ಸ್ಥೂಲದೇಹವು ತಾನಲ್ಲವೆಂದೂ ತನ್ನ ನಿಜವಾದ ಸ್ವರೂಪವೇ ಪರಬ್ರಹ್ಮವೆಂದೂ ತಿಳುವಳಿಕೆಯನ್ನು ಹೊಂದಿ ನಿಶ್ಚಯ

ಜ್ಞಾನವನ್ನು ಪಡೆಯುವುದೇ ಮೋಕ್ಷದ ದಾರಿಗೆ ಪ್ರಥಮಸೋಪಾನವಾಗಿರುವುದು. ಇದೇ ತಾತ್ಪರ್ಯಕ್ಕೆ ಶ್ರೀ ಶಂಕರಭಗವತ್ಪಾದರವರು ವಿವೇಕಚೂಡಾಮಣಿಯಲ್ಲಿ

ಆದೌ ನಿತ್ಯಾನಿತ್ಯ ವಸ್ತು ವಿವೇಕಃ ಪರಿಗಣ್ಯತೇ ।
ಬ್ರಹ್ಮಸತ್ಯಂ ಜಗನ್ಮಿಥ್ಯೇ ತ್ಯೇವಂ ರೂಪೊವಿನಿಶ್ಚಯಃ ।
ಸೊಯಂ ನಿತ್ಯಾನಿತ್ಯ ವಸ್ತುವಿವೇಕಸ್ಸಮುದಾಹೃತಃ ।

**ತಾತ್ಪರ್ಯ**—ಮೋಕ್ಷಾಧಿಕಾರವನ್ನು ಪಡೆಯುವುದಕ್ಕೆ ಅಸ್ತಿಭಾರದಂತೆ ಪ್ರಥಮವಾದುದು ನಿತ್ಯಾನಿತ್ಯವಸ್ತು ವಿವೇಕವು. ಪರಬ್ರಹ್ಮವು ಸತ್ಯವಾದದ್ದು, ಜಗತ್ತು ಮಿಥ್ಯವಾದದ್ದು ಎಂಬ ಈ ವಿಧವಾದ ನಿಶ್ಚಯಜ್ಞಾನ ಯಾವುದೋ ಅದೇ ನಿತ್ಯಾನಿತ್ಯವಸ್ತು ವಿವೇಕವೆಂದು ಹೇಳಲ್ಪಡುತ್ತದೆ. ಎಂದು ಹೇಳಿರುವರು.

ನಿತ್ಯಾನಿತ್ಯವಸ್ತು ವಿವೇಕವು ಮಂತ್ರದ ಈ ಪಾದದ ಮೂರನೇ ಕ ಅಕ್ಷರ ಮತ್ತು ಇದರ ವಿವರಣೆಯಾದ ಸ್ಮರಃ ಎಂಬುದರಲ್ಲೂ, ನಾಲ್ಕನೇ ಹ ಅಕ್ಷರ ಮತ್ತು ಇದರ ವಿವರಣೆಯಾದ ಹಂಸಃ ಎಂಬುದರಲ್ಲೂ ಅಡಗಿದೆ. ಮನ್ಮಥನ ಸ್ಮರಶಕ್ತಿಯು ಪ್ರಪಂಚವ್ಯಾಪಾರಕ್ಕೂ ಮತ್ತು ಮೋಕ್ಷಕ್ಕೂ ಕಾರಣವಾದುದೆಂದು ಹಿಂದೆ ಈ ಪ್ರಕರಣದಲ್ಲಿಯೇ ತಿಳಿಸಿರುತ್ತಷ್ಟೆ? ಜೀವರಿಗೆ ಅನಿತ್ಯವಾದ ಪ್ರಪಂಚದ ವಿಷಯೋಪಭೋಗಗಳ ಸ್ಮರಣೆಯನ್ನು ತಪ್ಪಿಸಿ ನಿತ್ಯವಾದ ಮೋಕ್ಷದ ದಾರಿಯ ಸ್ಮರಣೆಯನ್ನು ಉಂಟುಮಾಡಿ ಕೊಡುವುದೇ ಮನ್ಮಥನ ಸ್ಮರಶಕ್ತಿಯು. ಜೀವರ ಪುಣ್ಯಪರಿಪಾಕವನ್ನು ಅನುಸರಿಸಿ ಅಂತಹ ಜೀವರಲ್ಲಿ ಮೋಕ್ಷಕಾಮನೆಯು ಮನ್ಮಥನ ಶಕ್ತಿಯಿಂದ ಉದಯವಾಗುವುದು. ಆದುದರಿಂದ ಸೃಷ್ಟಿ ಮತ್ತು ವ್ಯಾಪಾರಗಳಿಗೆ ಯಾವ ಮನ್ಮಥಶಕ್ತಿಯು ಕಾರಣವಾಯಿತೋ ಅದೇ ಮನ್ಮಥ ಶಕ್ತಿಯು ಮೋಕ್ಷಕ್ಕೂ ಮತ್ತು ಜಗತ್ತಿನ ಲಯಕ್ಕೂ ಕಾರಣವಾಗಿದೆ. ವ್ಯಾಪಾರ ದಲ್ಲಿರುವ ಜಗತ್ತನ್ನು ಉಪಸಂಹಾರಮಾಡಿಕೊಳ್ಳಬೇಕೆಂದು ಮನ್ಮಥಶಕ್ತಿಗೆ ಸ್ಮರಣೆಯುಂಟಾದರೆ ಲಯಕ್ಕೆ ಪ್ರಾರಂಭವೇ ಆಗುವುದು. ಸ್ಮರಃ ಇರುವ ಕ ಅಕ್ಷರದ ತತ್ವಾರ್ಥವಾದ ಕಾಮ ಮತ್ತು ಸುಖಗಳು ಮೋಕ್ಷಕಾಮನೆ ಮತ್ತು ಮೋಕ್ಷಸುಖದ ಕಡೆಗೆ ತಿರುಗುವಂತೆ ಮಾಡುವುದು.

ನಿತ್ಯಾನಿತ್ಯವಸ್ತು ವಿವೇಕದ ವಿಚಾರವು ಹಂಸಃ ಎಂಬ ಪದದ ತತ್ವದಲ್ಲಿಯೂ ಅಡಗಿರುವುದೆಂದು ಮೇಲೆ ತಿಳಿಸಿತಷ್ಟೆ? ಇದು ಹೇಗೆಂದರೆ, ಹಂಸ ಎಂಬ ಪದ ದಲ್ಲಿನ ಹ ಅಕ್ಷರದ ವಿವರಣೆಯಾದ ಸೂರ್ಯನಿಗೂ ಸ ಅಕ್ಷರದ ವಿವರಣೆಯಾದ ಚಂದ್ರನಿಗೂ ಮಧ್ಯೆ ಬಿಂದುವಿನ ವಿವರಣೆಯಾದ ತಮಃಪ್ರಧಾನ ಪ್ರಕೃತಿಯೆಂದರೆ ಸ್ಥೂಲ ಜಗತ್ತಿರುವುದು. ಆದುದರಿಂದ ಅನಿತ್ಯವಾದ ಜಗತ್ತು ಸೂರ್ಯ ಚಂದ್ರ ರ ಮಧ್ಯೆ ಇದ್ದುಕೊಂಡು ಸೂರ್ಯಚಂದ್ರರ ಸೇರುವಿಕೆಗೆ ಅಡಚಣೆಯಾಗಿರುವುದು.

ಅಂದರೆ ಜಗತ್ತು ಒಂದು ಕಡೆಯಿಂದ ಚಂದ್ರನಿಂದಲೂ ಮತ್ತೊಂದು ಕಡೆಯಿಂದ ಸೂರ್ಯನಿಂದಲೂ ಪ್ರಕಾಶವನ್ನು ಹೊಂದುತ್ತಿರುವುದು. ಚಂದ್ರನ ಪ್ರಕಾಶವು ಶುದ್ಧಪಾಡ್ಯದಾರಭ್ಯ ಪೌರ್ಣಿಮಾದವರೆಗೆ ಅಭಿವೃದ್ಧಿಯಾಗುತ್ತಾ ಮತ್ತು ಬಹುಳ ಪಾಡ್ಯದಾರಭ್ಯ ಪ್ರಕಾಶವು ಕ್ಷಯಿಸುತ್ತಾ ಅಮಾವಾಸ್ಯೆಗೆ ಸೂರ್ಯಚಂದ್ರರು ಒಂದಾಗುತ್ತಾರೆ. ಚಂದ್ರನ ಈ ಕಳಾಭಿವೃದ್ಧಿ ಮತ್ತು ಕಳಾಕ್ಷೀಣತೆಯು ಜಗತ್ತು ಚಂದ್ರನಿಂದ ಪ್ರಕಾಶಹೊಂದುವುದರ ತಾರತಮ್ಯಕ್ಕೆ ಸೇರಿದುದೇ ಹೊರತು ಚಂದ್ರನಿಗೇ ಕಳಾಭಿವೃದ್ಧಿ ಮತ್ತು ಕಳಾಕ್ಷೀಣತೆಯುಂಟಾಗುವುದಿಲ್ಲ ಚಂದ್ರನು ಇದ್ದಂತೆಯೇ ಇರುತ್ತಾನೆ. ಇದಕ್ಕೆ ಉದಾಹರಣೆಯೇನೆಂದರೆ-ಜನನವಾದಮೇಲೆ ಪ್ರಾಣಿಗಳ ದೇಹವು ಯೌವನದವರೆಗೆ ತಮ್ಮಲ್ಲಿರುವ ಚಂದ್ರಕಳೆಯಿಂದ ಪ್ರಕಾಶವನ್ನು ಗ್ರಹಿಸಿ ಅಭಿವೃದ್ಧಿಗೆ ಬರುವುದು. ಯೌವನ ತಗ್ಗುತ್ತಾ ಬರುವುದೆಂದರೆ ಸ್ಥೂಲದೇಹವು ಚಂದ್ರಕಳೆಯನ್ನು ಗ್ರಹಿಸಲಾರದೆ ಹೋಗುವುದರಿಂದ ಕಳಾಕ್ಷೀಣತೆಯೆಂದೆನಿಸಿಕೊಳ್ಳುವುದು. ಆದುದರಿಂದ ಕಳಾಭಿವೃದ್ಧಿ ಮತ್ತು ಕಳಾಕ್ಷೀಣತೆಗಳು ಸ್ಥೂಲದೇಹಕ್ಕಲ್ಲದೆ ಚಂದ್ರನಶಕ್ತಿಗಲ್ಲ. ಆದುದರಿಂದ ಜಗತ್ತು ಸೃಷ್ಟಿವ್ಯಾಪಾರಗಳ ಅಭಿವೃದ್ಧಿಯನ್ನು ಹೊಂದುವಿಕೆಯೇ ಚಂದ್ರನ ಕಳಾಭಿವೃದ್ಧಿಯ ತತ್ವವಾಗಿರುವುದು. ಜಗತ್ತು ಲಯವನ್ನು ಹೊಂದುವಿಕೆಯೇ ಚಂದ್ರನ ಕಳಾಕ್ಷೀಣತೆಯ ತತ್ವವಾಗಿರುವುದು. ಆದುದರಿಂದ ಜಗತ್ತು ಪ್ರತಿಮಾಸದಲ್ಲೂ ಚಂದ್ರನ ಕಾಂತಿಯನ್ನು ಹೊಂದುವ ತಾರತಮ್ಯವೇ ಚಂದ್ರನ ಕಳಾಭಿವೃದ್ಧಿ ಮತ್ತು ಕಳಾಕ್ಷೀಣತೆಯ ತತ್ವವಾಗಿರುವುದು. ಹೀಗೆ ಜಗತ್ತನ್ನು ಪ್ರಕಾಶಪಡಿಸುತ್ತಿರುವ ಚಂದ್ರನು ಜಗತ್ತಿನ ಉಪಸಂಹಾರಕಾಲದಲ್ಲಿ ಜಗತ್ತಿಗೆ ಕಳಾಕ್ಷೀಣತೆಯನ್ನುಂಟುಮಾಡಿ ಅಂದರೆ ಜಗತ್ತಿಗೆ ಪ್ರಕಾಶವನ್ನು ತಗ್ಗಿಸುತ್ತಾ ತಾನೂ ಸೂರ್ಯನೊಡನೆ ಏಕೀಭವಿಸಿ ಅಮಾವಾಸ್ಯೆಯ ತತ್ವವಾದ ಜಗತ್ತೆಲ್ಲಾ ಸಂಪೂರ್ಣಲಯವಾಗುವಿಕೆಯನ್ನು ಉಂಟುಮಾಡುವನು. ಆದುದರಿಂದ ಅನಿತ್ಯವಾದ ಈ ಜಗತ್ತಿಗೆ ಪ್ರಕಾಶಪಡಿಸುವುದನ್ನು ತಪ್ಪಿಸಿಕೊಂಡು ಚಂದ್ರನು ನಿತ್ಯವಾದುದಾದ ತಾನು ಮತ್ತು ಸೂರ್ಯನು ಸೇರುವುದಕ್ಕೆ ಪ್ರಾರಂಭಿಸುವ ತತ್ವವೇ ನಿತ್ಯಾನಿತ್ಯವಸ್ತುವಿವೇಕದ ತತ್ವವಾಗಿರುವುದು. ಅಂದರೆ ಹಂಸ ಎಂಬ ಪದದಲ್ಲಿರುವ ಸ ಅಕ್ಷರವು ಮಧ್ಯದಲ್ಲಿರುವ ಬಿಂದುವಿನ ಸಂಪರ್ಕವನ್ನು ತಪ್ಪಿಸಿಕೊಂಡು ಹ ಅಕ್ಷರದ ಹಿಂಭಾಗಕ್ಕೆ ಸೇರಿ ಸೋಹಂ ಆಗಲು ಪ್ರಾರಂಭಿಸುವ ತತ್ವವೇ ನಿತ್ಯಾನಿತ್ಯವಸ್ತುವಿವೇಕದ ತತ್ವವಾಗಿರುವುದು.

ಅಲ್ಲದೆ ಹಂಸಕ್ಷೀರನ್ಯಾಯವೆನ್ನುವುದು ಬಹು ಪ್ರಖ್ಯಾತವಾದುದಾಗಿರುವುದು. ಹಂಸಪಕ್ಷಿಯು ಕ್ಷೀರದಲ್ಲಿರತಕ್ಕ ಅಸಾರವಾದ ನೀರನ್ನು ಬೇರ್ಪಡಿಸಿ ಸಾರವಾದುದನ್ನೇ ಸ್ವೀಕರಿಸುವುದು. ಆದುದರಿಂದ ಹಂಸ ಎನ್ನುವ ಪದದಲ್ಲಿ ಹಂಸಕ್ಷೀರನ್ಯಾಯದಂತೆ ಆತ್ಮಾನಾತ್ಮವಿವೇಕಜ್ಞಾನದ ತತ್ವವೂ ನೆಲಗೊಂಡಿರು

ವುದು. ಈ ತತ್ವಸಮರ್ಥನೆಗೆ ಶ್ರೀ ಶಂಕರಭಗವತ್ಪಾದರವರು ಶ್ರೀಲಲಿತಾತ್ರಿಶತೀ ಭಾಷ್ಯದಲ್ಲಿ

"ಹಂಸಶಬ್ದೇನ ನಿತ್ಯಾನಿತ್ಯ ಸಾರಾಸಾರ ಜಗದಾದಿ ವಸ್ತುವಿವೇಕ ಸಮರ್ಥಾಃ"

ಎಂದು ಹೇಳಿರುವರು. ಆದುದರಿಂದ ಹಂಸಃ ಎನ್ನುವುದರಲ್ಲಿ ನಿತ್ಯಾನಿತ್ಯವಸ್ತು ವಿವೇಕದ ತತ್ವವೂ ಅಡಗಿರುವುದು. ಅಲ್ಲದೆ ಹಂಸ ಎಂಬುದರಲ್ಲಿನ ಸ ಅಕ್ಷರದ ತತ್ವದಲ್ಲಿರುವ ಚಂದ್ರನು ಬಿಂದುವಿನ ತತ್ವದಲ್ಲಿರುವ ತಮಃಪ್ರಧಾನಪ್ರಕೃತಿಯ ರೂಪವಾದ ಸ್ಥೂಲಜಗತ್ತಿನ ಸಹವಾಸವನ್ನು ಬಿಟ್ಟು ಹ ಅಕ್ಷರದ ತತ್ವವಾದ ಸೂರ್ಯನ ಜೊತೆಯಲ್ಲಿರಲು ಪ್ರಾರಂಭಿಸುವುದರ ತತ್ವವು ಮುಮುಕ್ಷುವು ಸ್ಥೂಲದೇಹವು ತಾನೆಂಬ ದೇಹಾತ್ಮಬುದ್ಧಿಯನ್ನು ಬಿಡುವಿಕೆಯು ಮತ್ತು ಆತ್ಮ ನಿಷ್ಠರ ಸಂಗದಲ್ಲಿರಬೇಕಾದ ತತ್ವಗಳನ್ನೂ ಪ್ರತಿಪಾದಿಸುವುದು. ಸತ್ಸಂಗದಿಂದ ವಿಷಯೋಪಭೋಗಗಳಲ್ಲಿ ನಿಸ್ಸಂಗತೆಯೂ ನಿರ್ಮೋಹತ್ವವೂ ವಿರಕ್ತಿಯೂ ಉಂಟಾಗಿ ಆತ್ಮತತ್ವವು ನೆಲೆಸುವುದು. ಅಲ್ಲದೆ ನಿತ್ಯಾನಿತ್ಯವಸ್ತು ವಿಚಾರವು ದೃಢತರವಾಗ ಬೇಕಾದಲ್ಲಿ ಸದ್ಗುರುವಿನಲ್ಲಿ ಆತ್ಮಾನಾತ್ಮ ವಿಚಾರಮಾಡುವಿಕೆಯೂ ಹಂಸಃ ಪದದ ತತ್ವದಲ್ಲಿರುವುದು. ಹೇಗೆಂದರೆ "ಹಂತಿತಮಃ ಹಂಸಃ ಹನ ಹಿಂಸಾಗತ್ಯೋಃ" ಅಂಧಕಾರವನ್ನು ಹೋಗಲಾಡಿಸುವವನು ಎಂಬ ವ್ಯುತ್ಪತ್ತಿಯಂತೆ ನಿತ್ಯಾನಿತ್ಯ ವಸ್ತು ವಿಚಾರವನ್ನು ಬೋಧಿಸಿ ಶಿಷ್ಯನಲ್ಲಿರುವ ಅವಿದ್ಯಾಸ್ವರೂಪವಾದ ಅಂಧಕಾರ ವನ್ನು ಹೋಗಲಾಡಿಸುವವನು ಸಾಕ್ಷಾತ್ ಗುರುವು. ಆದುದರಿಂದ ಹಂಸ ಎನ್ನುವುದರಲ್ಲಿ ಶಿಷ್ಯನು ಗುರುವಿನಲ್ಲಿ ವೇದಾಂತ ವಿಚಾರಮಾಡುವಿಕೆಯ ತತ್ವವೂ ಅಡಗಿರುವುದು.

ಈ ಮೇಲಿನ ತತ್ವವಿವರಣೆಗಳಿಂದ ಶ್ರೀಲಲಿತಾಮಂತ್ರದ ದ್ವಿತೀಯಪಾದದ ನಾಲಕ್ಕನೆಯ ಅಕ್ಷರವಾದ ಹ ಅಕ್ಷರ ಮತ್ತು ಇದಕ್ಕೆ ಶ್ರೀ ಶಂಕರಭಗವತ್ಪಾದ ರವರ ವಿವರಣೆಯಾದ ಹಂಸಃ ಎಂಬುದರ ತತ್ವವು ಪರಬ್ರಹ್ಮಚೈತನ್ಯವೇ ಜೀವ ಚೈತನ್ಯವೆಂಬುದನ್ನೂ, ಜೀವಚೈತನ್ಯನಿಗೆ ಅವಿದ್ಯಾವುಪಾಧಿಯೊಂದು ಇರುವು ದೆಂಬುದನ್ನೂ, ಈ ಅವಿದ್ಯಾಉಪಾಧಿಯಿಂದ ನಿವೃತ್ತನಾಗಲು ವಿಷಯೋಪ ಭೋಗಗಳು ಮತ್ತು ಜಗತ್ತು ಅನಿತ್ಯವಾದವುಗಳೆಂದು ಅರಿತು ನಿತ್ಯವಸ್ತುವಾದ ಪರಬ್ರಹ್ಮವೇ ತಾನೆಂದು ತಿಳಿಯಬೇಕೆಂಬುದನ್ನೂ, ಗುರುಮುಖೇನ ವೇದಾಂತ ವಿಚಾರಮಾಡಿ ನಿತ್ಯಾನಿತ್ಯವಸ್ತುವಿವೇಕವನ್ನು ದೃಢಪಡಿಸಿಕೊಳ್ಳಬೇಕೆಂಬುದನ್ನೂ, ವಿರಕ್ತನಾಗಿರಬೇಕೆಂಬುದನ್ನೂ ಮತ್ತು ಆತ್ಮನಿಷ್ಠರ ಸಂಗದಲ್ಲಿರಬೇಕೆಂಬುದನ್ನೂ ಪ್ರತಿಪಾದಿಸುತ್ತದೆ. ಮಂತ್ರದ ದ್ವಿತೀಯಪಾದದ ಪಂಚಮಾಕ್ಷರದ ತತ್ವವೇನೆಂಬು ದನ್ನು ಅರಿಯಲು ಮುಂದುವರಿಯೋಣ.

ಶ್ರೀಲಲಿತಾಮಂತ್ರದ ದ್ವಿತೀಯಪಾದದ ಪಂಚಮಾಕ್ಷರವಾದ ಲ ಅಕ್ಷರದ ಶ್ರೀ ಶಂಕರಭಗವತ್ಪಾದರವರ ವಿವರಣೆಯಾದ ಶಕ್ರಃ ಎಂಬುದರ ತತ್ವವೇನೆಂದರೆ— ಲ ಅಕ್ಷರವು ಹಿಂದೆ ಮಂತ್ರದ ಪ್ರಥಮಪಾದದಲ್ಲಿ ನಾಲಕ್ಕನೆಯ ಅಕ್ಷರವಾಗಿ ತಮಃಪ್ರಧಾನಪ್ರಕೃತಿ ಮತ್ತು ಇದರ ಕಾರ್ಯವಾದ ಸ್ಥೂಲಜಗತ್ತಿನ ಸೃಷ್ಟಿಯ ತತ್ವದಲ್ಲಿ ಬಂದಿತ್ತು. ಮಂತ್ರದ ಎರಡನೆಯ ಪಾದದ ಲ ಅಕ್ಷರವು ಕೂಡ ಮಿಥ್ಯಾಭೂತವಾದ ಜಗತ್ತಿನವ್ಯಾಪಾರದ ಪೂರ್ಣಸ್ಥಿತಿಯನ್ನೂ, ಜಗತ್ತಿನ ವ್ಯಾಪಾರ ದಲ್ಲಿ ರಾಕ್ಷಸಸ್ವರೂಪವಾದ ಅಧರ್ಮವನ್ನು ತುಳಿದು ದೇವತೆಗಳ ಸ್ವರೂಪವಾದ ಧರ್ಮವೇ ಪ್ರಧಾನವಾಗಿರುವಿಕೆಯನ್ನೂ, ಮುಮುಕ್ಷುವು ಅವಿದ್ಯಾನಿಗ್ರಹಕ್ಕೆ ಶಕ್ತ ನಾಗಲು ಆತ್ಮವಿಚಾರದ ಮನನ, ಆಹಾರ ನಿಯಮ, ಮೋಕ್ಷವನ್ನು ಪಡೆಯುವ ಧೀರತ್ವ, ಭಕ್ತಿ, ಸತ್ಕರ್ಮಾನುಷ್ಠಾನ, ವಿರಕ್ತಿ, ದೇವತೋಪಾಸನೆ, ಯಮ, ನಿಯಮ, ಆಸನ, ಪ್ರಾಣಾಯಾಮ ಮುಂತಾದ ಅನುಷ್ಠಾನಗಳ ತತ್ವಾರ್ಥಗಳನ್ನೂ ಒಳಗೊಂಡಿರುವುದು.

ಮಂತ್ರದ ದ್ವಿತೀಯಪಾದದಲ್ಲಿರುವ ಲ ಅಕ್ಷರವು ಸ್ಥೂಲಜಗತ್ತಿನ ವ್ಯಾಪಾರಕ್ಕೆ ಸಂಬಂಧಪಟ್ಟುದುದಾಗಿದೆ. ಮಂತ್ರದ ಪ್ರಥಮಪಾದದ ಲ ಅಕ್ಷರವು ಸ್ಥೂಲ ಜಗತ್ತಿನ ಸೃಷ್ಟಿಗೆ ಸಂಬಂಧಪಟ್ಟಿರುವುದು. ಆದುದರಿಂದ ಪ್ರಥಮಪಾದದ ಲ ಅಕ್ಷರಕ್ಕೂ ದ್ವಿತೀಯಪಾದದ ಲ ಅಕ್ಷರಕ್ಕೂ ಸ್ವರೂಪತಃ ಏನೂ ಭೇದವಿಲ್ಲ. ಆದರೆ ಶ್ರೀ ಶಂಕರಭಗವತ್ಪಾದರವರು ಪ್ರಥಮಪಾದದ ಲ ಅಕ್ಷರಕ್ಕೆ ಕ್ಷಿತಿಃ ಎಂಬ ದಾಗಿಯೂ ದ್ವಿತೀಯಪಾದದ ಲ ಅಕ್ಷರಕ್ಕೆ ಶಕ್ರಃ ಎಂಬದಾಗಿಯೂ ವಿವರಣೆ ಬರೆದಿರುತ್ತಾರೆ. ಇದು ಸ್ಥೂಲಜಗತ್ತಿನ ಸೃಷ್ಟಿ ಮತ್ತು ವ್ಯಾಪಾರದ ತತ್ವಕ್ಕನು ಸಾರವಾಗಿದೆ. ಶಕ್ರಃ ಎಂದರೆ "ಶಕ್ನೋತಿ ದುಷ್ಟಜಯ ಇತಿ ಶಕ್ರಃ ಶಕ್ಲೃಶಕ್ತೌ" ದುಷ್ಟರ ಜಯದಲ್ಲಿ ಶಕ್ತನು ಎಂದು ಅರ್ಥವಾಗುವುದು. ದೇವತೆಗಳಿಗೆ ಒಡೆಯ ನಾದ ದೇವೇಂದ್ರನಿಗೆ ಶಕ್ರನು ಎಂದು ಹೆಸರು. ಶ್ರೀ ಶಂಕರಭಗವತ್ಪಾದರವರು ಇದೇ ತಾತ್ಪರ್ಯಕ್ಕೆ ಶ್ರೀಲಲಿತಾತ್ರಿಶತೀಭಾಷ್ಯದಲ್ಲಿ

ಲಕಾರಸ್ಯ ಶಕ್ರಬೀಜಸ್ಯೇವಾರ್ಥಃ ಸೇಂದ್ರ ಇತಿ ಶ್ರುತೇಃ ।

ಲಕಾರಕ್ಕೆ ಇಂದ್ರಬೀಜದ ಅರ್ಥ ಕೊಡಲ್ಪಟ್ಟಿರುವುದರಿಂದ ಇಂದ್ರ ಎಂಬ ದಾಗಿ ಶ್ರುತಿಪ್ರಮಾಣ. ಎಂದು ಹೇಳಿರುತ್ತಾರೆ. ಇಂದ್ರನು ದುಷ್ಟರ ಜಯದಲ್ಲಿ ಶಕ್ತನೆಂದರೆ—ದುಷ್ಟತನವೇ ರಾಕ್ಷಸತನ. ಅವಿದ್ಯೆಯೇ ರಾಕ್ಷಸತ್ವ. ದೇವತ್ವ ವಾದುದೇ ವಿದ್ಯೆ. ಆದುದರಿಂದ ಮುಮುಕ್ಷುವಾದವನು ಅವಿದ್ಯಾಶಕ್ತಿಗಳನ್ನು ನಿಗ್ರಹಿಸಲು ಶಕ್ತನಾಗಬೇಕೆಂಬುದೇ ಶಕ್ರನ ತತ್ವವಾಗಿರುವುದು. ಮುಮುಕ್ಷುವು ಅವಿದ್ಯಾಶಕ್ತಿಗಳನ್ನು ನಿಗ್ರಹಿಸಲು ಶಕ್ತಿಯನ್ನು ಪಡೆಯಬೇಕಾದಲ್ಲಿ ಗುರುಮುಖೇನ

ಶ್ರವಣಮಾಡಿದ ಆತ್ಮವಿಚಾರವನ್ನು ಮನನಮಾಡಿಕೊಂಡು ಶಾಸ್ತ್ರದ ಸಾರಭೂತ ವಾದ ಬ್ರಹ್ಮವೇನಾನೆಂದು ಪರಾಭಕ್ತಿಯಿಂದ (ಸೋಹಂ) ಚಿಂತಿಸುತ್ತಿರಬೇಕು. ರಾಕ್ಷಸಸ್ವರೂಪವಾದ ಆಹಾರಗಳನ್ನು ತೆಗೆದುಕೊಳ್ಳದೆ ಸಾತ್ವಿಕಾಹಾರವನ್ನು ನಿಯಮವಾಗಿ ತೆಗೆದುಕೊಳ್ಳಬೇಕು ವಿಷಯೋಪಭೋಗಗಳಲ್ಲಿ ವಿರಕ್ತನಾಗ ಬೇಕು. ಸತ್ಕರ್ಮಾನುಷ್ಠಾನದಿಂದ ದೇವತೋಪಾಸನೆ ಮಾಡಬೇಕು. ಅಹಿಂಸ ಶಮ, ದಮ ಮುಂತಾದವುಗಳಲ್ಲಿ ನಿರತನಾಗಿರಬೇಕು. ದೇಹದಲ್ಲಿರುವ ರಾಕ್ಷಸ ಸ್ವರೂಪವಾದ ಕಲ್ಮಷಗಳನ್ನು ಹೋಗಲಾಡಿಸಿ ಧ್ಯಾನಮಾಡಲು ಯೋಗ್ಯತೆಯನ್ನು ಪಡೆಯುವ ಆಸನ ಪ್ರಾಣಾಯಾಮಗಳನ್ನು ಅಭ್ಯಾಸಮಾಡಬೇಕು. ಎಷ್ಟೇ ಕಷ್ಟಬಂದರೂ ಸಹಿಸಿ ಮೋಕ್ಷಸಾಮ್ರಾಜ್ಯವನ್ನು ಹೊಂದುತ್ತೇನೆಂಬ ಧೀರತ್ವವೂ ಇರಬೇಕು. ದುಷ್ಟವಾದ ಅಜ್ಞಾನವನ್ನು ನಿಗ್ರಹಿಸಲು ಶಕ್ತನಾಗಬೇಕಾದರೆ ಮೇಲೆ ವಿವರಿಸಿರುವ ವಿಚಾರಗಳೆಲ್ಲಾ ಮುಮುಕ್ಷುವಿಗೆ ಅತ್ಯವಶ್ಯಕವಾಗಿ ಬೇಕಾ ಗುವುದು. ಈ ಸಾಧನಗಳಿಂದ ಮುಮುಕ್ಷುವು ತನ್ನಲ್ಲಿರುವ ಅವಿದ್ಯಾಶಕ್ತಿಗಳ ಬಲವನ್ನು ಕುಗ್ಗಿಸುತ್ತಾಬರುವುದರಿಂದ ಸತ್ವಗುಣಾವಲಂಬಿಯಾಗಿ ದೈವೀಸಂಪ ತ್ತನ್ನು ಪಡೆದು ದೇವತೆಗಳ ಸಮಾನನಾಗುವನು. ಇದೇ ಶಕ್ರಃ ಎನ್ನುವುದರ ತತ್ವವಾಗಿರುವುದು.

ಶಕ್ರಃ ಎನ್ನುವದರಲ್ಲಿರುವ ಮತ್ತೊಂದು ತತ್ವವೇನೆಂದರೆ—ಸೃಷ್ಟಿಸಿದ ಜಗತ್ತು ವ್ಯಾಪಾರದ ಸ್ಥಿತಿಯಲ್ಲಿರುವುದಷ್ಟೆ? ಇಂತಹ ಜಗದ್ವ್ಯಾಪಾರದಲ್ಲಿ ರಾಕ್ಷಸಸ್ವರೂಪವಾದ ಅಧರ್ಮವು ಪ್ರಧಾನವಾಗದೆ ದೇವತೆಗಳ ಸ್ವರೂಪವಾದ ಧರ್ಮವೇ ಮೇಲ್ಮೆಯಾಗಿ ನಿಂತಿರಬೇಕೆಂಬುದು ಈಶ್ವರನ ನಿಯಮವಾಗಿರು ತ್ತೆಂಬುದನ್ನು ಶಕ್ರಃ ಪದದ ತತ್ವವು ಪ್ರತಿಪಾದಿಸುವುದು. ಅಲ್ಲದೆ ದೇವೇಂದ್ರನ ಪದವಿಯೇ ಅಂತ್ಯವಾಗುಳ್ಳ, ಧರ್ಮಮಾರ್ಗವೇ ಮೇಲ್ಮೆಯಾಗಿರುವ ಜಗತ್ತಿನ ವ್ಯಾಪಾರದ ಪೂರ್ಣತ್ವದ ಮತ್ತು ದೈವೀಸಂಪತ್ತಿಯ ಪೂರ್ಣನಡೆವಳಿಕೆಯುಳ್ಳ ಮುಮುಕ್ಷುವಿನ ತತ್ವಪ್ರತಿಪಾದಕವೇ ಲ ಅಕ್ಷರ ಮತ್ತು ಶಕ್ರಃ ಎಂಬುದರ ರಹಸ್ಯಾರ್ಥವಾಗಿರುವುದು.

ಮಂತ್ರದ ದ್ವಿತೀಯಪಾದದ ಅಂತ್ಯದಲ್ಲಿರುವ ಹ್ರೀಂಕಾರದ ತತ್ವ ವೇನೆಂದರೆ—ಜಗತ್ತು ಸೃಷ್ಟಿಯಾಗಿ ವ್ಯಾಪಾರದಲ್ಲಿರುವುದೆಂತ ಮಂತ್ರದ ಎರಡನೆಯ ಪಾದದ ತತ್ವವಾಗಿರುವುದಷ್ಟೆ? ಜಗತ್ತು ಸೃಷ್ಟಿಯಾಗಿ ದೇವೇಂದ್ರಪದವಿಯೇ ಅಂತ್ಯವಾಗುಳ್ಳ ಮತ್ತು ದೈವೀಸಂಪತ್ತಿನ ಪೂರ್ಣನಡೆವಳಿಕೆಯುಳ್ಳ ಮುಮುಕ್ಷು ಗಳುಳ್ಳ ಜಗತ್ತು ವ್ಯಾಪಾರದಲ್ಲಿರುವುದರ ಸ್ವರೂಪವೂ ಕೂಡ ಪರಬ್ರಹ್ಮಸ್ವರೂಪ ವಾಗಿರುವುದೆಂಬ ತತ್ವದ ಪ್ರತಿಪಾದನೆಗೋಸ್ಕರಲೇ ಮಂತ್ರದ ಎರಡನೆಯಪಾದದ ಅಂತ್ಯದಲ್ಲಿ ಹ್ರೀಂಕಾರವು ಇರುವುದಾಗಿದೆ. ವ್ಯಕ್ತವಾಗಿ ಕಾಣುವ ವ್ಯಾಪಾರ

ದೊಡಗೂಡಿದ ಸ್ಥೂಲಬ್ರಹ್ಮಾಂಡವೇ ದೇಹವಾಗಿ ಉಳ್ಳವನಿಗೆ ವಿರಾಟ್‌ಪುರುಷ ನೆಂದು ಶಾಸ್ತ್ರವು ತಿಳಿಸುವುದು. ಪರಬ್ರಹ್ಮನೇ ವಿರಾಟ್‌ಪುರುಷನಾಗಿರುವನು. ಈ ತತ್ವಸಮರ್ಥನೆಗೆ ಭಗವದ್ಗೀತೆಯಲ್ಲಿ

> ಪಶ್ಯಾಮಿ ದೇವಾಂಸ್ತವದೇವ ದೇಹೇ ಸರ್ವಾಂಸ್ತಥಾಭೂತ ವಿಶೇಷಸನ್ಘಾನ್ |
> ಬ್ರಹ್ಮಾಣ ಮೀಶಂ ಕಮಲಾಸನಸ್ಥ ಮೃಷೀಂಶ್ಚ ಸರ್ವಾನುರಗಾಂಶ್ಚ ದಿವ್ಯಾನ್ | ದ್ಯಾವಾಪೃಥಿವ್ಯೋ ರಿದಮನ್ತರಂ ಹಿ ವ್ಯಾಪ್ತಂ ತ್ವಯೈಕೇನ ದಿಶಶ್ಚಸರ್ವಾಃ |

**ತಾತ್ಪರ್ಯ**—ಹೇ ದೇವ ! ನಿನ್ನ ದೇಹದಲ್ಲಿ ದೇವತೆಗಳು ಆದಿತ್ಯರು ಮೊದಲಾದವರೂ, ಸ್ಥಾವರಜಂಗಮಾತ್ಮಕವಾದ ಎಲ್ಲಾ ವಸ್ತುಗಳೂ, ವಸಿಷ್ಠರೇ ಮೊದಲಾದ ಎಲ್ಲಾ ಋಷಿಗಳೂ, ವಾಸುಕೀ ಮೊದಲಾದ ಉರಗಗಳೂ, ಈ ಎಲ್ಲವುಗಳ ಅಧಿಪತಿಯಾದ ಚತುರ್ಮುಖಬ್ರಹ್ಮನೂ ನನಗೆ ಕಾಣಬರುತ್ತಾರೆ. ಎಲ್ಲಕ್ಕೂ ಮೇಲಿರುವ ಸತ್ಯಲೋಕಕ್ಕೂ, ಎಲ್ಲಕ್ಕೂ ಕೆಳಗಿರುವ ಪಾತಾಳ ಲೋಕಕ್ಕೂ ನಡುವೆ ಎಲ್ಲಾ ದಿಕ್ಕುಗಳಲ್ಲಿಯೂ ನೀನೊಬ್ಬನೇ ತುಂಬಿಕೊಂಡಿರುವೆ. ಎಂದು ಹೇಳಿದೆ.

ಆದುದರಿಂದ ವ್ಯಾಪಾರದಿಂದಿರುವ ವಿಶ್ವವೆಲ್ಲಾ ಪರಬ್ರಹ್ಮಸ್ವರೂಪಿಣಿ ಯಾದ ಶ್ರೀಲಲಿತಾತ್ರಿಪುರಸುಂದರಿಯೇ ಆಗಿರುವಳೆಂಬ ತತ್ವಾರ್ಥಪ್ರತಿಪಾದನೆ ಗೋಸ್ಕರಲೇ ಪರಬ್ರಹ್ಮಪ್ರತಿಪಾದಕವಾದ ಹ್ರೀಂಕಾರವು ದ್ವಿತೀಯಪಾದದ ಅಂತ್ಯ ವಲ್ಲಿರುವುದಾಗಿದೆ.

---

*

ಶ್ರೀ.

## ಐದನೆಯ ಪ್ರಕರಣ.

# ಶ್ರೀಲಲಿತಾಮಂತ್ರದ ತೃತೀಯಪಾದದ ತತ್ವಾರ್ಥ.

## (ಸ, ಕ, ಲ, ಹ್ರೀಂ)

---

ಶ್ರೀಲಲಿತಾಮಂತ್ರದ ತೃತೀಯ ಪಾದದಲ್ಲಿ ಸ, ಕ, ಲ, ಎಂಬ ಮೂರು ಅಕ್ಷರಗಳೂ ಇವುಗಳಿಗೆ ಶ್ರೀ ಶಂಕರಭಗವತ್ಪಾದರವರ ವಿವರಣೆಯಾದ ಪರಾ, ಮಾರಃ, ಹರಿಃ ಎಂಬ ಪದಗಳೂ ಅಂತ್ಯದಲ್ಲಿ ಹ್ರೀಂ ಬೀಜಾಕ್ಷರವೂ ಇರುವುವು. ಮಂತ್ರದ ಪ್ರಥಮಪಾದವು ಜಗತ್ತಿನ ಸೃಷ್ಟಿಯ, ದ್ವಿತೀಯಪಾದವು ಸ್ಥಿತಿಯ ತತ್ವಗಳಾಗಿವೆಯಷ್ಟೆ ! ಈ ಮೂರನೆಯಪಾದವು ಲಯದ ರಹಸ್ಯಾರ್ಥಪ್ರತಿಪಾದಕವಾಗಿರುವುದು. ತೃತೀಯ ಪಾದದಲ್ಲಿರುವ ಸ, ಕ, ಲ ಎಂಬ ಮೂರು ಅಕ್ಷರಗಳಲ್ಲಿ ಪ್ರಥಮಾಕ್ಷರವಾದ ಸ ಅಕ್ಷರವು ಮಂತ್ರದ ದ್ವಿತೀಯಪಾದದಲ್ಲಿ ಚಂದ್ರನ ತತ್ವಕ್ಕೆ ಬಂದಿತ್ತು. ಈ ಸ್ಥಳದಲ್ಲಿನ ಸ ಅಕ್ಷರಕ್ಕೆ ಪರಾ ಎಂಬ ವಿವರಣೆಯನ್ನು ಕೊಟ್ಟಿರುವರು. ಚಂದ್ರ ಮತ್ತು ಪರಾ ಎಂಬೆರಡರ ತತ್ವಗಳೂ ಒಂದೇಯಾಗಿರುವುವು. ಪರಬ್ರಹ್ಮವೂ ಜಗನ್ಮಾತೆಯೂ ಆದ ಪರಾಶಕ್ತಿಗೆ ಜಗತ್ತಿನಲ್ಲಿ ಪ್ರದರ್ಶಕವಾದ ಸ್ಥಾನವು ಚಂದ್ರನ ಸ್ಥಾನವಾಗಿದೆ. ಚಂದ್ರನ ಅಂತರ್ಯವಾಗಿರುವ ಪರಾಶಕ್ತಿಯ ಸ್ಥಾನವೇ ತೃತೀಯಪಾದದ ಪ್ರಥಮಾಕ್ಷರ ಸ್ಥಾನವಾಗಿದೆ. ಈ ಪಾದದ ಎರಡನೆಯ ಅಕ್ಷರವಾದ ಕ ಎಂಬುದು ದ್ವಿತೀಯ ಪಾದದಲ್ಲಿ ಮನ್ಮಥಶಕ್ತಿಯಾದ ಸ್ಮರಃ ಎಂಬ ತತ್ವದಲ್ಲಿ ಬಂದಿತ್ತು. ಈ ಪಾದದಲ್ಲಿ ಅದೇ ಮನ್ಮಥಶಕ್ತಿಯ ಕ ಅಕ್ಷರದಲ್ಲೇ ಮಾರ ಎಂಬ ತತ್ವದಲ್ಲಿ ಬಂದಿರುವುದು. ಮೂರನೇ ಅಕ್ಷರವಾದ ಲ ಅಕ್ಷರವು ದ್ವಿತೀಯಪಾದದ ತತ್ವವಾದ ಜಗದ್ವ್ಯಾಪಾರದಲ್ಲಿ ದುಷ್ಟರನ್ನು ಜಯಿಸಲು ಶಕ್ತನಾದ ಇಂದ್ರನ ತತ್ವದಲ್ಲಿ ಬಂದಿತ್ತು. ಈ ಪಾದದಲ್ಲಿ ಲ ಅಕ್ಷರವು ಅವಿದ್ಯಾಹರಣ ಮತ್ತು ಜಗತ್ತನ್ನೂ ಹರಣಮಾಡುವ ಸರ್ವವ್ಯಾಪಕವಾದ ವಿಷ್ಣುತತ್ವವಾದ ಹರಿಃ ಎಂಬುದನ್ನು ಪ್ರತಿಪಾದಿಸುವುದು.

ಕಾಮಬೀಜವಾದ ಮನ್ಮಥಶಕ್ತಿಯು ಪ್ರಥಮ ಮತ್ತು ದ್ವಿತೀಯ ಪಾದಗಳಲ್ಲಿ ಹೇಗೆ ಸೃಷ್ಟಿ ಮತ್ತು ಸ್ಥಿತಿಗಳಿಗೆ ಕಾರಣವಾಗಿತ್ತೋ ಹಾಗೆಯೇ ಲಯದ ತತ್ವವಾದ ಈ ಪಾದದಲ್ಲೂ ಲಯಕ್ಕೆ ಕಾರಣವಾಗಿ ಸ್ಥೂಲಜಗತ್ತನ್ನು ಅವ್ಯಕ್ತಸ್ಥಿತಿಗೆ ನಿಗ್ರಹಮಾಡುವ ಸಂಕಲ್ಪದ ತತ್ವದಲ್ಲಿರುವುದು. ಈ ಲಯದ ಸಂಕಲ್ಪ

ಕ್ಕನುಸಾರವಾಗಿ ಪರಾಶಕ್ತಿಯು ಚಂದ್ರನಮೂಲಕ ಜಗತ್ತಿಗೆ ಪ್ರಕಾಶಕೊಡು ತ್ತಿರುವುದನ್ನು ಉಪಸಂಹಾರಮಾಡಿ ತನ್ನ ನಿಜಸ್ವರೂಪದಲ್ಲಿ ನಿಲ್ಲುವ ತತ್ವವೇ ಪರಾ ಎಂಬುದು ಸ ಅಕ್ಷರಕ್ಕೆ ವಿವರಣೆಯಾಗಿರುವುದು. ಈ ಲಯದ ತತ್ವಕ್ಕನು ಸಾರವಾಗಿ ಸರ್ವಸ್ಥೂಲಜಗತ್ತನ್ನೂ ಅವ್ಯಕ್ತಸ್ಥಿತಿಗೆ ಉಪಸಂಹಾರಮಾಡಿ ತನ್ನಲ್ಲಡಗಿಸಿ ಕೊಳ್ಳುವ ಹರಿಃ ಶಬ್ದವಾಚ್ಯವಾದ ಪರಬ್ರಹ್ಮಚೈತನ್ಯವೂ ಈ ಪಾದದಲ್ಲಿರುವುದು.

ಪ್ರಥಮಾಕ್ಷರದ ವಿವರಣೆಯಾದ ಪರಾ ಎಂದರೆ-ಸರ್ವೋತ್ಕೃಷ್ಟವಾದ ಶಕ್ತಿ ಯೆಂತಲೂ, ಪರಾ ಪಶ್ಯಂತೀ ಮಧ್ಯಮಾ ವೈಖರೀಸ್ವರೂಪವಾದ ನಾದಬ್ರಹ್ಮ ದಲ್ಲಿ ಪರಾ ಎಂದರೆ ಕಳಾರೂಪವೆಂತಲೂ ಅರ್ಥವಾಗುವುದು. ಶಕ್ತಿತ್ವೇನ ಪರಬ್ರಹ್ಮಶಕ್ತಿಗೂ ಶುದ್ಧಸತ್ವಗುಣದ ಶಕ್ತಿಗೂ ಪರಾ ಎನ್ನಲ್ಪಡುವುದು. ಶುದ್ಧ ಸತ್ವಗುಣಶಕ್ತಿಯೂ ನಾದಬ್ರಹ್ಮದಲ್ಲಿನ ಕಳೆಯೂ ಒಂದೇ. ಶುದ್ಧಸತ್ವಗುಣ ಶಕ್ತಿಯು ಗುಣಸಾಮ್ಯಾವಸ್ಥೆಗೆ ಬರುವುದರ ಮೂಲಕ ನಿರ್ಗುಣವಾದ ಪರಬ್ರಹ್ಮ ವಾಗುವುದು. ಆದುದರಿಂದ ಮಂತ್ರದ ಪ್ರಥಮಾಕ್ಷರದ ವಿವರಣೆಯಾಗಿರುವ ಪರಾ ಎನ್ನುವುದು ಶುದ್ಧಸತ್ವಗುಣ ಅಥವಾ ಕಳಾಸೋಪಾನವಾಗಿದೆ.

ಮುಮುಕ್ಷುವು ಮಂತ್ರದ ದ್ವಿತೀಯಪಾದದ ಲ ಅಕ್ಷರದ ತತ್ವದಲ್ಲಿ ಮೋಕ್ಷಕ್ಕೆ ಸಾಧನವಾದ ವೇದಾಂತಶ್ರವಣಮನನ, ಸತ್ಕರ್ಮಾನುಷ್ಠಾನ, ವಿರಕ್ತಿ, ಯಮ, ನಿಯಮ, ಆಸನ, ಪ್ರಾಣಾಯಾಮ ಮುಂತಾದ ಸೋಪಾನಗಳಲ್ಲಿ ಪರಿಪಕ್ವಾವಸ್ಥೆ ಯನ್ನು ಹೊಂದಿದ್ದರೂ ತನ್ನ ಅಂತರ್ಮುಖಕ್ಕೆ ತಿರುಗದೇ ಬಾಹ್ಯದಲ್ಲೇ ಇರುತ್ತಾನೆ. ಬಾಹ್ಯದಿಂದ ಅಂತರ್ಮುಖದ ದಾರಿಗೆ ತಿರುಗಿದಲ್ಲದೆ ಮುಕ್ತಿಸೋಪಾನವು ದೊರೆಯ ಲಾರದು. ಅಂದರೆ ಅಂತರ್ಮುಖದ ದಾರಿಯಾದ ಧ್ಯಾನ ಮತ್ತು ಸಮಾಧಿಗಳ ಅಭ್ಯಾಸಮಾಡಿ ಶುದ್ಧಸತ್ವಗುಣವೆಂದರೆ ಕಳಾಸ್ವರೂಪಕ್ಕೆ ಬಂದು ಅನಂತರ ಬ್ರಹ ಸಾಕ್ಷಾತ್ಕಾರವನ್ನು ಮಾಡಿಕೊಳ್ಳಬೇಕು. ಧ್ಯಾನಸಮಾಧಿಗಳ ಅಭ್ಯಾಸದಿಂದ ಅವಿದ್ಯಾಶಕ್ತಿಗಳು ನಿಗ್ರಹಿಸಲ್ಪಟ್ಟು ಅಧಿಕಾರಿಯು ಸ ಅಕ್ಷರದ ಪರಾ ಪ್ರತಿಪಾದಿತ ವಾದ ಶುದ್ಧಸತ್ವಗುಣ (ಕಳಾ) ಸೋಪಾನವನ್ನುಹೊಂದುತ್ತಾನೆಂಬ ತತ್ವದ ಸೂಚನೆ ಗೋಸ್ಕರಲೇ ಮಂತ್ರದ ತೃತೀಯಪಾದದಲ್ಲಿ ಪರಾ ಮತ್ತು ಮಾರ ಎಂಬ ವಿವರಣೆ ಗಳು ಇರುವುವಾಗಿವೆ. ಮಾರ ಎಂದರೆ "ಮೃಜಪ್ರಾಣತ್ಯಾಗೆ" ಎಂಬ ವ್ಯುತ್ಪತ್ತಿ ಯಂತೆ ನಿಗ್ರಹಿಸುವುದೆಂದಾಗಿ ಅವಿದ್ಯಾಕಾರ್ಯಗಳನ್ನೆಲ್ಲಾ ಸಮಾಧಿಯ ಅಭ್ಯಾಸ ದಿಂದ ನಿಗ್ರಹಿಸಲು ಕಾರಣವಾದುದು ಮನ್ಮಥಶಕ್ತಿಯೇ ಆಗಿರುವುದು. ಹಿಂದೆ ದ್ವಿತೀಯಪಾದದಲ್ಲಿ ಮನ್ಮಥಶಕ್ತಿಯು ಪರಬ್ರಹ್ಮವನ್ನು ಸ್ಮರಿಸಿಕೊಂಡು ಮೋಕ್ಷದ ದಾರಿಗೆ ಕಾರಣವಾಗಿತ್ತಷ್ಟೆ? ಸ್ಮರಶಕ್ತಿಯೇ ಅವಿದ್ಯಾನಿಗ್ರಹಕ್ಕೆ ಸಾಲದಾದ್ದರಿಂದ ಮನ್ಮಥಶಕ್ತಿಯು ಈ ಸೋಪಾನದಲ್ಲಿ ಮಾರ (ನಿಗ್ರಹ) ಶಕ್ತಿಯಾಗಿರುವುದು. ಅಲ್ಲದೆ ಸಮಾಧಿಯ ಅಭ್ಯಾಸಕಾಲದಲ್ಲಿ ಅಧಿಕಾರಿಯು ಓಂಕಾರನಾದಾನುಸಂಧಾನ

ವನ್ನು ಮಾಡಬೇಕಾಗುವುದು. ಹೀಗೆ ಅಭ್ಯಾಸಮಾಡುವ ಕಾಲದಲ್ಲಿ ಬಿಂದು ನಾದಗಳನ್ನು ದಾಟಿ ಕಳಾ (ಪರಾ) ಸೋಪಾನಕ್ಕೆ ಬರುವನೆಂಬ ತತ್ವದ ಸೂಚನೆ ಗೋಸ್ಕರಲೇ ಮಂತ್ರದ ಈ ಪಾದದಲ್ಲಿ ಸ ಅಕ್ಷರವೂ ಇದರ ವಿವರಣೆಯಾದ ಪರಾ ಎಂಬುದು ಇರುವುದಾಗಿದೆ. ಸಮಾಧಿಯನ್ನು ಅಭ್ಯಾಸಮಾಡುತ್ತಿರುವಾಗ ಹೀಗೆ ಕಳಾಸೋಪಾನವನ್ನು ಅನುಸರಿಸಿಕೊಂಡು ಅಂತ್ಯದ ಹ್ರೀಂ ಬೀಜಾಕ್ಷರಾತ್ಮಕ ವಾದ ಪರಬ್ರಹ್ಮದ ಸಾಕ್ಷಾತ್ಕಾರವಾಗುವುದು. ಈ ತತ್ವಸಮರ್ಥನೆಗೆ ಧ್ಯಾನ ಬಿಂದೂಪನಿಷತ್ತಿನಲ್ಲಿ

ಬಿಂದುನಾದ ಕಳಾತೀತಂ ಯಸ್ತಂವೇದ ಸವೇದವಿತ್ ।

ಬಿಂದುನಾದಗಳಿಗೂ ಪರಬ್ರಹ್ಮನು ಅತೀತನು. ಇದನ್ನು ತಿಳಿದವನೇ ಜ್ಞಾನಿಯು. ಎಂದು ಹೇಳಿದೆ. ಮಂಡಲಬ್ರಾಹ್ಮಣೋಪನಿಷತ್ತಿನಲ್ಲಿ

ಉನ್ಮನ್ಯವಸ್ಥಾವಶೇನ ಬ್ರಹ್ಮೈಕ್ಯಂ ಭವತಿ ।

ಕಳಾಸ್ವರೂಪವಾದ ಉನ್ಮನ್ಯವಸ್ಥೆಯು ಸ್ವಾಧೀನದಿಂದ ಪರಬ್ರಹ್ಮಸಾಕ್ಷಾತ್ಕಾರವು ಉಂಟಾಗುವುದು ಎಂದು ಹೇಳಿದೆ. ಬ್ರಹ್ಮವಿದ್ಯೋಪನಿಷತ್ತಿನಲ್ಲಿ

ಅರ್ಧಮಾತ್ರಾ ಪರಾಜ್ಞೇಯಾ ತತ ಊರ್ಧ್ವಂ ಪರಾತ್ಪರಂ ।

ಅರ್ಧಮಾತ್ರೆ (ಕಳ) ಯೇ ಪರಾಶಕ್ತಿ. ಇದಕ್ಕೆ ಮೀರಿರುವುದೇ ಪರಬ್ರಹ್ಮ. ಎಂಬ ಆಧಾರವಾಕ್ಯಗಳಿರುವುದರಿಂದ ಸಮಾಧಿಯ ಅಭ್ಯಾಸಮಾಡುವ ಅಧಿ ಕಾರಿಯು ಪರಾ ಎನ್ನುವುದರ ತತ್ವದಿಂದ ಉನ್ಮನೀ (ಕಳಾ) ಅವಸ್ಥೆಯ ಮೂಲಕ ಅಂತ್ಯದಲ್ಲಿರುವ ಹ್ರೀಂ ಬೀಜಾತ್ಮಕವಾದ ಪರಬ್ರಹ್ಮಸ್ವರೂಪಿಣಿಯಾದ ಶ್ರೀಲಲಿತಾ ಮಹಾತ್ರಿಪುರಸುಂದರೀ ಸಾಯುಜ್ಯವನ್ನೇ ಪಡೆಯುವನು.

ಮಂತ್ರದ ಎರಡನೆಯ ಪಾದದಲ್ಲಿ ಸೃಷ್ಟಿಸಿದ ಜಗತ್ತು ವ್ಯಾಪಾರದಲ್ಲಿ ಇತ್ತೆಂಬುದನ್ನು ಪ್ರತಿಪಾದಿಸಿತ್ತಷ್ಟೆ? ಮಂತ್ರದ ತೃತೀಯ ಪಾದದ ತತ್ವವು ಮನುಷ್ಯನು ಮೋಕ್ಷಪಡೆಯುವ ತತ್ವಕ್ಕಲ್ಲದೆ ಜಗತ್ತು ಲಯವಾಗಿ ಪರಬ್ರಹ್ಮ ಸ್ವರೂಪಿಣಿಯಾದ ಶ್ರೀಲಲಿತಾಮಹಾತ್ರಿಪುರಸುಂದರಿಯಲ್ಲಿ ಅಡಗುವ ವಿಚಾರವನ್ನು ಒಳಗೊಂಡಿರುವುದು. ಜಗತ್ತು ಪಂಚಭೂತಾತ್ಮಕವಾದುದಷ್ಟೆ? ಮಂತ್ರದ ಈ ಪಾದದಲ್ಲಿರುವ ಮನ್ಮಥಶಕ್ತಿಯೆನಿಸುವ ಮಾರ ಎಂಬುದು ಪಂಚಭೂತಗಳಲ್ಲಿನ ಪೃಥ್ವಿಯನ್ನು ಕರಗಿಸಿ ಜಲರೂಪಕ್ಕೂ, ಜಲವನ್ನು ಆವಿಯನ್ನಾಗಿಮಾಡಿ ಅಗ್ನಿ ರೂಪಕ್ಕೂ, ಅಗ್ನಿಯನ್ನು ವಾಯುರೂಪಕ್ಕೂ, ವಾಯುವನ್ನು ಆಕಾಶದ ಪರಿ ಣಾಮಕ್ಕೂ, ಆಕಾಶವನ್ನು ಸರ್ವಭೂತಗಳ ಬೀಜರೂಪವಾದ ಮತ್ತು ಅವ್ಯಕ್ತ

ವಾದ ಬಿಂದುರೂಪಕ್ಕೂ ತರುವ ಮಾರಣವೆಂದರೆ ನಿಗ್ರಹರೂಪವಾದ ಕಾರ್ಯ ವನ್ನು ಮಾಡುವುದು. ಮಾರರೂಪವಾದ ಮನ್ಮಥಶಕ್ತಿಯು ಪಂಚಭೂತಗಳು ಪರಿಣಾಮಭೇದವನ್ನು ಹೊಂದಿ ಅವ್ಯಕ್ತವಾದ ಬಿಂದುರೂಪವನ್ನು ಹೊಂದುವ ವರೆಗೂ ಮಾರಣದ (ಮಾರ ಅಂದರೆ ನಿಗ್ರಹಮಾಡುವುದು) ಕಾರ್ಯವನ್ನು ಮಾಡುವುದು. ಪರಿಣಾಮಭೇದವೆಂದರೆ—ಮಂಜಿನ ಗೆಡ್ಡೆಯು ನೀರಿನರೂಪಕ್ಕೆ ಬರುವಿಕೆ, ನೀರು ಆವಿಯರೂಪಕ್ಕೆ ಬರುವಿಕೆ, ಆವಿಯು ಅವ್ಯಕ್ತರೂಪವಾಗುವಂತೆ ಸ್ವರೂಪಭೇದವಾಗುವಿಕೆಯೇ ಹೊರತು ವಸ್ತುವಿಗೇ ನಾಶವಿಲ್ಲ. ಮಹಾಪ್ರಳಯ ಕಾಲದಲ್ಲಿ ಮಾರಸ್ವರೂಪವಾದ ಮನ್ಮಥಶಕ್ತಿಯು ಹೀಗೆ ಪಂಚಭೂತಗಳನ್ನೂ ಪಂಚಭೂತಗಳಿಂದ ಉಂಟಾಗಿರುವ ಚರಾಚರರೂಪವಾದ ಜೀವಭೂತಗಳನ್ನೂ ಅವ್ಯಕ್ತಸ್ಥಿತಿಯಾದ ಬಿಂದುರೂಪಕ್ಕೆ ತಂದು ಅಭೇದದಿಂದ ಪರಬ್ರಹ್ಮಸ್ವರೂಪಿಣಿ ಯಾದ ಶ್ರೀಲಲಿತಾಮಹಾತ್ರಿಪುರಸುಂದರಿಯಲ್ಲಿ ಅಡಗಿಸುವುದು. ಅಂದರೆ ಪರಬ್ರಹ್ಮವಾದ ಹ್ರೀಂ ಬೀಜಾಕ್ಷರ ಮತ್ತು ಓಂ ಬೀಜಾಕ್ಷರಗಳಲ್ಲಿ ಬಿಂದು ರೂಪವು ಸರ್ವಭೂತಾತ್ಮಕವಾಗಿ ಇರುವುದು. ಪುನಃ ಸೃಷ್ಟಿಯಾಗುವ ಕಾಲದಲ್ಲಿ ಬೀಜರೂಪವಾದ ಈ ಬಿಂದುವಿನಿಂದಲೇ ಸರ್ವಭೂತಗಳೂ ಉದಯಿಸುವುವು. ಈ ವಿಚಾರವನ್ನು ಮಂತ್ರದ ಪ್ರಥಮಪಾದದಲ್ಲಿ ಸೃಷ್ಟಿತತ್ವದಲ್ಲಿ ತಿಳಿಸಿಯೇ ಇರುವುದು.

> ಧಾತಾಯಥಾಪೂರ್ವಮಕಲ್ಪಯತ್ । ದಿವಂಚ ಪೃಥವೀಂಚಾಂತರಿಕ್ಷ
> ಮಥೋಸುವಃ ।

ಅಂದರೆ ಪುನಸ್ಸೃಷ್ಟಿಕಾಲದಲ್ಲಿ ಹಿಂದಿನ ಕಲ್ಪದಲ್ಲಿದ್ದಂತೆಯೇ ದಿಕ್ಕುಗಳೂ ಪೃಥ್ವೀ ಮುಂತಾದ ಪಂಚಭೂತಗಳೂ ಉಂಟಾಗುವುದೆಂತ ತಿಳಿಸುವ ಶ್ರುತಿವಾಕ್ಯವು ಮೇಲಿನ ತತ್ವಗಳಿಗೆ ಆಧಾರವಾಗಿರುವುದು

ಮಾರಣಶಕ್ತಿಯಾದ ಮನ್ಮಥಶಕ್ತಿಯು ಪಂಚಭೂತಗಳನ್ನು ಉಪಸಂಹಾರ ಮಾಡುವಾಗ ಚಂದ್ರನಲ್ಲಿ ಪ್ರಕಾಶವಾಗಿದ್ದ ಪರಾಶಕ್ತಿಯು ಪ್ರಪಂಚದ ಲಯ ಕಾಲದಲ್ಲಿ ಚಂದ್ರರೂಪವನ್ನು ಬಿಟ್ಟು ತನ್ನ ಸ್ವಸ್ವರೂಪವಾದ ಶಕ್ತಿರೂಪದಲ್ಲೇ ನಿಲ್ಲುವ ತತ್ವವೇ ಲಯದ ತತ್ವವಾದ ಮಂತ್ರದ ತೃತೀಯ ಪಾದದಲ್ಲಿ ಸ ಅಕ್ಷರವೂ ಇದರ ವಿವರಣೆಯಾದ ಪರಾ ಎಂಬುದೂ ಇರುವುದಾಗಿದೆ. ಮನ್ಮಥಶಕ್ತಿಯು ಪಂಚಭೂತಗಳನ್ನೂ ಉಪಸಂಹಾರಮಾಡಿತು. ಪರಾಶಕ್ತಿಯು ತನ್ನ ಸ್ವಸ್ವರೂಪ ದಲ್ಲಿ ನಿಂತಳು. ಇನ್ನು ಮುಂದಾಗುವ ಕಾರ್ಯವೇನೆಂದರೆ, ಮಂತ್ರದ ಮೂರನೇ ಪಾದದ ಅಂತ್ಯಾಕ್ಷರವಾದ ಲ ಮತ್ತು ಲ ಅಕ್ಷರದ ಶ್ರೀ ಶಂಕರಭಗವತ್ಪಾದರವರ ವಿವರಣೆಯಾದ ಹರಿಃ ಎನ್ನುವುದರ ತತ್ವವುಂಟಾಗಬೇಕು.

ಹರಿಃ ಎಂದರೆ "ಹೃ ಇ-ಹರಣೆ" ಎಂಬ ವ್ಯುತ್ಪತ್ತಿಯಂತೆ ಉಪಸಂಹಾರ, ಅಪಹರಿಸು, ಪರಿಹರಿಸು ಮುಂತಾದ ಅರ್ಥಗಳಾಗುವುವು. ಜಗತ್ತನ್ನೆಲ್ಲಾ ಉಪ ಸಂಹಾರಮಾಡಿಕೊಂಡು ಅಭೇದದಿಂದ ತನ್ನಲ್ಲಡಗಿಸಿಕೊಳ್ಳುವುದು ಯಾವುದೋ ಅದೇ ಹರಿಃ ಶಬ್ದವಾಚ್ಯವಾದ ಪರಬ್ರಹ್ಮವು. ಹೇಗೆಂದರೆ, ಹರಿಃ ಶಬ್ದವು ಹ್ರೀಂ ಬೀಜಾಕ್ಷರದಲ್ಲಿನ ಹ ಮತ್ತು ರ ಅಕ್ಷರಗಳೇ ಹರಿಃ ಶಬ್ದವಾಗಿರುವುದು. ಹರಿಃ ಶಬ್ದಕ್ಕೆ ಮನ್ಮಥಬೀಜವಾದ ಈ ಅಕ್ಷರವೂ ಸರ್ವಭೂತಾತ್ಮಕವಾದ ಬಿಂದುವೂ ಮುಂದೆ ಸೇರಿ ಹ್ರೀಂ ಬೀಜಾಕ್ಷರವಾಗುವುದು. ಆದುದರಿಂದ ಹರಿಃ ಪದದಲ್ಲಿರುವ ಹ ಮತ್ತು ರ ಅಕ್ಷರಗಳು ಹ್ರೀಂ ಬೀಜಾಕ್ಷರದ್ದೇ ಆಗಿರುತ್ತವೆ. ಹ ಮತ್ತು ರ ಅಕ್ಷರಗಳೇ ಸೇರಿ ಆಗಿರುವ ಹರಿಃ ಶಬ್ದದ ಈ ಸೋಪಾನದ ತತ್ವವೇನೆಂದರೆ— ಹ್ರೀಂ ಬೀಜಾಕ್ಷರದಲ್ಲಿ ಒಂದಾಗಿದ್ದ ಹಕಾರ ರಕಾರಗಳು ಸೃಷ್ಟಿಯ ಕಾರ್ಯ ಕ್ಕೋಸ್ಕರ ಸೃಷ್ಟಿತತ್ವ ಪ್ರತಿಪಾದಕವಾದ ಪ್ರಥಮಪಾದದಲ್ಲಿ ಪ್ರತ್ಯೇಕವಾದ ಅಕ್ಷರ ಗಳ ತತ್ವವಾಗಿ ಬೇರೆಬೇರೆಯಾಗಿ ಶಿವಃ ಶಕ್ತಿಃ ಎಂಬ ರೂಪಗಳಲ್ಲಿದ್ದವು. ಅನಂತರ ಜಗತ್ತಿನ ವ್ಯಾಪಾರಕೋಸ್ಕರ ರವಿಃ ಚಂದ್ರಃ ರೂಪಗಳಲ್ಲಿ ಬೇರೆ ಬೇರೆ ಯಾಗಿಯೇ ಇದ್ದವು. ಜಗತ್ತಿನ ಲಯಕಾಲದಲ್ಲಿ ಶಿವನೂ, ಶಕ್ತಿಯೂ, ರವಿಯೂ ಚಂದ್ರನೂ ಅಭೇದದಿಂದ ಒಂದಾಗುವ ತತ್ವಪ್ರತಿಪಾದನೆಗೋಸ್ಕರಲೇ ಹರಿಃ ಪದವು ಮಂತ್ರಾಂತ್ಯದಲ್ಲಿ ಶ್ರೀಶಂಕರಭಗವತ್ಪಾದರವರಿಂದ ವಿವರಣೆಯ ರೂಪವಾಗಿ ಇಡಲ್ಪಟ್ಟಿದೆ. ಮಂತ್ರದ ದ್ವಿತೀಯ ಪಾದದಲ್ಲಿ ಹಂಸಃ ಎಂಬ ವಿವರಣೆಯಲ್ಲಿ ಸಕಾರರೂಪವಾದ ಚಂದ್ರನು ಹಕಾರ ರೂಪವಾದ ಸೂರ್ಯನೊಡನೆ ಲಯ ಕಾಲದಲ್ಲಿ ಏಕೀಭವಿಸುತ್ತಾನೆಂದು ತಿಳಿಸಿತಷ್ಟೆ? ಹೀಗೆ ಸೂರ್ಯಚಂದ್ರರು ಏಕೀ ಭವಿಸಿದ ಸೋಪಾನವೇ ಇದಾಗಿದೆ.

ಹರಿಃ ಪದದಲ್ಲಿ ಹಕಾರವೇ ಚೈತನ್ಯವಾಗಿಯೂ ರಕಾರವೇ ಶಕ್ತಿಯಾಗಿಯೂ ಇರುವುದರಿಂದ ಶಕ್ತನೇ ಶಕ್ತಿಯು ಶಕ್ತಿಯೇ ಶಕ್ತನು ಆಗಿ ಅಭೇದರೂಪವಾಗಿರು ವುದು. ಶಕ್ತ, ಶಕ್ತಿ ಎಂಬುವುಗಳು ಪುಲ್ಲಿಂಗ ಸ್ತ್ರೀಲಿಂಗಕ್ಕೆ ಪ್ರಕಾಶವಾದವುಗಳೇ ವಿನಹ ಶಕ್ತ ಶಕ್ತಿಗಳಲ್ಲಿ ಪುಲ್ಲಿಂಗ ಸ್ತ್ರೀಲಿಂಗಗಳಿರುವುದಿಲ್ಲ. ಪುಲ್ಲಿಂಗ ಸ್ತ್ರೀಲಿಂಗ ಎಂಬ ವಿಭಾಗಗಳು ಸೃಷ್ಟಿ ಸ್ಥಿತಿ ಕಾರ್ಯಗಳಿಗೋಸ್ಕರ ಸ್ಥೂಲಜಗತ್ತಿನಲ್ಲಿ ವಿಭಾಗವೇ ಹೊರೆತು, ಶಕ್ತ ಶಕ್ತಿ ಸ್ಥಿತಿಯಲ್ಲೂ ಇಲ್ಲ. ಸ್ಥೂಲ ಜಗತ್ತಿನಲ್ಲೂ ಶಕ್ತಿ ಶಕ್ತರೆಂದು ಪ್ರತ್ಯಕ್ಷವಾಗಿ ವಿಭಾಗಮಾಡುವುದು ಅಸಾಧ್ಯ. ಪುರುಷನಲ್ಲೂ ಚೈತನ್ಯ ಮತ್ತು ಶಕ್ತಿಗಳೆರಡೂ ಇರುತ್ತವೆ. ಸ್ತ್ರೀಯಳಲ್ಲೂ ಚೈತನ್ಯ ಮತ್ತು ಶಕ್ತಿಗಳೆರಡೂ ಇರುತ್ತವೆ. ಸ್ತ್ರೀಯಳಲ್ಲಿ ಚೈತನ್ಯವಿರುವುದಿಲ್ಲವೆಂದೂ ಅವಳು ಜೀವನಲ್ಲವೆಂದೂ ಯಾರೂ ಹೇಳಲಾರರು. ಜೀವನಿಗೆ ಸ್ತ್ರೀತ್ವ ಪುರುಷತ್ವಗಳಿರು ವುದೇ ಇಲ್ಲ. ಸ್ತ್ರೀ ದೇಹವನ್ನು ತಾಳಿದ್ದ ಜೀವನು ಇನ್ನೊಂದು ಜನ್ಮದಲ್ಲಿ

ಪುರುಷದೇಹವನ್ನು ತಾಳಿ ಪುರುಷಜನ್ಮವೆತ್ತಬಹುದು. ಪುರುಷನೂ ಹೀಗೆಯೆ ಸ್ತ್ರೀ ಜನ್ಮವನ್ನು ಹೊಂದಬಹುದು. ಮಾತೃಪೂಜೆ ಪಿತೃಪೂಜೆ ಮಾಡುವುದು ಲಿಂಗಪ್ರಧಾನಕ್ಕೋಸ್ಕರವಲ್ಲ. ಶಕ್ತಿಪೂಜೆಯೆಂದರೆ ಸ್ತ್ರೀಲಿಂಗಕ್ಕೆ ಪೂಜೆಯಲ್ಲ. ಶ್ರೀ ಚಕ್ರಾರ್ಚನೆಯೆಂದರೆ ಸ್ತ್ರೀ ಚಕ್ರಾರ್ಚನೆಯಲ್ಲ. ಶಕ್ತಿಪೂಜೆಯೆಂದರೆ ಪುಲ್ಲಿಂಗಕ್ಕೂ ಸ್ತ್ರೀಲಿಂಗಕ್ಕೂ ಕಾರಣವಾದ ಯಾವ ಪರಾತ್ಪರವಾದ ಶಕ್ತಿಯಿರುವುದೋ ಅದರ ಉಪಾಸನೆಯೆಂದು ನಿಸ್ಸಂದೇಹವಾಗಿ ತಿಳಿದುಕೊಳ್ಳಬೇಕು.

ಅಲ್ಲದೆ ಲಯದ ತತ್ತ್ವವಾದ ಮಂತ್ರದ ಮೂರನೆಯ ಪಾದದಲ್ಲಿ ಲಯ ಮಾಡುವವನಾದ ಹರ (ರುದ್ರ) ಶಬ್ದವನ್ನು ಶ್ರೀ ಶಂಕರಭಗವತ್ಪಾದರವರು ಪ್ರಯೋಗಿಸದೆ ಹರಿ (ವಿಷ್ಣು) ಶಬ್ದವನ್ನು ಇಟ್ಟಿರುತ್ತಾರೆ. ಹರ ಮತ್ತು ಹರಿ ಶಬ್ದಗಳ ವ್ಯುತ್ಪತ್ತಿಯಲ್ಲೂ ಮತ್ತು ಅರ್ಥದಲ್ಲೂ ಯಾವ ಭೇದವೂ ಇಲ್ಲ. ಹರಿ, ಹರ ಎಂದು ಬೇರೆಯಾಗಿ ಹೇಳಿದರೂ ಚೈತನ್ಯವೊಂದೇ ಆಗಿರುತ್ತೆ. ಹರಣ ವೆಂದರೆ ಉಪಸಂಹಾರಮಾಡುವಿಕೆಯು. ಹರಿ ಹರ ಶಬ್ದಗಳೆರಡಕ್ಕೂ ಸಮಾನ ವಾಗಿರುವುದು. ಹರ ಎನ್ನುವ ಪದದಲ್ಲಿ ಅಕಾರವಿದೆ. ಹರಿ ಎನ್ನುವ ಪದದಲ್ಲಿ ಇಕಾರವಿದೆ. ಅಕಾರವು ಸರ್ವಾಕ್ಷರಗಳಿಗೂ ಮೂಲವಾಗಿಯೂ, ಸರ್ವಾಕ್ಷರ ಗಳಲ್ಲಿಯೂ ಇರುತಕ್ಕದ್ದಾಗಿಯೂ, ಸರ್ವಾಕ್ಷರಗಳನ್ನೂ ತನ್ನಲ್ಲಡಗಿಸಿಕೊಳ್ಳತಕ್ಕ ದ್ದಾಗಿಯೂ ಇರುವುದರಿಂದ ಹರಿ ಶಬ್ದದಲ್ಲೂ ಅಕಾರವಿದ್ದೇ ಇರುವುದು. ಹರ ಶಬ್ದದಲ್ಲಿ ಮನ್ಮಥಬೀಜವಾದ ಇಕಾರವು ವ್ಯಕ್ತವಾಗಿರುವುದಿಲ್ಲ, ಹರಿ ಶಬ್ದದಲ್ಲಿ ವ್ಯಕ್ತವಾಗಿರುವುದು. ಆದುದರಿಂದ ಹರಿ ಹರ ಶಬ್ದಗಳಿಗೆ ಯಾವ ಭೇದವೂ ಇರುವುದಿಲ್ಲ. ಅಲ್ಲದೆ ಹರಿ ಹರರ ಚೈತನ್ಯವೊಂದೇ ಆಗಿರುತ್ತೆ. ಮಂತ್ರದ ಅಂತ್ಯದಲ್ಲಿರುವ ಹರಿಃ ಪದದಲ್ಲಿ ಶಕ್ತ ಶಕ್ತಿಗಳೆರಡೂ ಸೇರಿ ಅಭೇದವಾಗಿ ಪರ ತ್ಪರ ಚೈತನ್ಯವಾಗಿರುವ ತತ್ವಕ್ಕೆ ತ್ರಿಪುರಾತಾಪಿನ್ಯುಪನಿಷತ್ತಿನಲ್ಲಿ

> ಪರಮಾತ್ಮಾ ಸದಾಶಿವೋಕ್ಷರಂ ವಿಮಲಂ ನಿರುಪಾಧಿ ತಾದಾತ್ಮ್ಯ ಪ್ರತಿ
> ಪಾದನೇನ ಹರಾಕ್ಷರಂ ಶಿವರೂಪಂ ನಿರಕ್ಷರಮಕ್ಷರಂ ವ್ಯಾಲಿಖ್ಯತಇತಿ |

**ತಾತ್ಪರ್ಯ**—ಪರಮಮಂಗಳರೂಪವಾದ ಹರಾಕ್ಷರವು ಪರಬ್ರಹ್ಮವಾದ ಸದಾಶಿವಸ್ವರೂಪವು ನಾಶರಹಿತವಾದುದು ಪರಿಶುದ್ಧವಾದುದು ಮತ್ತು ಪೀಡಾ ರಹಿತವಾದುದು. ಇದರಿಂದ ಶಾಶ್ವತವಾಗಿ ಹರಾಕ್ಷರವು ಬರೆಯಲ್ಪಡುತ್ತದೆ. ಎಂದು ಹೇಳಿದೆ.

ಮಂತ್ರಾಂತ್ಯದಲ್ಲಿರುವ ಲ ಅಕ್ಷರದ ವಿವರಣೆಯಾದ ಹರಿಃ ಎಂಬುದರ ತತ್ವವು ಶಕ್ತಿಶಕ್ತಗಳೆರಡೂ ಅಭೇದವಾಗಿ ಸೇರಿದ ಮುಕ್ತಸೋಪಾನವೆಂತ ಶ್ರೀಲಲಿತಾ ತ್ರಿಶತೀ ಭಾಷ್ಯದಲ್ಲಿ ಶ್ರೀ ಶಂಕರಭಗವತ್ಪಾದರವರು

ಹೃಞ್ ಹರಣ ಇತಿಧಾತುಪಾಠಾತ್ ಸಮಸ್ತವಿದ್ಯೈಶ್ವರ್ಯ ಪ್ರದಾನಾದಿ ಶಕ್ತ್ಯಾರೂಪಾಧಿಷ್ಠಾನತ್ವೇಸತಿ ಅವಯವಾದಾಶಿಷಿತ ಪರಮಾನಂದರೂಪ ಮುಕ್ತಿರಿತ್ಯರ್ಥಃ ।

**ತಾತ್ಪರ್ಯ**—ಹ್ರೀಞ್ ಹರಣ ಎಂಬ ಧಾತುಪಾಠದಿಂದ ಸಮಸ್ತ ಪಾರಮಾರ್ಥಿಕ ವಿದ್ಯೆಗಳನ್ನೂ ಐಶ್ವರ್ಯಗಳನ್ನೂ ಕೊಡುವುದೇ ಮೊದಲಾದ ಶಕ್ತಿಯಿಂದ ಸಮಸ್ತರೂಪಪ್ರಪಂಚಕ್ಕೂ ಅಧಿಷ್ಠಾನವಾಗಿದ್ದು ಸಮಸ್ತ ಪ್ರಪಂಚವನ್ನೂ ಲಯ ಮಾಡಿದ ಅನಂತರದಲ್ಲಿ ತಾನೇತಾನಾಗಿ ಉಳಿಯುವ ಪರಮಾನಂದರೂಪ ಮುಕ್ತಿಸ್ವರೂಪಿಣಿಯು. ಎಂದು ಹೇಳಿರುತ್ತಾರೆ.

ಹರಿಃ ಪದದಲ್ಲಿ ಶಕ್ತನು ಶಕ್ತಿಯು ಅಭೇದರೂಪದಿಂದ ಪರಾತ್ಪರವಸ್ತುವಾಗಿರುತ್ತೆಂತ ಮೇಲೆ ತಿಳಿಸಿತಷ್ಟೆ ! ಹರಿಃ ಪದದ ತತ್ವದಲ್ಲಿ ಮನ್ಮಥಬೀಜವಾದ ಈ ಕಾರವೂ, ಸರ್ವಭೂತಾತ್ಮಕವಾದ ಬಿಂದುವೂ ಇನ್ನೂ ಜೊತೆಗೆ ಸೇರಿಲ್ಲ. ಸೃಷ್ಟಿ, ಸ್ಥಿತಿ, ಲಯಗಳಿಗೆಲ್ಲಾ ಕಾರಣರೂಪವಾದ ಮನ್ಮಥಬೀಜವಾದ ಈ ಅಕ್ಷರ ಶಕ್ತಿಯು ಸ್ಥೂಲಜಗತ್ತನ್ನು ಉಪಸಂಹರಿಸಿ ಅನಂತರ ಮಂತ್ರದ ಅಂತ್ಯಪಾದದ ಪ್ರಥಮಾಕ್ಷರದ ತತ್ವದಲ್ಲಿರುವ ಶುದ್ಧಸತ್ವಗುಣದ ಶಕ್ತಿ (ಪರಾ) ಯನ್ನು ಚೈತನ್ಯದೊಡನೆ ಅಭೇದದಿಂದಿರುವಂತೆ ಮಾಡಿಸಿತು. ಹೀಗೆ ಅಭೇದದಿಂದಿರುವ ಶಕ್ತಿಶಕ್ತ್ಯಾತ್ಮಕವಾದ ಹರಿಃ ಎಂಬುದು ಮನ್ಮಥಬೀಜಾತ್ಮಕವಾದ ಈ ಅಕ್ಷರಶಕ್ತಿಯನ್ನೂ ಮತ್ತು ಸರ್ವಭೂತಾತ್ಮಕವಾದ ಬಿಂದುಶಕ್ತಿಯನ್ನೂ ಉಪಸಂಹಾರ ಮಾಡಿಕೊಂಡು ತನ್ನಲ್ಲಿ ಅಭೇದದಿಂದ ಅಡಗಿಸಿಕೊಂಡು ಶ್ರೀಲಲಿತಾಮಹಾತ್ರಿಪುರಸುಂದರೀ ಪರಾತ್ಪರವಸ್ತು ಒಂದೇಉಳಿಯುವ ಮಂತ್ರಾಂತ್ಯದಲ್ಲಿರುವ ಹ್ರೀಂ ಬೀಜಾಕ್ಷರವಾಗುವುದು. ಆದುದರಿಂದ ಹರಿಃ ಎನ್ನುವ ತತ್ವವಾದ ಪರಾತ್ಪರವಸ್ತುವು ರುದ್ರನೆಂದು ಹೆಸರುಪಡೆದು ಸರ್ವವನ್ನೂ ಹರಣಮಾಡಿ ತನ್ನಲ್ಲಿ ಅಭೇದದಿಂದ ಅಡಗಿಸಿಕೊಂಡು ಮುಂದೆ ತಾನೊಂದೇ ಉಳಿಯುವುದು. ಆದುದರಿಂದ ಪರಾತ್ಪರವಸ್ತುವೇ ಹರಣಮಾಡಿಕೊಳ್ಳುವುದೆಂಬ ತತ್ವಕ್ಕೆ ಪ್ರಶ್ನೋಪನಿಷತ್ತಿನಲ್ಲಿ

ಇಂದ್ರಸ್ತ್ವಂ ಪ್ರಾಣತೇಜಸಾ ರುದ್ರೋಽಸಿ ಪರಿರಕ್ಷಿತಾ ।

**ತಾತ್ಪರ್ಯ**—ಎಲೈ ಪರಾತ್ಪರವಸ್ತುವೇ ! ಇಂದ್ರನೂ ನೀನೇ, ನೀನೇ ಪರಮೇಶ್ವರನು, ಸಂಹಾರರೂಪವಾದ ತೇಜಸ್ಸಿನಿಂದ ಸರ್ವಜಗತ್ತನ್ನೂ ಹರಣ ಮಾಡುವ ರುದ್ರನೂ ನೀನೇ. ಎಂದು ಹೇಳಿದೆ.

ಅಲ್ಲದೆ ಹರಿಃ ಎಂಬ ವಿವರಣೆಯಿರುವ ಈ ಪಾದದ ಅಂತ್ಯಾಕ್ಷರವಾದ

ಲ ಅಕ್ಷರದ ತತ್ವವೂ ಮೇಲೆ ವಿವರಿಸಿರುವ ತತ್ವಕ್ಕೆ ಅನುಸಾರವಾಗಿ ಇರು ತ್ತೆಂಬುದಕ್ಕೆ ತ್ರಿಪುರಾತಾಪಿನ್ಯುಪನಿಷತ್ತಿನಲ್ಲಿ

ಪರಮಂಪದಂ ಧೀತಿಧಾರಣಂ ವಿದ್ಯತೆ ಜಡತ್ವಧಾರಣಂ ಮಹೀತಿ ಲಕಾರ ಶ್ಚಿವಾ |

**ತಾತ್ಪರ್ಯ**—ಲಕಾರವು ಪ್ರಥಮಪಾದದಲ್ಲಿ ಜಗತ್ಸೃಷ್ಟಿಯ ಮತ್ತು ಧಾರ ಣೆಯ ತತ್ವದಲ್ಲಿತ್ತು. ಮಂತ್ರದ ದ್ವಿತೀಯಪಾದವಾದ ವ್ಯಾಪಾರದಲ್ಲಿ ದೈವೀ ಸಂಪತ್ತಿನ ಧಾರಣೆಯ ರೂಪವಾದ ದೇವೇಂದ್ರನ ತತ್ವವಾಗಿತ್ತು. ಇದೇ ಲಕಾರವು ಲಯದತತ್ವವಾದ ತೃತೀಯಪಾದದಲ್ಲಿ ಸಮಸ್ತವನ್ನು ಲಯಮಾಡಿ ಪರಮಪದ ರೂಪದಲ್ಲಿರುವ ಹರಿ ತತ್ವವಾಗಿ ಶಿವಾ ಎಂದು ಕರೆಯಲ್ಪಡುವುದು.

ಈ ಪ್ರಕರಣದ ಪ್ರಥಮದಿಂದ ವಿವರಿಸಿಕೊಂಡು ಬಂದ ತತ್ವಗಳಂತೆ ಶ್ರೀಲಲಿತಾಪಂಚದಶಾಕ್ಷರೀ ಮಂತ್ರದ ತೃತೀಯಪಾದವು ಮೋಕ್ಷವೆಂದರೆ ಲಯ ಕಾರ್ಯದ ತತ್ವಪ್ರತಿಪಾದಕವಾಗಿದೆ. ಮಂತ್ರದ ಅಂತ್ಯದಲ್ಲಿರುವ ಶ್ರೀಲಲಿತಾಮಹಾತ್ರಿ ಪುರಸುಂದರೀ ಪರಾತ್ಪರವಸ್ತ್ವಾತ್ಮಕವಾದ ಹ್ರೀಂ ಬೀಜಾಕ್ಷರದ ವಿಚಾರವನ್ನು ಅರಿಯಲು ಮುಂದುವರಿಯೋಣ. ಮಂತ್ರಾಂತ್ಯದಲ್ಲಿರುವ ಹ್ರೀಂ ಬೀಜಾಕ್ಷರವು ಶ್ರೀಲಲಿತಾಮಹಾತ್ರಿಪುರಸುಂದರೀ ಪರಾತ್ಪರವಸ್ತ್ವಾತ್ಮಕವಾಗಿ ಯಾವ ಸೃಷ್ಟಿಯೂ ಇಲ್ಲದ ಕಾಲದಲ್ಲಿ ತಾನೊಂದೇ ಇದ್ದ ಸ್ಥಿತಿಯೆಂದೂ ಮತ್ತು ಇಂತಹ ಬೀಜರೂಪ ವಾದ ಶ್ರೀಲಲಿತಾಮಹಾತ್ರಿಪುರಸುಂದರಿಯಿಂದಲೆ ಜಗತ್ತಿನ ಸೃಷ್ಟಿಯು ಉದಯಿಸಿ ತೆಂದೂ ಗ್ರಂಥದ ಪ್ರಾರಂಭದಲ್ಲಿ ತಿಳಿಸಿರುತ್ತೆ. ಜಗತ್ತಿನ ಸೃಷ್ಟಿ, ಸ್ಥಿತಿಗಳಾಗಿ ಅನಂತರ ಲಯವನ್ನನುಸರಿಸಿ ಸರ್ವವೂ ಶ್ರೀಲಲಿತಾಮಹಾತ್ರಿಪುರಸುಂದರಿಯಲ್ಲಿ ಅಭೇದದಿಂದ ಅಡಗಿ ಶ್ರೀಲಲಿತಾಮಹಾತ್ರಿಪುರಸುಂದರ್ಯಾತ್ಮಕವಾದ ಪರಬ್ರಹ್ಮ ಒಂದೇ ಪುನಃ ಉಳಿಯುವ ತತ್ವವನ್ನೇ ಪ್ರತಿಪಾದಿಸುವುದಕ್ಕೂ ಮಂತ್ರಾಂತ್ಯದಲ್ಲಿ ಹ್ರೀಂ ಬೀಜಾಕ್ಷರವು ಇರುವುದಾಗಿದೆ. ಮಂತ್ರಾಂತ್ಯದಲ್ಲಿನ ಲ ಅಕ್ಷರ ಮತ್ತು ಇದರ ಶ್ರೀ ಶಂಕರಭಗವತ್ಪಾದರವರ ವಿವರಣೆಯಾದ ಹರಿಃ ತತ್ವದಲ್ಲಿ ಮನ್ಮಥ ಬೀಜಶಕ್ತಿಯಾದ ಈ ಅಕ್ಷರವನ್ನೂ ಮತ್ತು ಪ್ರಪಂಚದ ಸರ್ವಭೂತ ಬೀಜಾತ್ಮಕ ವಾದ ಬಿಂದು ಶಕ್ತಿಯನ್ನೂ ಧರಿಸಿದ ಶುದ್ಧಶಕ್ತಿಶಕ್ತ್ಯಾತ್ಮಕವಾದ ಸೋಪಾನವೆಂದು ತಿಳಿಸಿತಷ್ಟೆ! ಹರಿಃ ರೂಪವಾದ ಶುದ್ಧಶಕ್ತಿಶಕ್ತ್ಯಾತ್ಮಕವಾದ ಪರಾತ್ಪರ ವಸ್ತುವು ಕಾರಣಕ್ಕೆ ಕಾರಣವಾಗಿರುವ ಸಂಕಲ್ಪದ ಶಕ್ತಿಯಾದ ಮನ್ಮಥಬೀಜಶಕ್ತಿಯಾದ ಈ ಅಕ್ಷರವನ್ನು, ಮತ್ತು ಪ್ರಪಂಚದ ಸರ್ವಭೂತಗಳ ಬೀಜಾತ್ಮಕವಾದ ಬಿಂದು ಶಕ್ತಿಯನ್ನೂ ಹರಣವೆಂದರೆ ಉಪಸಂಹಾರಮಾಡಿಕೊಂಡು ಅಭೇದರೂಪದಿಂದ ತನ್ನಲ್ಲಡಗಿಸಿಕೊಂಡು ಹ+ರ+ಈ+ಂ=ಹ್ರೀಂ ಬೀಜಾಕ್ಷರಸ್ವರೂಪವಾದ ಶ್ರೀಲಲಿತಾ

ಮಹಾತ್ರಿಪುರಸುಂದರೀ ಪರದೇವತೆಯು ಒಂದೇನಿಲ್ಲುವಿಕೆಯ ಪ್ರತಿಪಾದನೆ ಗೋಸ್ಕರಲೇ ಮಂತ್ರಾಂತ್ಯದಲ್ಲಿ ಹ್ರೀಂ ಬೀಜಾಕ್ಷರವು ಇರುವುದಾಗಿದೆ.

ಈ ಹ್ರೀಂ ಬೀಜಾಕ್ಷರವೇ ಪರಾತ್ಪರವಸ್ತುವಾದ ಶ್ರೀಲಲಿತಾಮಹಾತ್ರಿಪುರ ಸುಂದರೀ ಪರದೇವತೆಯ ಅದ್ವೈತಸ್ವರೂಪ. ಹ್ರೀಂ ಬೀಜಾಕ್ಷರವೇ ಪರಬ್ರಹ್ಮ ಸ್ವರೂಪಿಣಿಯಾದ ಶ್ರೀಲಲಿತಾಮಹಾತ್ರಿಪುರಸುಂದರೀ ಪರದೇವತೆಯ ಬೀಜ ಮಂತ್ರ. ಅದ್ವೈತಸ್ವರೂಪಿಣಿಯಾದ ಶ್ರೀಲಲಿತಾಮಹಾತ್ರಿಪುರಸುಂದರೀ ಪರ ದೇವತೆಯ ಸ್ಥಾನವಾದ ಮಂತ್ರದ ಅಂತ್ಯದಲ್ಲಿರುವ ಹ್ರೀಂ ಬೀಜಾಕ್ಷರದ ತತ್ವವನ್ನು ಯಾರು ಆತ್ಮನಿಷ್ಠೆಯಿಂದ ಸಾಕ್ಷಾತ್ಕರಿಸಿಕೊಳ್ಳುತ್ತಾರೋ ಅವರು ಪುನರಾವರ್ತಿ ರಹಿತವಾದ ಅದ್ವಯಬ್ರಹ್ಮವೇ ಆಗಿರುತ್ತಾರೆ. ಈ ತತ್ವಸಮರ್ಥನೆಗೆ ಶ್ರೀಶಂಕರ ಭಗವತ್ಪಾದರವರು ಶ್ರೀಲಲಿತಾತ್ರಿಶತೀಭಾಷ್ಯದಲ್ಲಿ

> ಹ್ರೀಂ ಬೀಜಾತ್ಮನಾ ಪರಿಣಾಮೆ ಸಚ್ಚಿದಾನಂದಸ್ವರೂಪ ಶ್ರೀತ್ರಿಪುರಸುಂದರ್ಯಾ ತದರ್ಥತ್ವೇನ ಅದ್ವೈತಸ್ವರೂಪತಯಾ ಪ್ರತಿಭಾಸಾತ್ ।

ಅಂದರೆ ಹ್ರೀಂ ಬೀಜಾತ್ಮಕವಾದುದರಿಂದ ಅಂತ್ಯದಲ್ಲಿ ಸಚ್ಚಿದಾನಂದಸ್ವರೂಪವನ್ನು ಪ್ರತಿಪಾದಿಸತಕ್ಕ ಶ್ರೀ ತ್ರಿಪುರಸುಂದರೀ ಅದ್ವೈತಸ್ವರೂಪವು ಸಾಕ್ಷಾತ್ಕಾರವಾಗು ವುದು. ಎಂದು ಹೇಳಿರುತ್ತಾರೆ.

ಆದುದುದರಿಂದ ಅದ್ವೈತಸ್ವರೂಪಿಣಿಯಾದ ಹ್ರೀಂ ಬೀಜಾತ್ಮಕಳಾದ ಶ್ರೀ ಲಲಿತಾಮಹಾತ್ರಿಪುರಸುಂದರೀ ದೇವಿಯನ್ನು ಆರಾಧಿಸುವುದು ಮತ್ತು ಉಪಾಸನೆ ಮಾಡುವುದು ಬ್ರಹ್ಮ, ವಿಷ್ಣು, ರುದ್ರರು ಮತ್ತು ಸರಸ್ವತೀ, ಲಕ್ಷ್ಮೀ, ಪಾರ್ವತೀ ದೇವಿಯರಾದ ಸಗುಣಬ್ರಹ್ಮದ ತ್ರಿಮೂರ್ತಿಗಳನ್ನೂ ಆರಾಧಿಸಿದಂತಯೇ ಆಗುವುದು. ಇದೇ ತಾತ್ಪರ್ಯಕ್ಕೆ ಶ್ರೀಶಂಕರಭಗವತ್ಪಾದರವರು ಶ್ರೀಲಲಿತಾತ್ರಿಶತೀಭಾಷ್ಯದಲ್ಲಿ

> ಸಗುಣಮೂರ್ತಯ ಸ್ತ್ರಿಸ್ರಃ ಗರ್ಭೇಸ್ವಸ್ವರೂಪೇಣಶಕ್ತಿಕಾಃ ಅವಿನಾಭಾವ ಸಂಬಂಧೇನ ಯಸ್ಯಾಸ್ಸಾತಥಾ । ಹ್ರೀಮಿತ್ಯನೇನ ತದ್ವಾಚ್ಯಾರ್ಥಃ ಬ್ರಹ್ಮ ವಿಷ್ಣುರುದ್ರಾ ಲಕ್ಷ್ಯಂತೇ । ತೇಷಾಂ ಶೀಲಂ ಸ್ವಭಾವಃ ಪಾರಮಾರ್ಥಿಕ ರೂಪಂ ಸಚ್ಚಿದಾನಂದಾತ್ಮಕತಾ ಯಸ್ಯಾಸ್ಸಾ । ಹ್ರೀಂಕಾರೇ ಉಭಯ ವಿಧ ಬ್ರಹ್ಮಸ್ವರೂಪತಯಾ ಚಿಂತಿತುಂ ಯೋಗ್ಯಾ ।

**ತಾತ್ಪರ್ಯ**—ಸಗುಣಮೂರ್ತಿಗಳಾದ ಬ್ರಹ್ಮ ವಿಷ್ಣು ರುದ್ರರು ತಮ್ಮ ತಮ್ಮ ರೂಪದಿಂದ ಶಕ್ತಿಯುತರಾಗಿ ಅಭೇದ ಭಾವದಿಂದ ಯಾರಲ್ಲಿರುವರೋ ಅವಳೇ ಹ್ರೀಂ ಸ್ಥಾನಳಾದ ಶ್ರೀಲಲಿತಾಂಬಾ. ಹ್ರೀಂ ಎಂದರೆ ಬ್ರಹ್ಮ ವಿಷ್ಣು ರುದ್ರರು ಕಾಣಲ್ಪಡು ತ್ತಾರೆ. ಅವರವರ ಸ್ವಭಾವಗಳಾದ ಸಚ್ಚಿದಾನಂದಾತ್ಮಕವಾದಂಥ ಪಾರಮಾರ್ಥಿಕ

ರೂಪವು ಯಾರಲ್ಲಿರುವುದೋ ಅವಳೇ ಹ್ರೀಂ ಶೀಲಳಾದ ಶ್ರೀಲಲಿತಾದೇವಿ. ಹ್ರೀಂಕಾರದಲ್ಲಿ ಸಗುಣ ನಿರ್ಗುಣಗಳಾದ ಎರಡುವಿಧ ಸ್ವರೂಪದಿಂದಲೂ ಚಿಂತಿಸಲು ಯೋಗ್ಯತೆ ಇರುವುದರಿಂದ ಶ್ರೀಲಲಿತಾದೇವಿಯಾಗುತ್ತಾಳೆ. ಎಂದು ಹೇಳಿರುತ್ತಾರೆ.

ಈ ಗ್ರಂಥದ ಪ್ರಥಮದಾರಭ್ಯ ಇದುವರೆಗೂ ತಿಳಿಸಿರುವ ರಹಸ್ಯಾರ್ಥಗಳನ್ನೆಲ್ಲಾ ಈ ಕೆಳಗಿನ ಋಗ್ವೇದದ ಬಹ್ವೃಚಶ್ರುತಿಯು ಒಳಗೊಂಡಿರುವುದು.

> ಪುರತ್ರಯಂ ಶರೀರತ್ರಯಂ ವ್ಯಾಪ್ಯ ಬಹಿರಂತರವಭಾಸಯಂತೀ ದೇಶಕಾಲವಸ್ತ್ವಂತರಾಸಂಗಾನ್ಮಹಾತ್ರಿಪುರಸುಂದರೀ ವೈಪ್ರತ್ಯಕ್ಚಿತಿಃ। ಸೈವಾತ್ಮಾ ತತೋಽನ್ಯದ ಸತ್ಯಮನಾತ್ಮಾ। ಅತ ಏಷಾ ಬ್ರಹ್ಮಸಂವಿತ್ತಿಃ। ಭಾವಾಭಾವ ಕಳಾವಿನಿರ್ಮುಕ್ತಾ ಚಿದ್ವಿದ್ಯಾದ್ವಿತೀಯ ಬ್ರಹ್ಮಸಂವಿತ್ತಿಃ। ಸಚ್ಚಿದಾನಂದ ಲಹರೀ ಮಹಾತ್ರಿಪುರಸುಂದರೀ ಬಹಿರಂತರ ಮನುಪ್ರವಿಶ್ಯ ಸ್ವಯಮೇಕೈವ ವಿಭಾತಿ। ಯದಸ್ತಿಸನ್ಮಾತ್ರಂ ಯದ್ವಿಭಾತಿಚಿನ್ಮಾತ್ರಂ ಯತ್ಪ್ರಿಯಮಾನಂದಂ ತದೇತತ್ಸರ್ವಾಕಾರಾ ಮಹಾತ್ರಿಪುರಸುಂದರೀ। ತ್ವಂಚಾಹಂಚ ಸರ್ವಂವಿಶ್ವಂ ಸರ್ವದೇವತೇತರ ತ್ಸರ್ವಂ ಮಹಾತ್ರಿಪುರಸುಂದರೀ। ಸತ್ಯಮೇತಂ ಲಲಿತಾಖ್ಯಂ ವಸ್ತುತದದ್ವಿತೀಯಂ। ಅಖಂಡಾರ್ಥಂ ಪರಂ ಬ್ರಹ್ಮ ಪಂಚರೂಪ ಪರಿತ್ಯಾಗಾದಸ್ವರೂಪ ಪ್ರಹಾಣತಃ। ಅಧಿಷ್ಠಾನಂ ಪರಂತತ್ವಮೇಕಂ ಸಚ್ಛಿಷ್ಯತೆ ಮಹದಿತಿ।

**ತಾತ್ಪರ್ಯ**—ಮಹಾತ್ರಿಪುರಸುಂದರ್ಯಾತ್ಮಕವಾದ ಪರಬ್ರಹ್ಮಚೈತನ್ಯವು ಸ್ವರ್ಗ ಮರ್ತ್ಯ ಪಾತಾಳ ಲೋಕಗಳೆಂಬ ಪುರತ್ರಯವನ್ನೂ, ಸ್ಥೂಲ ಸೂಕ್ಷ್ಮ ಕಾರಣಗಳೆಂಬ ಶರೀರತ್ರಯವನ್ನೂ ವ್ಯಾಪಿಸಿ ದೇಶ ಕಾಲ ವಸ್ತುಗಳಲ್ಲಿ ಹೊರಗೂ ಒಳಗೂ ಅಸಂಗದಿಂದ ಬೆಳಗುತ್ತಾ ಇರುವುದು. ಅದೇ ಪರಬ್ರಹ್ಮವು. ಅದಕ್ಕೆ ಬೇರೆಯಾದುದು ಅಸತ್ಯವೂ ಅನಾತ್ಮಕವೂ ಆಗಿದೆ. ಆದುದರಿಂದ ಇದೇ ಬ್ರಹ್ಮಜ್ಞಾನವು. ಭಾವನೆ ಅಭಾವನೆಗಳಿಂದಲೂ ಕಳೆಗಳಿಂದಲೂ ಬಿಡಲ್ಪಟ್ಟ ಈ ಚಿದ್ವಿದ್ಯೆಯೇ ಅದ್ವಿತೀಯ ಬ್ರಹ್ಮಜ್ಞಾನವು. ಸಚ್ಚಿದಾನಂದ ಪ್ರವಾಹಾತ್ಮಕವಾದ ಈ ಮಹಾತ್ರಿಪುರಸುಂದರಿಯು ಹೊರಗೂ ಒಳಗೂ ಪ್ರವೇಶಿಸಿ ತಾನೇತಾನಾಗಿ ಬೆಳಗುತಲಿರುವಳು. ಯಾವುದು ಅಸ್ತಿ ಎಂಬ ವ್ಯವಹಾರ ವಿಷಯವಾದ ಸತ್ತೋ ಯಾವುದು ವಿಭಾತಿ ಎಂಬ ವ್ಯವಹಾರವಾದ ಚಿತ್ತೋ ಯಾವುದು ಪ್ರಿಯವೆಂಬ ವ್ಯವಹಾರ ವಿಷಯವಾದ ಆನಂದವೋ ಈ ಸರ್ವಾಕಾರವಾದುದು ಮಹಾತ್ರಿಪುರಸುಂದರಿಯು. ನೀನೂ, ನಾನೂ, ಎಲ್ಲವೂ, ಪ್ರಪಂಚವೂ, ಎಲ್ಲಾ ದೇವತೆಗಳೂ ಮತ್ತು ಇತರವಾದ ಸರ್ವವೂ ಈ ಮಹಾತ್ರಿಪುರಸುಂದರಿಯೇ. ಈ ಸತ್ಸ್ವರೂಪವೇ ಲಲಿತಾಖ್ಯವಾದ

ಅದ್ವಿತೀಯ ವಸ್ತುವು, ಅಖಂಡಾರ್ಥವಾದ ಪರಬ್ರಹ್ಮವು. ಜೀವ ಈಶಾದಿ ಪಂಚ ಭೇದ ಪರಿತ್ಯಾಗದಿಂದ ಶುದ್ಧಚೈತನ್ಯಾತ್ಮಕವಾದ ಸ್ವರೂಪವನ್ನು ಬಿಡದಿರುವುದರಿಂದ ಸರ್ವಾಧಿಷ್ಠಾನವೂ ಪರತತ್ವವೂ ಆದ ಈ ಒಂದು ವಸ್ತುವೇ ಮಹತ್ತಾಗಿ ಉಳಿಯುತ್ತದೆ.

ಈ ಮೇಲಿನ ಶ್ರುತಿವಾಕ್ಯವು ಈ ಗ್ರಂಥದ ಪ್ರಥಮದಾರಭ್ಯ ಅಂತ್ಯದವರಿಗೆ ವಿವರಿಸಿರುವ ರಹಸ್ಯಾರ್ಥಗಳನ್ನೆಲ್ಲಾ ಒಳಗೊಂಡು ರಹಸ್ಯಾರ್ಥಕ್ಕೆ ಆಧಾರಭೂತವಾದುದಾಗಿರುವುದು. ವಾಚಕರು ಈ ಶ್ರುತ್ಯಾಧಾರವನ್ನಿಟ್ಟುಕೊಂಡು ರಹಸ್ಯಾರ್ಥಗಳನ್ನು ವಿಮರ್ಶೆಮಾಡಿಕೊಂಡು ಪರದೇವತೆಯೂ ಸಚ್ಚಿದಾನಂದಸ್ವರೂಪಿಣಿಯೂ ಆದ ಶ್ರೀಲಲಿತಾಮಹಾತ್ರಿಪುರಸುಂದರೀದೇವಿಯ ಮಹಿಮೆಯ ವಿದ್ಯಾನಂದವೆಂಬ ಅಮೃತವನ್ನು ಯಥೇಷ್ಟವಾಗಿ ಪಾನಮಾಡಬಹುದು ಗ್ರಂಥದ ಪ್ರಥಮದಾರಭ್ಯ ಇದುವರೆಗೂ ವಿವರಿಸಿರುವ ತತ್ವಗಳಿಂದ ಶ್ರೀಲಲಿತಾಮಹಾತ್ರಿಪುರಸುಂದರೀ ಪರಮೇಶ್ವರಿಯು ಪರಬ್ರಹ್ಮಸ್ವರೂಪಿಣಿಯೆಂಬುದನ್ನೂ, ಆ ಜಗನ್ಮಾತೆಯ ಮಂತ್ರವಾದ ಶ್ರೀಲಲಿತಾಪಂಚದಶಾಕ್ಷರೀ ಮಂತ್ರವು ಸತ್ಸ್ವರೂಪಿಣಿಯಾದ ಆ ದೇವಿಯಿಂದಲೇ ಜಗತ್ತು ಉದಯಿಸಿ, ವ್ಯಾಪಾರದಲ್ಲಿದ್ದು ಲಯವಾಗಿ ಪುನಃ ಸತ್ಸ್ವರೂಪಿಣಿಯಾದ ಆ ದೇವಿಯೇ ಉಳಿಯುವಳೆಂಬ ರಹಸ್ಯಾರ್ಥಗಳನ್ನೂ, ಒಳಗೊಂಡಿರುವುದೆಂಬುದನ್ನೂ ಸ್ಪಷ್ಟಪಡಿಸುವುದು.

ಮಂತ್ರದ ಪ್ರಥಮಾಕ್ಷರವು ಕ ಅಕ್ಷರವಾಗಿದೆ. ಅಂತ್ಯದ ಅಕ್ಷರವು ಲ. ಪ್ರಥಮ ಮತ್ತು ಅಂತ್ಯಾಕ್ಷರಗಳನ್ನು ಸೇರಿಸಿದರೆ ಕಲ ಎಂದಾಗುವುದು. ಕಲ ಎನ್ನುವುದಕ್ಕೆ ಅನೇಕ ಅರ್ಥಗಳಿವೆ. ಲೆಕ್ಕಮಾಡಲ್ಪಡುವುದಕ್ಕೆ ಕಲ ಎಂದು ಹೆಸರು. ಶಿಲ್ಪಿಕಾರ್ಯದಲ್ಲಿನ ಚಮತ್ಕಾರಕ್ಕೆ ಕಲ ಎನ್ನಲ್ಪಡುವುದು. ವಿದ್ಯೆಗೆ ಕಲ ಎನ್ನಲ್ಪಡುವುದು. ನಾದ ಬಿಂದು ಕಳೆಗಳಲ್ಲಿ ಅವ್ಯಕ್ತ್ಯಮಧುರ ಅಸ್ಫುಟವಾದ ನಾದಬ್ರಹ್ಮಕ್ಕೆ ಕಲ ಎಂದು ಕರೆಯಲ್ಪಡುವುದು. ಮಂತ್ರದ ಆದಿ ಅಂತ್ಯಾಕ್ಷರಗಳು ಸೇರಿ ಕಲ ಎಂದಾಗುವುದರಿಂದ ಮಂತ್ರಸ್ವರೂಪವನ್ನು ಕಲ ಎಂದು ಕರೆಯಬಹುದು. ಹೇಗೆಂದರೆ, ಮಂತ್ರವು ಬ್ರಹ್ಮಾಂಡದ ಸೃಷ್ಟಿಸ್ಥಿತಿಲಯಗಳ ತತ್ವಪ್ರತಿಪಾದಕವಾದುದಷ್ಟೆ ! ಬ್ರಹ್ಮಾಂಡದ ಸೃಷ್ಟಿಸ್ಥಿತಿಲಯಗಳು ಪರಬ್ರಹ್ಮನಿಂದಲ್ಲದೆ ಮತ್ತಾರಿಂದಲೂ ಉಂಟಾಗುವುದಿಲ್ಲವಾದುದರಿಂದ ಬ್ರಹ್ಮವಿದ್ಯೆಯೇ (ಕಲ - ವಿದ್ಯೆ) ಆಗಿರುವುದು. ನಾದಬ್ರಹ್ಮವಾದ ನಾದಬಿಂದು ಕಳೆಗಳಲ್ಲಿ ಪ್ರಥಮವಾದುದೇ ಕಲ. ಈ ಕಲೆಯಿಂದಲೇ ಸಕಲ ಸೃಷ್ಟಿಸ್ಥಿತಿಗಳಾಗಿ ಅಂತ್ಯದಲ್ಲಿ ಸಕಲವೂ ಪುನಃ ಕಲಾರೂಪಕ್ಕೆ ಬರುವುದೆಂಬ ತತ್ವಪ್ರತಿಪಾದನೆಯ ಸೂಚನೆಗೋಸ್ಕರಲೇ ಮಂತ್ರದ ಆದಿ ಮತ್ತು ಅಂತ್ಯಾಕ್ಷರಗಳು ಸೇರಿ ಕಲ ಎಂದಾಗುವುದು. ಜಗತ್ತಿನ ಸೃಷ್ಟಿಸ್ಥಿತಿಗಳು ಕ್ಷಣಿಕವಾದುದು ಮತ್ತು ಶಾಶ್ವತವಲ್ಲದ್ದು ಎಂಬ ತತ್ವವನ್ನು ಸೂಚಿಸುವುದ

ಕ್ಕೋಸ್ಕರಲೇ ಕಲ ಎಂದರೆ ರೆಪ್ಪೆ ಹೊಡೆಯುವಷ್ಟು ಕಾಲವೆಂದು ಅರ್ಥವು. ಜಗತ್ತಿಗೆ ಸೃಷ್ಟಿಸ್ಥಿತಿ ಲಯಗಳು ಇರುವುದರಿಂದ ಆದಿ ಅಂತ್ಯಗಳುಳ್ಳದ್ದಾಗಿ ಲೆಕ್ಕಮಾಡಲ್ಪಡುವ ಕಾಲಗಣನೆಯುಂಟಾಗುವುದರಿಂದ ಚ್ಯುತವುಳ್ಳದ್ದಾಗುವುದು. ಆದ್ಯಂತಗಳೆರಡೂ ಇಲ್ಲದೆ ಹ್ರೀಂ ಬೀಜಾಕ್ಷರಮಾತ್ರ ಉಳಿದುಕೊಳ್ಳುವಿಕೆಯೇ ಕಾಲದ ಲೆಕ್ಕಗಣನೆಯಿಲ್ಲದ ಅಚ್ಯುತಸ್ಥಿತಿಯಾಗುವುದು. ಹೀಗೆ ಚ್ಯುತಾಚ್ಯುತ ತತ್ವಪ್ರತಿಪಾದನೆಯ ಸೂಚನೆಗೋಸ್ಕರಲೇ ಮಂತ್ರದ ಆದ್ಯಂತಾಕ್ಷರಗಳು ಸೇರಿ ಕಲ ಎಂಬ ಪದವಾಗುವುದು.

ಶ್ರೀ ಚಕ್ರಾರಾಧಕರೂ ಶ್ರೀಲಲಿತಾಮಂತ್ರೋಪಾಸಕರೂ ಶ್ರೀಲಲಿತಾಸಹಸ್ರ ನಾಮ ಪಾರಾಯಣಮಾಡುವವರೂ ಆ ಜಗನ್ಮಾತೆಯ ತತ್ವದ ಮಹಿಮೆಯನ್ನು ಅರಿತು ಆ ಜಗದಂಬೆಯ ಮಹಿಮೆಯಿಂದ ಲಭ್ಯವಾಗುವ ಬ್ರಹ್ಮಾನಂದದ ಅಂತ ರ್ಗತವಾದ ವಿದ್ಯಾನಂದವನ್ನು ಅನುಭವಿಸಿ ಕೃತಕೃತ್ಯರಾಗಬಹುದು. ಮಂತ್ರೋ ಪಾಸಕರು ಮಂತ್ರದ ತತ್ವಾರ್ಥವನ್ನರಿತು ಮಂತ್ರಜಪಮಾಡುವುದು ಸರ್ವಶ್ರೇಷ್ಠ ವಾದುದು. ತತ್ವಾರ್ಥವನ್ನು ತಿಳಿದುಕೊಳ್ಳದೆ ಮಾಡುವ ಮಂತ್ರಜಪವು ಉತ್ತಮ ಫಲಕಾರಿಯಾಗಲಾರದು. ಹೇಗೆಂದರೆ ಶಬ್ದ, ಅರ್ಥಗಳೆಂಬೆರಡು ಇರುವುವು. ಶಬ್ದದಿಂದ ಅರ್ಥಬೋಧಕವಾಗುವುದು. ಶಬ್ದದ ಅರ್ಥವು ತಿಳಿಯದೇ ಹೋದರೆ ಸಾರ್ಥಕವಾಗುವುದಿಲ್ಲವಷ್ಟೆ? ನಮಗೆ ತಿಳಿಯದೇ ಇದ್ದ ಭಾಷೆಯಲ್ಲಿ ಮಾತನಾಡಿ ದರೆ ಶಬ್ದದ ಅರ್ಥವು ತಿಳುವಳಿಕೆಗೆ ಬರುವುದಿಲ್ಲ. ಆದುದರಿಂದ ಶಬ್ದವೂ ಅದರ ಅರ್ಥವೂ ಈ ಎರಡೂ ಆವಶ್ಯಕವಾಗಿ ಬೇಕಾದುದಾಗಿದೆ. ಬೀಜಾಕ್ಷರಗಳನ್ನೊಳ ಗೊಂಡ ಮಂತ್ರದಲ್ಲಿರುವ ಅಕ್ಷರಗಳ ಸಂಯೋಜನದಿಂದ ಉಂಟಾಗುವ ಶಬ್ದವು ಸಾಧಾರಣಶಬ್ದ ಶಕ್ತಿಯೆಂದು ತಿಳಿಯಬಾರದು. ದೇವತಾಮೂಲ ಮಂತ್ರಗಳಲ್ಲಿ ರುವ ಅಕ್ಷರಗಳ ಸಂಯೋಗವು ಅಸಾಧಾರಣ ಶಬ್ದಶಕ್ತಿಯನ್ನೊಳಗೊಂಡಿದೆ. ಆದುದರಿಂದ ಅರ್ಥತಿಳಿಯದೇ ಮಾಡುವ ಮಂತ್ರಜಪವು ತಕ್ಕಷ್ಟು ಫಲವನ್ನೇ ಕೊಡುವುದು. ಆದರೆ ಮಂತ್ರದ ತತ್ವಾರ್ಥವನ್ನು ಅರಿತು ಚೆನ್ನಾಗಿ ಮನನಮಾಡಿ ಜಪಮಾಡುವುದು ಮತ್ತು ಧ್ಯಾನಮಾಡುವುದು ಜ್ಞಾನಯಜ್ಞವೆನಿಸಿ ಅತ್ಯಂತ ಶ್ರೇಷ್ಠಶಕ್ತಿಯುಳ್ಳದ್ದಾಗಿಯೂ ಭವಬಂಧನದಿಂದ ಬಿಡಿಸಿಕೊಳ್ಳುವ ಆತ್ಮನಿಷ್ಠೆಗೆ ಬಹುಸಹಕಾರಿಯಾಗಿಯೂ ಕೊನೆಗೆ ಆತ್ಮಸಾಕ್ಷಾತ್ಕಾರವನ್ನೂ ಸಹ ಮಾಡಿಸಿ ಕೊಡುವುದಾಗಿಯೂ ಇರುವುದು. ಆದುದರಿಂದ ಮಂತ್ರೋಪಾಸಕರು ಆ ಜಗ ದಂಬೆಯ ಮಂತ್ರದಲ್ಲಿರುವ ಪ್ರತಿಯೊಂದು ಅಕ್ಷರದ ತತ್ವವನ್ನು ಮತ್ತು ಪ್ರತಿ ಯೊಂದು ಪಾದದ ಮಹತ್ವನ್ನೂ ಚೆನ್ನಾಗಿ ಮನನಮಾಡಿ ಜ್ಞಾಪಕದಲ್ಲಿಟ್ಟು ಕೊಂಡು ಈ ಸ್ಥೂಲದೇಹದ ಅಭಿಮಾನವನ್ನು ತ್ಯಜಿಸಿ (ಅಂಗನ್ಯಾಸ ಕರನ್ಯಾಸಗಳ ತತ್ವಗಳು) ಏಕಾಗ್ರತೆಯಿಂದ ಆತುರಪಡದೆ ನಿಧಾನವಾಗಿ ಜಪ ಮತ್ತು ಉಪಾಸನೆ

ಮಾಡಬೇಕು. ಅರ್ಥಭಾವನೆಯಿಲ್ಲದೆ ಒಂದು ಸಾವಿರ ಜಪಮಾಡುವುದಕ್ಕಿಂತಲೂ ಅರ್ಥಭಾವನೆಯೊಡನೆ ಹತ್ತು ಜಪಮಾಡುವಿಕೆಯು ಸರ್ವೋತ್ತಮವಾದುದು. ಇದೇ ಜ್ಞಾನಯಜ್ಞವೆನಿಸಿ ಕರ್ಮಮಾರ್ಗದ ಫಲವೂ ಬರುವುದಲ್ಲದೆ ಪರಬ್ರಹ್ಮ ಸ್ವರೂಪಿಣಿಯಾದ ಶ್ರೀಲಲಿತಾಮಹಾತ್ರಿಪುರಸುಂದರೀದೇವಿಯ ಸಾಕ್ಷಾತ್ಕಾರಕ್ಕೆ ಸಾಧನವಾಗಿ ಮೋಕ್ಷಸಾಮ್ರಾಜ್ಯವನ್ನು ಪಡೆಯಬಹುದು.

ಶ್ರೀಲಲಿತಾಮಹಾತ್ರಿಪುರಸುಂದರೀ ಭುವನೇಶ್ವರಿಯನ್ನು ಸಾಕ್ಷಾತ್ಕಾರಮಾಡಿ ಕೊಳ್ಳಬೇಕಾದರೆ ಅವರವರ ದೇಹವನ್ನು ಬಿಟ್ಟು ಹೊರಗೆ ಹುಡುಕಬೇಕಾದು ದಿಲ್ಲ. ಅವರವರ ದೇಹದಲ್ಲಿಯೇ ಸಚ್ಚಿದಾನಂದಸ್ವರೂಪಿಣಿಯಾದ ಶ್ರೀಲಲಿತಾತ್ರಿ ಪುರಸುಂದರೀ ಪರದೇವತೆಯನ್ನು ಸಾಕ್ಷಾತ್ಕಾರಮಾಡಿಕೊಳ್ಳಬಹುದು.

ಸಚ್ಚಿದಾನಂದಸ್ವರೂಪಳಾದ ಶ್ರೀಲಲಿತಾಮಹಾತ್ರಿಪುರಸುಂದರೀ ಪರ ದೇವತಾ ಪ್ರತಿಪಾದಕವಾದ ಹ್ರೀಂ ಬೀಜಾಕ್ಷರದ ತತ್ವವು ನಮ್ಮ ಶಿರಸ್ಸಿನಲ್ಲಿ ಸಹ ಸ್ರಾರಕಮಲದ ಮಧ್ಯಪ್ರದೇಶವಾದ ಕರ್ಣಿಕಾಪ್ರದೇಶದಲ್ಲಿರುವುದು. ಇದೇ ಓಂ ಬೀಜಾಕ್ಷರಕ್ಕೂ ಸ್ಥಾನವಾಗಿದೆ. ಉಪಾಸಕನು ಓಂ ಮತ್ತು ಹ್ರೀಂ ಬೀಜಾಕ್ಷರ ಗಳ ಪ್ರತಿಪಾದ್ಯವಾದ ಪರಬ್ರಹ್ಮವನ್ನು ಸಾಕ್ಷಾತ್ಕಾರಮಾಡಿಕೊಳ್ಳುವ ಸ್ಥಾನವು ಇದೇ ಆಗಿರುವುದು. ಕೆಳಗಿನ ತತ್ವವಿಚಾರಗಳಿಗೆ ಈ ಗ್ರಂಥದಲ್ಲಿ ಕೊಟ್ಟಿರುವ ಚಿತ್ರವನ್ನು ನೋಡುವುದು. ಸೃಷ್ಟಿತತ್ವಪ್ರತಿಪಾದಕವಾದ ಶ್ರೀಲಲಿತಾತ್ರಿಪುರ ಸುಂದರೀ ಮಂತ್ರದ ಪ್ರಥಮಪಾದವಾದ ಕ, ಏ, ಈ, ಲ, ಹ್ರೀಂ ಎಂಬುವುಗಳ ತತ್ವಗಳು ಮೂಲಾಧಾರಚಕ್ರದಲ್ಲಿರುವುವು. ಇದೇ ಸ್ಥಳವು ಸೃಷ್ಟಿಗೆ ಪ್ರಧಾನ ವಾದುದು ಮತ್ತು ಓಂಕಾರದಲ್ಲಿನ ಅ ಅಕ್ಷರದ ಸ್ಥಾನ, ಅಗ್ನಿಯಲ್ಲಿ ಗಾರ್ಹ ಪತ್ಯಾಗ್ನಿ ಇರುವ ಸ್ಥಳ. ಸ್ಥಿತಿ ತತ್ವಪ್ರತಿಪಾದಕವಾದ ಮಂತ್ರದ ದ್ವಿತೀಯಪಾದ ವಾದ ಹ, ಸ, ಕ, ಹ, ಲ, ಹ್ರೀಂ ಎಂಬುವುಗಳ ತತ್ವಗಳು ಎದೆಯ ಸ್ಥಳವಾದ ಅನಾಹತಚಕ್ರದಲ್ಲಿರುವುವು. ಹೃದಯಸ್ಥಳದಲ್ಲಿರುವ ಅನಾಹತಚಕ್ರವೇ ಸ್ಥಿತಿಗೆ ಪ್ರಧಾನಸ್ಥಳ. ಇದೇ ಓಂಕಾರದಲ್ಲಿನ ಉ ಅಕ್ಷರಸ್ಥಾನ, ಅಗ್ನಿಯಲ್ಲಿ ದಕ್ಷಿಣಾಗ್ನಿಗೆ ಸ್ಥಾನ. ಲಯತತ್ವಪ್ರತಿಪಾದಕವಾದ ಮಂತ್ರದ ತೃತೀಯಪಾದವಾದ ಸ, ಕ, ಲ ಎಂಬುವುಗಳ ತತ್ವಗಳು ಭ್ರೂಮಧ್ಯಕ್ಕೆ ಸೇರಿದ ಆಜ್ಞಾಚಕ್ರದಲ್ಲಿರುವುವು. ಇದೇ ಲಯಕ್ಕೆ ಪ್ರಧಾನಸ್ಥಳ. ಇದೇ ಓಂಕಾರದಲ್ಲಿನ ಮ ಅಕ್ಷರದ ಸ್ಥಾನ, ಅಗ್ನಿಯಲ್ಲಿ ಆಹವನೀಯಾಗ್ನಿಗೆ ಸ್ಥಾನ. ಮಂತ್ರಾಂತ್ಯದಲ್ಲಿರುವ ಪರಬ್ರಹ್ಮಪ್ರತಿ ಪಾದಕವಾದ ಹ್ರೀಂ ಬೀಜಾಕ್ಷರವು ಶಿರಸ್ಸಿನಲ್ಲಿ ಸಹಸ್ರಾರಕಮಲದಲ್ಲಿರುವುದು. ಇದೇ ಓಂಕಾರಸ್ಥಾನ, ಚಿಜ್ಜ್ಯೋತಿಸ್ಥಾನ. ಇದೇ ಹ್ರೀಂ ಪ್ರತಿಪಾದ್ಯಳಾದ ಶ್ರೀಲಲಿತಾಮಹಾತ್ರಿಪುರಸುಂದರೀ ಪರದೇವತೆಯ ಸ್ಥಾನ. ಮೇಲಿನ ತತ್ವ ಸಮರ್ಥನೆಗೆ ಶ್ರುತಿಪ್ರಮಾಣವೂ ಇರುವುದು. ಬ್ರಹ್ಮವಿದ್ಯೋಪನಿಷತ್, ಯೋಗ

ಚೂಡಾಮಣ್ಯುಪನಿಷತ್, ಯೋಗಕುಂಡಲಿನ್ಯುಪನಿಷತ್ ಮತ್ತು ಯೋಗ ಶಿಖೋಪನಿಷತ್ತುಗಳಲ್ಲಿ

ಬ್ರಹ್ಮಗ್ರಂಥಿರಕಾರೇಚ ವಿಷ್ಣುಗ್ರಂಥಿರ್ಹೃದಿಸ್ಥಿತಃ ।
ರುದ್ರಗ್ರಂಥಿರ್ಭ್ರುವೋರ್ಮಧ್ಯೇ ಭಿದ್ಯತೇಕ್ಷರವಾಯುನ ।
ಅಕಾರೇ ಸಂಸ್ಥಿತೋಬ್ರಹ್ಮಾ ಉಕಾರೆ ವಿಷ್ಣುರಾಸ್ಥಿತಃ ।
ಮಕಾರೆ ಸಂಸ್ಥಿತೋರುದ್ರ ಸ್ತತೋಸ್ಯಾಂತತ್ಪರಾತ್ಪರಃ।

**ತಾತ್ಪರ್ಯ**—ಮೂಲಾಧಾರಚಕ್ರದಲ್ಲಿ ಓಂಕಾರದಲ್ಲಿನ ಅಕಾರವಾದ ಬ್ರಹ್ಮ ಗ್ರಂಥಿಯು, ಹೃದಯದಲ್ಲಿ ವಿಷ್ಣುಗ್ರಂಥಿಯು ಭ್ರೂಮಧ್ಯದಲ್ಲಿ ರುದ್ರಗ್ರಂಥಿಯು ಇರುವುವು. ಇವುಗಳು ಸಮಾಧಿಯ ಅಭ್ಯಾಸದಿಂದ ಭೇದಿಸಲ್ಪಡುವುವು. ಸೃಷ್ಟಿ ಕಾರ್ಯಕ್ಕೆ ಕಾರಣವಾದ ಚತುರ್ಮುಖಬ್ರಹ್ಮಶಕ್ತಿಯು ಓಂಕಾರದಲ್ಲಿನ ಅಕಾರಸ್ಥಾನ ವಾದ ಮೂಲಾಧಾರ ಚಕ್ರದಲ್ಲೂ, ಪಾಲನೆಗೆ ಕಾರಣವಾದ ವಿಷ್ಣುಶಕ್ತಿಯು ಓಂಕಾರದಲ್ಲಿನ ಉಕಾರಸ್ಥಾನವಾದ ಹೃದಯದಲ್ಲೂ, ಲಯಕ್ಕೆ ಕಾರಣವಾದ ರುದ್ರಶಕ್ತಿಯು ಓಂಕಾರದಲ್ಲಿನ ಮಕಾರಸ್ಥಾನವಾದ ಭ್ರೂಮಧ್ಯದಲ್ಲೂ, ಸರ್ವಕ್ಕೂ ಕಾರಣವಾದ ಓಂಕಾರಸ್ವರೂಪವಾದ ಪರಾತ್ಪರವಸ್ತುವಾದ ಪರಬ್ರಹ್ಮವು ಶಿರಸ್ಸಿನಲ್ಲಿರುವ ಸಹಸ್ರಾರಕಮಲದಲ್ಲೂ ಇರುವುವು. ಎಂದು ಹೇಳಿದೆ

ಆದುದರಿಂದ ಹ್ರೀಂ ಪ್ರತಿಪಾದ್ಯಳಾದ ಪರಬ್ರಹ್ಮಸ್ವರೂಪಿಣಿಯಾದ ಶ್ರೀ ಲಲಿತಾಮಹಾತ್ರಿಪುರಸುಂದರೀ ಪರದೇವತೆಯ ಸ್ಥಾನವು ನಮ್ಮ ಶಿರಸ್ಸಿನಲ್ಲಿರುವ ಸಹಸ್ರಾರಕಮಲದ ಸ್ಥಳವಾಗಿದೆ. ಅಧಿಕಾರಿಯು ಸ್ಥೂಲದೇಹದ ಭಾವನೆಯನ್ನು ತ್ಯಜಿಸಿ ಭ್ರೂಮಧ್ಯದಲ್ಲಿ ದೃಷ್ಟಿಯನ್ನಿಟ್ಟು ಅಲ್ಲಿ ಗೋಚರವಾಗುವ ತೇಜಸ್ಸಿನಲ್ಲಿ ಸೋಹಂ ಭಾವದಿಂದ ಶ್ರೀಲಲಿತಾಮಹಾತ್ರಿಪುರಸುಂದರೀ ಪರದೇವತೆಯನ್ನು ಭಕ್ತಿಯಿಂದ ಉಪಾಸನೆಮಾಡುತ್ತಾ ಬಂದಲ್ಲಿ ಸಹಸ್ರಾರಕಮಲದಲ್ಲಿ ಆ ದೇವಿಯ ಸಾಕ್ಷಾತ್ಕಾರವನ್ನು ಹೊಂದಿ ಜನನಮರಣ ಪ್ರವಾಹರೂಪವಾದ ಭವಬಂಧನದಿಂದ ಬಿಡುಗಡೆಯಾಗಿ ಮೋಕ್ಷಸಾಮ್ರಾಜ್ಯವನ್ನು ಅನುಭವಿಸಬಹುದು.

**ಓಂ ತತ್ಸತ್.**

ಶ್ರೀ.

## ಆರನೆಯ ಪ್ರಕರಣ.

---

### ಶ್ರೀಗಾಯತ್ರೀಮಂತ್ರ, ಶ್ರೀಲಲಿತಾಪಂಚದಶಾಕ್ಷರೀಮಂತ್ರ, ಶ್ರೀಮದ್ರಾಮಾಯಣದ ಅಂತರಾರ್ಥದ, ಶ್ರೀಸಪ್ತಮಾತೃಕಾಂಬಾತಾದಾತ್ಮ್ಯನಾದ ಶ್ರೀಸರಸ್ವತೀ ವೀಣೆಯಲ್ಲಿನ ಸಪ್ತಸ್ವರ ಇವುಗಳ ಏಕಾರ್ಥದ ನಿರೂಪಣೆ.

---

ಇದುವರೆಗೂ ಶ್ರೀಲಲಿತಾಪಂಚದಶಾಕ್ಷರೀಮಂತ್ರಾರ್ಥ ರಹಸ್ಯಾರ್ಥವನ್ನು ತಿಳಿಸಿತು. ಶ್ರೀಲಲಿತಾಮಹಾತ್ರಿಪುರಸುಂದರೀದೇವಿಯು ಪರಬ್ರಹ್ಮಸ್ವರೂಪಿಣಿಯಷ್ಟೆ? ಇದರಂತೆ ಎಲ್ಲಾ ದೇವತಾಶಕ್ತಿಗಳೂ ಪರಬ್ರಹ್ಮಸ್ವರೂಪವೇ ಆಗಿರುತ್ತಾರೆ. ಮತ್ತು ಎಲ್ಲಾ ದೇವತಾಮಂತ್ರಗಳೂ ಒಂದಾದ ಪರಬ್ರಹ್ಮತತ್ವಪ್ರತಿಪಾದಕವಾಗಿ ಇದ್ದೇ ಇರುತ್ತವೆ. ಕಾರಣವೇನೆಂದರೆ ಸರ್ವದೇವತಾಶಕ್ತಿಗಳೂ ಮತ್ತು ಸರ್ವವೂ ಕಾರ್ಯರೂಪಕ್ಕೋಸ್ಕರ ಉದಯಿಸಿ ಪುನಃ ಅಂತರ್ಧಾನವನ್ನು ಹೊಂದಿ ಪರಬ್ರಹ್ಮವೇ ಆಗುವುದರಿಂದ ಸರ್ವದೇವತಾ ಅವತಾರಗಳ ಚೈತನ್ಯಗಳು ಪರಬ್ರಹ್ಮದಲ್ಲೇ ಮುಖ್ಯತಾತ್ಪರ್ಯವುಳ್ಳದ್ದಾಗಿ ಇರುವುದರಿಂದಲೂ ಮತ್ತು ಸರ್ವದೇವತಾ ಅವತಾರಗಳ ಚೈತನ್ಯಾತ್ಮಕಗಳೇ ಮಂತ್ರಗಳ ರೂಪವಾಗಿರುವುದರಿಂದಲೂ ಪರಬ್ರಹ್ಮತತ್ವವನ್ನೇ ಪ್ರತಿಪಾದಿಸುವುವು. ಯಾವ ದೇವತಾಶಕ್ತಿಯು ಮತ್ತು ಯಾವ ದೇವತಾಮಂತ್ರವು ಪರಬ್ರಹ್ಮತತ್ವಪ್ರತಿಪಾದಕವಾಗಿಲ್ಲವೋ ಅಂತಹುದು ದೇವತಾಶಕ್ತಿಯೂ ಅಲ್ಲ ಮತ್ತು ಮಂತ್ರವೂ ಅಲ್ಲ.

ಎಲ್ಲಾ ದೇವತಾಶಕ್ತಿಗಳಿಗೂ ಪರಬ್ರಹ್ಮದಲ್ಲೇ ಮುಖ್ಯತಾತ್ಪರ್ಯವೆಂದು ಪರಿಗಣಿಸುವುದರಿಂದ ಅದ್ವೈತತತ್ವವೇ ಅಂದರೆ ಇರುವುದು ಒಂದೇಯೆಂದು ನಿಶ್ಚಯವಾಗುವುದು. ಅದ್ವೈತತತ್ವವನ್ನು ಬಿಟ್ಟರೆ ದೇವತಾಶಕ್ತಿಗಳ ಮತ್ತು ಮಂತ್ರಗಳ ನಿಶ್ಚಯವಾದ ಸಾರವು ಗೋಚರವಾಗಲಾರದು. ಇದರಿಂದ ಕರ್ಮ ಜ್ಞಾನ ಮಾರ್ಗಗಳಲ್ಲಿರತಕ್ಕ ಯಥಾರ್ಥವು ಭಾಸವಾಗದೆ ಭತ್ತದೊಳಗಿನ ಸಾರವಾದ ಅಕ್ಕಿಯನ್ನು ಬಿಟ್ಟು ನಿಸ್ಸಾರವಾದ ಹೊಟ್ಟನ್ನು ಪಡೆದುಕೊಂಡಂತೆ ಆಗುವುದು. ಸರ್ವದೇವತಾಶಕ್ತಿಗಳೂ ಅವುಗಳ ಮಂತ್ರಗಳೂ ಅದ್ವೈತಾಮೃತರೂಪವಾಗಿ ಪರಬ್ರಹ್ಮವನ್ನೇ ಪ್ರತಿಪಾದಿಸುವುವು. ಹ್ರೀಂ ಎಂಬ ಬೀಜಮಂತ್ರವು ಶ್ರೀಲಲಿತಾ ಭುವನೇಶ್ವರ್ಯಾತ್ಮಕವಾಗಿ ಹೇಗೆ ಪರಬ್ರಹ್ಮರೂಪವಾಗಿರುವುದೋ ಹಾಗೆಯೆ ಶ್ರೀಂ ಬೀಜಮಂತ್ರಾತ್ಮಕವಾದ ಶ್ರೀಮಹಾಲಕ್ಷ್ಮೀದೇವಿಯೂ, ಐಂ ಬೀಜ

ಮಂತ್ರಾತ್ಮಕವಾದ ಶ್ರೀ ಸರಸ್ವತೀದೇವಿಯೂ, ಕ್ಲೀಂ ಬೀಜಮಂತ್ರಾತ್ಮಕವಾದ ಶ್ರೀ ಕೃಷ್ಣಪರಮಾತ್ಮ ಮತ್ತು ಮನ್ಮಥರೂ, ಹೀಗೆಯೆ ಸರ್ವದೇವತಾ ಬೀಜ ಮಂತ್ರಗಳು ಪರಬ್ರಹ್ಮಪ್ರತಿಪಾದಕವಾಗಿ ಇದ್ದೇ ಇರುವುವು. ಆದುದರಿಂದ ಶ್ರೀಲಲಿತಾಪಂಚದಶಾಕ್ಷರೀ ಮಂತ್ರದ ರಹಸ್ಯಾರ್ಥವನ್ನು ಶ್ರೀ ಗಾಯತ್ರೀಮಂತ್ರದ ತತ್ವಾರ್ಥದೊಡನೆಯೂ, ರಾಮಾಯಣದ ಅಂತರಾರ್ಥದೊಡನೆಯೂ, ಶ್ರೀಸರಸ್ವತೀ ಮಹಿಮೆಯಾದ ವೀಣಾರಹಸ್ಯದೊಡನೆಯೂ ಸಮನ್ವಯಮಾಡಿ ರಹಸ್ಯಾರ್ಥಗಳ ಏಕತತ್ವಾರ್ಥದ ವಿಚಾರವನ್ನರಿತು ಅದರಿಂದ ಹೊಂದಬಹುದಾದ ಅದ್ವೈತಾನಂದ ವನ್ನು ಪಡೆಯೋಣ.

ಈ ಮೇಲಿನ ಅನ್ವಯದ ಸೌಕರ್ಯಕ್ಕೆ ವೀಣೆಯಲ್ಲಿರುವ ೨೪ ಮನೆಗಳು, ಆ ಮನೆಗಳಲ್ಲಿರತಕ್ಕ ಸ್ವರಗಳು, ಈ ೨೪ ಮನೆಗಳಿಗೆ ಅನುಸಾರವಾದ ಶ್ರೀ ಗಾಯತ್ರಿಯ ೨೪ ಅಕ್ಷರಗಳು, ಶ್ರೀಲಲಿತಾಪಂಚದಶಾಕ್ಷರೀಮಂತ್ರದ ಅಕ್ಷರಗಳು ಮತ್ತು ಇದಕ್ಕೆ ಅನುಸಾರವಾದ ಶ್ರೀಶಂಕರಭಗವತ್ಪಾದರವರ ವಿವರಣೆ, ಇವುಗಳಲ್ಲದೆ ರಾಮಾಯಣದ ಏಳು ಕಾಂಡಗಳ ತತ್ವಗಳು ಎಷ್ಟೆಷ್ಟು ಮನೆಗಳಿಗೆ ವಿಭಾಗವಾಗಿ ಅನ್ವಯವಾಗುವುವೊ ಅವುಗಳನ್ನು ಸಹ ತೋರಿಸುವ ನಕ್ಷೆಯೊಂದನ್ನು ಮುಂದೆ ೩೩೮ ನೆಯ ಪೇಜಿನಲ್ಲಿ ಕೊಟ್ಟಿರುವುದು. ಆ ನಕ್ಷೆಯನ್ನಿಟ್ಟುಕೊಂಡು ತತ್ವಾರ್ಥ ಗಳನ್ನು ಗಮನಕ್ಕೆ ತಂದುಕೊಳ್ಳಬೇಕು.

* * *

ಶ್ರೀ ಗಾಯತ್ರೀ ೨೪ ಅಕ್ಷರಗಳ ತತ್ವಗಳಿಗೆ ಸಮನ್ವಯವಾಗಲು ಶ್ರೀಲಲಿತಾ ಪಂಚದಶಾಕ್ಷರೀ ಮಂತ್ರದಲ್ಲಿನ ಲ ಮತ್ತು ಹ್ರೀಂ ಅಕ್ಷರಗಳು ಒಂದೇ ಮನೆಯಲ್ಲಿ ಅನೇಕ ಕಡೆ ಬರುತ್ತವೆ. ಹೀಗೆ ಬರುವುದಾದರೂ ತತ್ವಾರ್ಥಕ್ಕೆ ಕೊಂಚವೂ ಭೇದವುಂಟಾಗುವುದಿಲ್ಲ. ಸರ್ವವ್ಯಾಪಕವೂ ಪರಬ್ರಹ್ಮಪ್ರತಿಪಾದಕವೂ ಆದ ಹ್ರೀಂ ಬೀಜಾಕ್ಷರವು ಎಲ್ಲಾ ಅಕ್ಷರಗಳಲ್ಲೂ ಇರುತ್ತಾದ್ದರಿಂದ ಯಾವ ಅಕ್ಷರದ ಜೊತೆಯಲ್ಲಿದ್ದರೂ ತತ್ವಾರ್ಥಕ್ಕೆ ಬಾಧಕವಿಲ್ಲ. ಶ್ರೀಲಲಿತಾಮಂತ್ರದಲ್ಲಿ ಎಲ್ಲಾ ಕಡೆಯಲ್ಲೂ ಹ್ರೀಂ ಅಕ್ಷರವು ಲ ಅಕ್ಷರವನ್ನು ಕೂಡಿಕೊಂಡೇ ಇರುವುದರಿಂದ ಈ ಸಮನ್ವಯದಲ್ಲಿ ಲ ಅಕ್ಷರದೊಡನೆ ಸೇರಿಸಿರುವುದು ತತ್ವಾರ್ಥಕ್ಕೂ ಮಂತ್ರದ ಮರ್ಯಾದೆಗೂ ಕುಂದಕವಿಲ್ಲ. ಅಲ್ಲದೆ ಶ್ರೀ ಗಾಯತ್ರೀ ೨೪ ಅಕ್ಷರಗಳಿಗೆ ಸಮ ನ್ವಯಮಾಡಲು ಶ್ರೀಲಲಿತಾಪಂಚದಶಾಕ್ಷರೀಮಂತ್ರವು ಎರಡಾವರ್ತಿ ಬರುವುದು. ಸೃಷ್ಟಿ ಸ್ಥಿತಿ ಲಯಗಳ ತತ್ವಗಳನ್ನನುಸರಿಸಿ ಶಾಸ್ತ್ರೋಕ್ತವಾಗಿ ವಿಂಗಡಿಸಿದರೆ ಪ್ರತಿ ಯೊಂದು ಮಂತ್ರವೂ ಅನೇಕಾವರ್ತಿ ಒಳತತ್ವವಾಗಿ ಬರಬಹುದು. ಆದುದರಿಂದ ಶ್ರೀಲಲಿತಾಪಂಚದಶಾಕ್ಷರೀ ಮಂತ್ರವು ಎರಡಾವರ್ತಿ ಬಂದಿರುವುದು ತತ್ವಗಳನ್ನು ಬಹು ಚೆನ್ನಾಗಿ ವಿಂಗಡಿಸಿ ಅತಿಶಯವಾದ ತತ್ವಾಮೃತವನ್ನು ಹೊರಸೂಸುವುದು.

ಅಂತ್ಯದ ಮನೆಯಲ್ಲೆಂದರೆ "೨೪ ನೇ ಮನೆಯಲ್ಲಿ" ಸಪ್ತಮಾತೃಕಾ ದೇವಿಯರ ತಾದಾತ್ಮ್ಯವಾದ ಸಪ್ತಸ್ವರಗಳಲ್ಲಿನ 'ಸ' (ಷಡ್ಜ) ಸ್ವರವೂ, ಶ್ರೀಗಾಯತ್ರೀ ಮಂತ್ರದಲ್ಲಿನ ಬೀಜರೂಪವಾದ 'ತತ್' ಎಂಬುದೂ, ಶ್ರೀಲಲಿತಾಮಂತ್ರದ 'ಹ್ರೀಂ' ಬೀಜಾಕ್ಷರ ಮತ್ತು ಹರಿಃ ಎಂಬ ವಿವರಣೆಯನ್ನೊಳಗೊಂಡ ಲ ಅಕ್ಷರವೂ, ರಾಮಾವತಾರಕ್ಕೆ ಮೂಲವಾದ 'ಮಹಾವಿಷ್ಣುವಿನ' ತತ್ವವೂ, ಈ ೨೪ ನೇ ಮನೆಯ ತತ್ವಾರ್ಥದಲ್ಲಿವೆ. ಯಾವ ಸೃಷ್ಟಿಯೂ ಇಲ್ಲದೆ ಪರಬ್ರಹ್ಮಮಾತ್ರ ಉಳಿಕೆ ಯಾಗಿರುವಿಕೆಯೇ ಈ ೨೪ ನೇ ಮನೆಯ ತತ್ವವಾಗಿರುವುದು. ಅಂದರೆ ೨೪ ನೇ ಮನೆಯಲ್ಲಿರುವ ಷಡ್ಜಸ್ವರವೂ, ಶ್ರೀ ಗಾಯತ್ರೀಮಂತ್ರದ ತತ್ ಪದವೂ, ಶ್ರೀ ಲಲಿತಾಬೀಜಾಕ್ಷರವಾದ ಹ್ರೀಂ ಅಕ್ಷರವೂ, ಶ್ರೀ ರಾಮಾವತಾರಕ್ಕೆ ಮೂಲಬೀಜ ವಾದ ಶ್ರೀ ಮಹಾವಿಷ್ಣುವೂ ಪರಬ್ರಹ್ಮಮಾತ್ರ ಇದ್ದ ಸ್ಥಿತಿಯ ತತ್ವಪ್ರತಿಪಾದಕ ವಾಗಿದೆ. ಅಂದರೆ ಅಂತ್ಯದ ಮನೆಯು ಯಾವ ಸೃಷ್ಟಿಯೂ ಇಲ್ಲದೆ ಪರಬ್ರಹ್ಮ ಒಂದೇ ಇರುವ ತತ್ವವನ್ನು ಪ್ರತಿಪಾದನೆ ಮಾಡುವುದು. ಈ ತತ್ವಪ್ರತಿಪಾದನೆಯ ವಿವರಣೆಗಳಿಗೆ ಆಯಾಯ ಗ್ರಂಥಗಳ ಆಯಾಯ ಪ್ರಕರಣಗಳನ್ನು ನೋಡಿ ಸಮ ನ್ವಯಮಾಡಿಕೊಳ್ಳಬೇಕು.

**ಸವಿತುಃ ||** ಸವಿತುಃ-ಎಂಬುದು ಶ್ರೀ ಗಾಯತ್ರೀಮಂತ್ರದ ದ್ವಿತೀಯಪದ ವಾಗಿದೆ. ಪರಬ್ರಹ್ಮಮಾತ್ರ ಇದ್ದ ಸ್ಥಿತಿಯ ತತ್ವವೆಂದು ೨೪ ನೇ ಮನೆಯ ತತ್ವದಲ್ಲಿ ತಿಳಿಸಿತಷ್ಟೆ! ಪರಬ್ರಹ್ಮಮಾತ್ರ ಇದ್ದ ಸ್ಥಿತಿಯಿಂದ ಜಗತ್ಸೃಷ್ಟಿಯು ಉದಯವಾಗಿ ಜಗತ್ಸೃಷ್ಟಿಕಾರ್ಯ ಮತ್ತು ಸೃಷ್ಟಿಕಾರ್ಯಕರ್ತನಾದ ಈಶ್ವರನ ಸೋಪಾನವೇ ಶ್ರೀ ಗಾಯತ್ರೀಮಂತ್ರದ ಸವಿತುಃ ಪದದ ತತ್ವವಾಗಿರುವುದು. ಈ ಸೃಷ್ಟಿಕಾರ್ಯ ಮತ್ತು ಸೃಷ್ಟಿಕರ್ತನಾದ ಈಶ್ವರನ ಸೋಪಾನದ ತತ್ವಪ್ರತಿ ಪಾದಕವಾಗಿಯೇ ಶ್ರೀಲಲಿತಾಮಂತ್ರದಲ್ಲಿನ ಪ್ರಥಮಪಾದದ ಕ, ಏ, ಈ ಎಂಬಕ್ಷರ ಗಳು, ಇವುಗಳ ವಿವರಣೆಯಾದ ಶಿವಃ, ಶಕ್ತಿಃ, ಕಾಮಃ, ಎಂಬುವುಗಳೂ, ಸಪ್ತ ಸ್ವರಗಳಲ್ಲಿನ ಶುದ್ಧಋಷಭ ಚತುಶ್ರುತಿಋಷಭ ಷಟ್‌ಶ್ರುತಿಋಷಭ ಶುದ್ಧಗಾಂಧಾರ ಸ್ವರಗಳೂ ಇರುವುವಾಗಿವೆ. ಅಲ್ಲದೆ ಶ್ರೀಮದ್ರಾಮಾಯಣದ ಬಾಲಕಾಂಡದ ಅಂತರಾರ್ಥವು ಕೂಡ ಸೃಷ್ಟಿಕಾರ್ಯ ಮತ್ತು ಸೃಷ್ಟಿಕರ್ತನಾದ ಈಶ್ವರನ ಸೋಪಾನ ವನ್ನೇ ಪ್ರತಿಪಾದಿಸುವುದು. ಈ ಸವಿತುಃ ಪದದ ವಿವರಣೆಯನ್ನು ರಾಮಾಯಣದ ಅಂತರಾರ್ಥ, ಸರಸ್ವತೀಮಹಿಮಾಪ್ರತಿಪಾದಕವಾದ ವೀಣಾರಹಸ್ಯ, ಸಂಧ್ಯಾ ವಂದನೆಯತತ್ವಾರ್ಥ ಗ್ರಂಥಗಳನ್ನು ಇದರ ಜೊತೆಗೆ ಪಠಿಸಿ ತಿಳಿದುಕೊಳ್ಳಬಹುದು.

**ವರೇಣಿಯಂ ||** ಶ್ರೀಗಾಯತ್ರೀಮಂತ್ರದಲ್ಲಿ ಸವಿತುಃ ಪದದ ಅನಂತರ ಬರುವ ವರೇಣಿಯಂ ಎಂಬುದರ ಅರ್ಥವು ಸರ್ವಪ್ರಾಣಿಗಳಿಂದಲೂ ಅಪೇಕ್ಷಣೀಯ ವಾದುದು, ಶ್ರೇಷ್ಠವಾದುದು ಮತ್ತು ಸೇವಿಸಲು ಯೋಗ್ಯವಾದುದು ಯಾವುದೋ

ಅಂತಹ ವಸ್ತುವು. ಇಂತಹ ವಸ್ತುವು ಪರಬ್ರಹ್ಮವೂ, ಈಶ್ವರನೂ, ಸೂರ್ಯನೂ, ಚಂದ್ರನೂ, ಜೀವಚೈತನ್ಯನೂ ಆಗಿರುತ್ತಾರೆ. ಸವಿತುಃ ಪದದಲ್ಲಿ ಪ್ರಾರಂಭವಾದ ಸೃಷ್ಟಿಯು ಪೂರ್ಣವಾಗುವಿಕೆ ಮತ್ತು ಇಂತಹ ಸೃಷ್ಟಿಯಾದ ಜಗತ್ತಿನಲ್ಲಿ ಪರ ಬ್ರಹ್ಮವೇ ಸರ್ವರೂಪವಾಗಿಯೂ ಸರ್ವಾಂತರ್ಯಾಮಿಯಾಗಿಯೂ ಬೆಳಗುತ್ತಲಿರುವ ಅಂತರ್ಯಾಮಿಯ ಮಹಿಮಾಪ್ರತಿಪಾದಕವಾಗಿರುವ ಅಂತರಗಾಂಧಾರಸ್ವರವೂ ಶ್ರೀಲಲಿತಾಪಂಚದಶಾಕ್ಷರಿಯ ಲ, ಹ್ರೀಂ ಎಂಬ ಅಕ್ಷರ ಮತ್ತು ಇದರ ವಿವರಣೆ ಯಾದ ಕ್ಷಿತಿಃ ಎನ್ನುವವುಗಳೂ ವರೇಣಿಯಂ ಎಂಬುದರ ಪ್ರಥಮ ಮನೆ ಯಲ್ಲಿರುವುವು.

ಶಾಖಕ್ಕೆ ಶೈತ್ಯವು ಹೇಗೆ ಪ್ರತಿಕಕ್ಷಿಯೋ ಹಾಗೆಯೆ ಮಧ್ಯಮ ಸ್ವರಕ್ಕೆ ಪ್ರತಿಮಧ್ಯಮಸ್ವರವು ಪ್ರತಿಕಕ್ಷಿಯಾಗಿದೆ. ಇದರಂತೆ ಶಾಖಸ್ವರೂಪವಾದ ರವಿಗೆ ಶೈತ್ಯಸ್ವರೂಪನಾದ ಚಂದ್ರನು ಪ್ರತಿಕಕ್ಷಿ. ಆದುದರಿಂದ ಪ್ರಪಂಚವ್ಯಾಪಾರಕ್ಕೆ ಕಾರಣರಾದ ಶ್ರೇಷ್ಠರಾದ ಸೇವಿಸಲು ಯೋಗ್ಯರಾದ ಸೂರ್ಯ ಮತ್ತು ಚಂದ್ರರ ತತ್ವಗಳೂ ಮತ್ತು ಪ್ರಪಂಚವ್ಯಾಪಾರಕ್ಕೆ ಬೇಕಾದ ಕಾಮನೆಯ ಬೀಜದ ಉದಯದ ತತ್ವವಾದ ಶ್ರೀಲಲಿತಾಮಂತ್ರದ ಕ ಅಕ್ಷರದ ವಿವರಣೆಯಾದ ಸ್ಮರಃ ಎಂಬುದೂ, ಅಲ್ಲದೆ ಈ ಕಾಮನೆಯ ತತ್ವಕ್ಕನುಸಾರವಾದ ವಿಸ್ತಾರವಾಗುವ ಅರ್ಥವುಳ್ಳ ಪಂಚಮಸ್ವರವೂ ವರೇಣಿಯಂಪದದ ಎರಡು, ಮೂರು ನಾಲಕ್ಕನೇ ಅಕ್ಷರಗಳ ತತ್ವವಾಗಿರುವುದು. ಅಲ್ಲದೆ ಸೃಷ್ಟಿಯಾದ ಪ್ರಾಣಿಗಳ ದೇಹದಲ್ಲಿರತಕ್ಕ ಜೀವಚೈತನ್ಯವು ದೇಹವ್ಯಾಪಾರದ ಪ್ರಕಾಶಕವಾಗಿ ಕೋಶಗಳಲ್ಲೂ ಇಂದ್ರಿಯ ಗಳಲ್ಲೂ ಅವತರಿಸುವ ದೇಹವ್ಯಾಪಾರದ ಪ್ರಾರಂಭವಾಗುವಿಕೆಯನ್ನೂ ಸಹ ವರೇಣಿಯಂ ಪದದ ತತ್ವವು ವಿಶದಪಡಿಸುವುದು. ಅಂದರೆ ಇಂದ್ರಿಯ ಮತ್ತು ಕೋಶಗಳ ಪ್ರಕಾಶಕನಾಗಿರುವ ಜೀವಚೈತನ್ಯನೂ ಶ್ರೇಷ್ಠನೆಂಬುದನ್ನು ವರೇಣಿಯಂ ಪದವು ಪ್ರತಿಪಾದಿಸುವುದು. ಶ್ರೀರಾಮನು ಅಯೋಧ್ಯೆಯಿಂದ ವನವಾಸಕ್ಕೆ ಹೊರಟು ದಂಡಕಾರಣ್ಯಕ್ಕೆ ಪ್ರವೇಶಮಾಡಿದ ಕಥೆಯ ಅಂತರಾರ್ಥಗಳೂ ಸಹ ಮೇಲಿನ ತತ್ವವನ್ನೇ ಪ್ರತಿಪಾದಿಸುವುದು. ಅಂದರೆ ವರೇಣಿಯಂ ಪದವೂ, ಈ ಪದದಲ್ಲಿರುವ ಶ್ರೀಲಲಿತಾಪಂಚದಶಾಕ್ಷರೀ ಮಂತ್ರದ ಅಕ್ಷರಗಳೂ, ಅಂತರ ಗಾಂಧಾರ ಮಧ್ಯಮ ಪ್ರತಿಮಧ್ಯಮ ಪಂಚಮಸ್ವರಗಳೂ, ಅಯೋಧ್ಯಾಕಾಂಡದ ಅಂತರಾರ್ಥಗಳೂ ಜಗದ್ವ್ಯಾಪಾರಕ್ಕೆ ಕಾರಣರಾದ ಅಂತರ್ಯಾಮಿ, ಸೂರ್ಯ, ಚಂದ್ರ, ಜೀವಚೈತನ್ಯರ ತತ್ವವಿಚಾರಗಳನ್ನೂ ಪ್ರತಿಪಾದಿಸುತ್ತವೆ.

**ಭರ್ಗಃ ||** ವರೇಣಿಯಂಪದದ ಮುಂದಿನ ಪದವಾದ ಭರ್ಗಃ ಎಂಬುದರ ಅರ್ಥವೇನೆಂದರೆ—ಅವಿದ್ಯಾಕಾರ್ಯ ಪ್ರಕಾಶಕ ಮತ್ತು ಅವಿದ್ಯಾನಾಶದ ಪ್ರಕಾಶಕ

## ಶ್ರೀಗಾಯತ್ರೀ, ಶ್ರೀಲಲಿತಾಪಂಚದಶಾಕ್ಷರೀ, ಶ್ರೀಸಪ್ತಮಾತೃಕಾ ಮತ್ತು ಶ್ರೀಮದ್ರಾಮಾಯಣ ಇವುಗಳ ಏಕತತ್ವಾರ್ಥದ ನಿರೂಪಣೆ

| ವೀಣೆಯ ಮನೆಗಳು | ೧ | ೨ | ೩ | ೪ | ೫ | ೬ | ೭ | ೮ | ೯ | ೧೦ | ೧೧ | ೧೨ | ೧೩ | ೧೪ | ೧೫ | ೧೬ | ೧೭ | ೧೮ | ೧೯ | ೨೦ | ೨೧ | ೨೨ | ೨೩ | ೨೪ |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| ಸಪ್ತಮಾತೃಕಾಶಕ್ತಿ (ವೀಣೆಯ ಮನೆಗಳ ಸ್ವರಗಳು). | ರಿ | ರಿ ಗ | ರಿ ಗ | ಗ | ಮ | ಮ | ಪ | ಧ | ಧ ನಿ | ಧ ನಿ | ನಿ | ಸ | ರಿ | ರಿ ಗ | ರಿ ಗ | ಗ | ಮ | ಮ | ಪ | ಧ | ಧ ನಿ | ಧ ನಿ | ನಿ | ಸ |
| ಶ್ರೀ ಗಾಯತ್ರೀಮಂತ್ರ | ಸ | ವಿ | ತುಃ | ವ | ರೇ | ಣಿ | ಯಂ | ಭ | ರ್ಗಃ | ದೇ | ವ | ಸ್ಯ | ಧೀ | ಮ | ಹಿ | ಧಿ | ಯೋ | ಯೋ | ನಃ | ಪ್ರ | ಚೋ | ದ | ಯಾತ್ | ತತ್ |
| ಶ್ರೀಲಲಿತಾಪಂಚದಶಾಕ್ಷರೀಮಂತ್ರ. | ಕ | ಏ | ಈ | ಲ ಹ್ರೀಂ | ಹ | ಸ | ಕ | ಹ | ಲ ಹ್ರೀಂ | ಸ | ಕ | ಲ ಹ್ರೀಂ | ಕ | ಏ | ಈ | ಲ ಹ್ರೀಂ | ಹ | ಸ | ಕ | ಹ | ಲ ಹ್ರೀಂ | ಸ | ಕ | ಲ ಹ್ರೀಂ |
| ಶ್ರೀ ಲಲಿತಾ ಪಂಚದಶಾಕ್ಷರೀಮಂತ್ರದ ವಿವರಣೆ. ಶ್ರೀ ಶಂಕರಾಚಾರ್ಯರವರಿಂದ. | ಶಿವಃ | ಶಕ್ತಿಃ | ಕಾಮಃ | ಕ್ಷಿತಿಃ | ರವಿಃ | ಶೀತಕಿರಣಃ | ಸ್ಮರಃ | ಹಂಸಃ | ಶಕ್ರಃ | ಪರಾ | ಮಾರ | ಹರಿಃ | ಶಿವಃ | ಶಕ್ತಿಃ | ಕಾಮಃ | ಕ್ಷಿತಿಃ | ರವಿಃ | ಶೀತಕಿರಣಃ | ಸ್ಮರಃ | ಹಂಸಃ | ಶಕ್ರಃ | ಪರಾ | ಮಾರ | ಹರಿಃ |
| ಮಂತ್ರಗಳ ತತ್ವಾರ್ಥ | ಸೃಷ್ಟಿ | | | ವ್ಯಾಪಾರ | | | | | | | | | ಮೋಕ್ಷಕ್ಕೆ ಹತ್ತುವುದು (ಲಯ) | | | | | | | | | | | ಪರಬ್ರಹ್ಮ |
| | ಅವರೋಹಣ | | | | | | | | | | | | ಆರೋಹಣ | | | | | | | | | | | |
| ಶ್ರೀ ಗಾಯತ್ರೀ ೨೪ ಅಕ್ಷರಗಳ ತತ್ವದಲ್ಲಿರುವ ಶ್ರೀಮದ್ರಾಮಾಯಣದ ಅಂತರಾರ್ಥಗಳಿಗೂ ಸಹ ಸಮನ್ವಯ. | ಬಾಲಕಾಂಡದ ತತ್ವಗಳು | | | ಅಯೋಧ್ಯಾಕಾಂಡದ ತತ್ವಗಳು | | | ಅರಣ್ಯಕಾಂಡದ ತತ್ವಗಳು | | | ಕಿಷ್ಕಿಂಧಾಕಾಂಡದ ತತ್ವಗಳು | | ಸುಂದರಕಾಂಡದ ತತ್ವಗಳು | | ಯುದ್ಧಕಾಂಡದ ತತ್ವಗಳು | | | | | | | | ಉತ್ತರಕಾಂಡದ ತತ್ವಗಳು | | ಮಹಾವಿಷ್ಣು |

೨೪ ನೆಯ ಮನೆಯಲ್ಲಿರುವವುಗಳೆಲ್ಲಾ ಪರಬ್ರಹ್ಮಪ್ರತಿಪಾದಕವಾಗಿವೆ.

ತೇಜೋರೂಪಿನವನೆಂದು ಅರ್ಥ. ಅವಿದ್ಯಾಕಾರ್ಯಪ್ರಕಾಶಕನಾಗಿಯೂ ಅವಿದ್ಯಾ ಕಾರ್ಯವನ್ನು ನಾಶಪಡಿಸಿಕೊಂಡು ಸ್ವಸ್ವರೂಪವಾದ ಪರಬ್ರಹ್ಮತ್ವವನ್ನು ಪಡೆ ಯುವವನಾಗಿಯೂ ಇರುವವನೇ ಜೀವಚೈತನ್ಯನು. ಅಂದರೆ ಅಜ್ಞಾನಸ್ವರೂಪ ವಾದ ಪ್ರಪಂಚವ್ಯಾಪಾರದಲ್ಲಿ ಮುಳುಗುವಿಕೆ ಮತ್ತು ಅಜ್ಞಾನಬಂಧನದಿಂದ ಹಿಂದಿರುಗಿ ನಿತ್ಯವಾದ ಆತ್ಮನನ್ನು ಹೊಂದಲು ಉಪಕ್ರಮವಾಗುವಿಕೆಗಳೆರಡೂ ಭರ್ಗಃ ಪದದಲ್ಲಿರುವುದು. ಇದಕ್ಕೆ ಅನುಸಾರವಾಗಿ ಶ್ರೀಲಲಿತಾಪಂಚದಶಾಕ್ಷರೀ ಮಂತ್ರದಲ್ಲಿನ ಹ, ಲ, ಎಂಬ ಎರಡು ಅಕ್ಷರಗಳ ಮತ್ತು ಹಂಸಃ, ಶಕ್ರಃ, ಎಂಬ ವಿವರಣೆಗಳ ತತ್ವಾರ್ಥಗಳೂ, ಶುದ್ಧಧೈವತ ಚತುಶ್ರುತಿಧೈವತ ಶುದ್ಧನಿಷಾದ ಸ್ವರಗಳ ತತ್ವಾರ್ಥಗಳೂ ಇರುತ್ತವೆ. ಅಲ್ಲದೆ ರಾವಣನಿಂದ ಸೀತಾಪಹರಣ ವಾಗುವ ಮತ್ತು ಸೀತಾನ್ವೇಷಣೆಗಾಗಿ ಶ್ರೀರಾಮನು ಹೊರಟು ಸುಗ್ರೀವನ ಸಖ್ಯದ ವರೆಗಿರುವ ಕಥೆಯ ಅಂತರಾರ್ಥಗಳು ಬಹು ಮುದ್ದಾಗಿ ಮೇಲಿನ ತತ್ವಗಳಿಗೆ ಅನ್ವಯವಾಗುವುವು. ಮುಖ್ಯವಾಗಿ ಜೀವಚೈತನ್ಯನು ಅಜ್ಞಾನಪ್ರಕಾಶಕನಾಗಿ ವಿಷಯವ್ಯಾಪಾರಗಳಲ್ಲಿ ಮುಳುಗುತ್ತಾನೆ. ಅನಿತ್ಯವಾದ ವಿಷಯವ್ಯಾಪಾರದಿಂದ ಹಿಂದಿರುಗಲು ವಿಷಯಾದಿಗಳು ಅನಿತ್ಯವೆಂದು ತಿಳಿದು ನಿತ್ಯವಾದ ಪರಮಾತ್ಮನ ದಾರಿಗೆ ತಿರುಗುವಿಕೆಯೇ ಭರ್ಗಃ ಮನೆಯಲ್ಲಿರುವ ಮಂತ್ರಾಕ್ಷರಗಳ ತತ್ವವಾಗಿದೆ.

**ದೇವಸ್ಯ ||** ಭರ್ಗಃ ಎಂಬುದರ ಅನಂತರ ದೇವಸ್ಯ ಎಂಬ ಪದವು ಶ್ರೀಗಾಯತ್ರೀ ಮಂತ್ರದಲ್ಲಿರುವುದು. ದೇವತೆಗಳೊಡನೆ ಕ್ರೀಡಾದಿಗುಣ ಗಳಿಂದೊಡಗೂಡಿ ಪ್ರಕಾಶಮಾನನು ಎಂಬುದೇ ದೇವಸ್ಯ ಎಂಬ ಪದಕ್ಕೆ ಅರ್ಥ. ಹಿಂದೆ ಭರ್ಗಃ ಪದದಲ್ಲಿ ಅನಿತ್ಯವಾದ ವಿಷಯವ್ಯಾಪಾರದಿಂದ ಹಿಂದಿರುಗಿ ನಿತ್ಯ ವಾದ ಆತ್ಮನನ್ನು ಹೊಂದುವ ದಾರಿಯಲ್ಲಿ ಪ್ರವೇಶಮಾಡುವ ಜೀವನ ಸೋಪಾನ ವೆಂದು ತಿಳಿಸಿತಷ್ಟೆ? ಹೀಗೆ ಆತ್ಮವಿಚಾರದಲ್ಲಿ ಪ್ರವೇಶಮಾಡಿದ ಸಾಧನಚತುಷ್ಟಯ ಸಂಪನ್ನನಾದ ಜೀವನು ವೇದಾಂತ ಶ್ರವಣ ಮನನ ಆತ್ಮಚಿಂತನೆಗಳಲ್ಲಿ ಪರಿಪಕ್ವ ವುಳ್ಳವನಾಗಿ ನಿದಿಧ್ಯಾಸವೆಂದರೆ ಆಸನ ಪ್ರಾಣಾಯಾಮಗಳ ಕಾರ್ಯಗಳಲ್ಲಿ ಪ್ರವೇಶಿಸ ಬೇಕು. ಪ್ರಾಣಾಯಾಮಕಾರ್ಯದ ಮಹತ್ತ್ವೇ ದೇವಸ್ಯ ಪದದ ತತ್ವಾರ್ಥ ವಾಗಿರುವುದು. ಇದಕ್ಕನುಸಾರವಾಗಿ ಸ್ವರಗಳ, ಶ್ರೀಲಲಿತಾಮಂತ್ರದ ಅಕ್ಷರಗಳ ತತ್ವಗಳೂ ಇವೆ ಮತ್ತು ಕಿಷ್ಕಿಂಧಾ, ಸುಂದರ ಕಾಂಡಗಳ ಅಂತರಾರ್ಥವೂ ಅನ್ವಯವಾಗುವುದು.

ದೇವಸ್ಯ ಎಂಬುದಕ್ಕೆ ದೇವತೆಗಳೊಡನೆ ಕ್ರೀಡಾದಿಗುಣಗಳಿಂದೊಡಗೂಡಿ ಪ್ರಕಾಶಮಾನನೆಂದರೆ-ಪ್ರಾಣಾಯಾಮದಲ್ಲಿ ದೇವತೆಗಳ ಅಂಶವಾದ ಪಂಚಪ್ರಾಣ ಮತ್ತು ಶ್ವಾಸೋಚ್ಛ್ವಾಸಗಳೊಡನೆ ಮುಮುಕ್ಷುವು ಪ್ರಾಣಾಯಾಮದ ಕಾರ್ಯರೂಪ ವಾದ ಕ್ರೀಡಾದಿಗಳಿಂದ ಇರುತ್ತಾನೆ. ಪ್ರಾಣಾಯಾಮದಿಂದ ಪರಾಶಕ್ತಿಯಾದ

ಕುಂಡಲಿಯನ್ನು ಉತ್ಥಾಪನೆಮಾಡಿಸಿ ಬ್ರಹ್ಮರಂಧ್ರದ ಬಾಗಿಲನ್ನು ತೆಗೆಸಿ ಮೋಕ್ಷವನ್ನು ಹೊಂದುವ ದೈವೀಸಂಪತ್ತೆಂದರೆ ಶುದ್ಧಸತ್ವಗುಣದ ಪ್ರಕಾಶವನ್ನು ಹೊಂದುತ್ತಾನೆ. ಇದಕ್ಕನುಸಾರವಾಗಿಯೇ ಶ್ರೀರಾಮನು ದೇವತೆಗಳ ಅವತಾರವಾದ ಸುಗ್ರೀವ ಹನುಮಂತರೊಡನೆ ಸ್ನೇಹಬೆಳೆಸಿದ ಹನುಮಂತನು ಲಂಕೆಗೆ ಹೋಗಿ ಕೆಲವು ರಾಕ್ಷಸರನ್ನು ನಿಗ್ರಹಿಸಿ ಸೀತಾದೇವಿಯನ್ನು ಸಂದರ್ಶನಮಾಡಿ ಮಹತ್ಕಾರ್ಯ ಮಾಡಿದ ಅಂತರಾರ್ಥಗಳೆಲ್ಲಾ ಪ್ರಾಣಾಯಾಮದ ಮಹಿಮೆಯೇ ಆಗಿರುವುದು. ಶ್ರೀ ಸೀತಾದೇವಿಯ ತತ್ವಕ್ಕನುಸಾರವಾಗಿ ಶ್ರೀಲಲಿತಾಮಂತ್ರದ ಸ ಅಕ್ಷರ ಮತ್ತು ಪರಾ (ಅಂದರೆ ಪರಾಶಕ್ತಿ) ಎಂಬುದು ಇರುವುದಾಗಿದೆ. ಅಲ್ಲದೆ ನಿಷಾದ ಸ್ವರದ ತತ್ವದಲ್ಲಿಯೂ ಶ್ರೀ ಚಾಮುಂಡೇಶ್ವರೀ ವಿಚಾರವೇ ಬರುವುದು. ಪ್ರಾಣಾಯಾಮದಲ್ಲೂ ಪರಾಶಕ್ತಿಯಾದ ಶ್ರೀಕುಂಡಲಿನೀಶಕ್ತಿಯ ವಿಚಾರವೇ ಬರುವುದು. ಆದುದರಿಂದ ತತ್ತ್ವಾರ್ಥಗಳು ಒಂದಕ್ಕೊಂದು ಸಮನ್ವಯವಾಗಿಯೇ ಇರುವುವು.

ಅಲ್ಲದೆ ಶ್ರೀಲಲಿತಾಮಂತ್ರದ ವಿವರಣೆಯಲ್ಲಿ ಹರಿಃ ಪದವಿದೆ. ಹರಿಃ ಎಂದರೆ ವಾಯು ಮತ್ತು ಕೋತಿಗಳೆಂದೂ ಅರ್ಥವಾಗುವುದು. ಆಂಜನೇಯನು ವಾಯುಪುತ್ರನು ಮತ್ತು ಕೋತಿಯ ಜಾತಿಯಾಗಿರುವುದರಿಂದ ಹರಿಃ ಎನ್ನುವುದು ಹನುಮಂತನಿಗೂ ಅನ್ವಯವಾಗುವುದು. ಹನುಮಂತನು ಮಾಡಿದ ಕಾರ್ಯಗಳೆಲ್ಲಾ ಶಕ್ತಿಶಕ್ತಗಳೆರಡೂ ಸೇರುವ ತತ್ವವಾದ ಶ್ರೀ ಸೀತಾದೇವಿಯನ್ನು ಶ್ರೀರಾಮನೊಡನೆ ಸೇರಿಸುವುದಕ್ಕೇ ಆಗಿರುವುದರಿಂದ ಶಕ್ತಿ (ರ) ಶಕ್ತ (ಹ)ಗಳೆರಡೂ ಸೇರುವ ಹರಿಃ ಪದವು ಶ್ರೀಲಲಿತಾಮಂತ್ರದ ವಿವರಣೆಯಲ್ಲಿದೆ. ಶ್ರೀಲಲಿತಾಮಂತ್ರದಲ್ಲಿ ಮಾರ ಎಂಬ ವಿವರಣೆಯ ಪದವಿರುವುದು. ಇದರ ತತ್ವಕ್ಕನುಸಾರವಾಗಿ ಹನುಮಂತನು ಅನೇಕ ರಾಕ್ಷಸರನ್ನು ಮಾರಣವೆಂದರೆ ನಿಗ್ರಹಮಾಡಿರುವನು. ನಿಷಾದಸ್ವರದ ತತ್ವದಲ್ಲಿರುವ ಶ್ರೀ ಚಾಮುಂಡೇಶ್ವರಿಯು ರಾಕ್ಷಸರನ್ನು ನಿಗ್ರಹಮಾಡಿ ದೇವತೆಗಳನ್ನು ಕಾಪಾಡಿದ ವಿಚಾರಗಳೂ ನಿಷಾದಸ್ವರದ ತತ್ವದಲ್ಲಿ ಬರುವುವು. ಮುಮುಕ್ಷುವಿನಲ್ಲೂ ಪ್ರಾಣಾಯಾಮದಿಂದ ಅನೇಕ ರಾಕ್ಷಸಸ್ವಭಾವಗಳು ನಶಿಸಿ ದೇವತ್ವವುಂಟಾಗುವುದು. ಆದುದರಿಂದ ಎಲ್ಲವೂ ಏಕಾರ್ಥವಾದುವುಗಳಾಗಿವೆ.

ಅಲ್ಲದೆ ಪ್ರಾಣಾಯಾಮವು ಬಹಿರ್ವ್ಯಾಪಾರಕ್ಕೆ ಸೇರಿದುದಲ್ಲದೆ ಅಂತರ್ಮುಖಕ್ಕೆ ಸೇರಿದುದಲ್ಲ. ಧ್ಯಾನದಿಂದಲೇ ಅಂತರ್ಮುಖಕ್ಕೆ ಪ್ರಾರಂಭ. ಪ್ರಾಣಾಯಾಮವೇ ಬಹಿರ್ಮುಖಕ್ಕೆ ಕೊನೆಯ ಸೋಪಾನವಾಗಿದೆ. ಅಂದರೆ ದೇವತ್ವವೇ ಅಂತ್ಯವಾಗುಳ್ಳ ಜಗತ್ತಿನ ವಿರಾಟ್‌ಸ್ಥಿತಿಯ ತತ್ವವು ಮುಮುಕ್ಷುವಿನಲ್ಲಿ ವಿಶ್ವವೆನಿಸಿಕೊಂಡಿರುವುದು. ವಿಶ್ವವೆಂದರೆ ಸೃಷ್ಟಿಯಾದುದು ಸ್ಥಿತಿಯ ಸಂಪೂರ್ಣತೆಯಲ್ಲಿರುವಿಕೆ. ಸ್ಥಿತಿಯ ಸಂಪೂರ್ಣತೆಯೆಂದರೆ ವಿರಾಟ್ಸ್ವರೂಪವು ಕೂಡ ಪರಬ್ರಹ್ಮಸ್ವರೂಪವೆಂಬುದನ್ನು ಪ್ರತಿಪಾದಿಸುವುದಕ್ಕೋಸ್ಕರಲೇ ಪರಬ್ರಹ್ಮಾತ್ಮಕವಾದ ಷಡ್ಜ(ಸ)ಸ್ವರವೂ ಶ್ರೀಲಲಿತಾ

ಮಂತ್ರದ ಲ, ಹ್ರೀಂ ಅಕ್ಷರಗಳೂ ಇದರ ವಿವರಣೆಯಾದ ಹರಿಃ ಪದವೂ ದೇವಸ್ಯ ಪದದ ಅಂತ್ಯದಲ್ಲಿರುವುದಾಗಿದೆ.

ಧೀಮಹಿ || ಧೀಮಹಿ ಎಂದರೆ ಧ್ಯಾನಮಾಡುತ್ತೇನೆಂದು ಅರ್ಥ. ಪ್ರಥಮ ೧೨ ಮನೆಗಳಲ್ಲೂ ಶ್ರೀ ಗಾಯತ್ರೀ ೧೨ ಅಕ್ಷರಗಳು, ಇವಕ್ಕೆ ಅನುಸಾರವಾದ ಸಪ್ತಸ್ವರಗಳು, ಶ್ರೀಲಲಿತಾಮಂತ್ರ ಮತ್ತು ಸುಂದರಕಾಂಡ ಪೂರ್ಣದವರೆಗಿನ ರಾಮಾಯಣದ ಅಂತರಾರ್ಥಗಳು ಕ್ರಮವಾಗಿ ಏಕತತ್ವಾರ್ಥದೊಡನೆ ಬಂದಿವೆ. ೧೩ ನೇ ಮನೆಯಿಂದ ೨೪ ನೇ ಮನೆಯವರಿಗೆ ಇರುವ ಮುಂದಿನ ಶ್ರೀಗಾಯತ್ರೀ ಮಂತ್ರದ ಅಕ್ಷರಗಳ ತತ್ವಗಳಿಗನುಸಾರವಾಗಿ ಪುನಃ ಸಪ್ತಸ್ವರಗಳು ಶ್ರೀಲಲಿತಾ ಮಂತ್ರವು ಕ್ರಮವಾಗಿ ಮೋಕ್ಷಕ್ರಮವನ್ನನುಸರಿಸಿ ಬರುವುವು. ಅಂದರೆ ಪ್ರಥಮ ೧೨ ಮನೆಗಳ ತತ್ವಗಳು ಸೃಷ್ಟಿಯಾಗಿ ವ್ಯಾಪಾರದ ಪೂರ್ಣತೆಯಾದ ವಿಶ್ವದ ತತ್ವ ವನ್ನು ಸೂಚಿಸುವುದಷ್ಟೆ! ಲಯಕಾಲದಲ್ಲಿ ವೃಕ್ಷದ ತತ್ವಗಳೆಲ್ಲಾ ಬೀಜರೂಪಕ್ಕೆ ಬರುವಂತೆ ವ್ಯಾಪಾರ ಅನಂತರ ಸೃಷ್ಟಿಗಳಲ್ಲಿರುವ ತತ್ವಗಳೆಲ್ಲಾ ಉಪಸಂಹಾರ ವಾಗುವುದು. ಈ ತತ್ವದ ವಿವರಣೆಗೋಸ್ಕರ ಮುಂದಿನ ೧೨ ಮನೆಗಳಿವೆ ಮತ್ತು ಶ್ರೀಲಲಿತಾಪಂಚದಶಾಕ್ಷರೀಮಂತ್ರವೂ, ಸಪ್ತಸ್ವರಗಳೂ ಉಪಸಂಹಾರದ ವಿವ ರಣೆಯು ತತ್ವಾರ್ಥವಾಗಿ ಪುನಃ ಬಂದಿರುವುವು. ಅಂದರೆ ಬಹಿರ್ವ್ಯಾಪಾರದಲ್ಲಿದ್ದ ಮುಮುಕ್ಷುವು ವ್ಯಾಪಾರದ ಬಂಧನವನ್ನೂ ಅನಂತರ ಸೃಷ್ಟಿಯ ಬಂಧನವನ್ನೂ ಅಂತರ್ಮುಖದ ದಾರಿಯಾದ ಧ್ಯಾನಸಮಾಧಿಗಳಿಂದ ಉಪಸಂಹಾರ ಮಾಡಿ ಕೊಂಡು ಮೋಕ್ಷಸಾಮ್ರಾಜ್ಯವನ್ನು ಹೊಂದುವ ವಿವರಣೆಯೇ ಮುಂದಿನ ೧೨ ಮನೆಗಳ ತತ್ವವಾಗಿರುವುವು. ಆದುದರಿಂದಲೇ ದೇವಸ್ಯಪದವಾದ ಅನಂತರ ಧೀಮಹಿಪದವು ಶ್ರೀ ಗಾಯತ್ರಿಯಲ್ಲಿರುವುದು.

ಮುಮುಕ್ಷುವು ಯಾರನ್ನು ಧ್ಯಾನಮಾಡುತ್ತಾನೆಂದರೆ— ಅಂತರ್ಮುಖದಲ್ಲಿ ಗೋಚರವಾಗುವ ತೇಜಸ್ಸಿನ ಅಂತರ್ಗತವಾಗಿರುವ ಶಕ್ತಿಯುಕ್ತನಾಗಿರುವ ಪರಮೇ ಶ್ವರನನ್ನೇ ಧ್ಯಾನಮಾಡುತ್ತಾನೆ. ಈ ತತ್ವಕ್ಕನುಸಾರವಾಗಿ ಈಶ್ವರಪ್ರತಿಪಾದಕ ವಾದ ಶ್ರೀಲಲಿತಾಮಂತ್ರದ ಕ, ಏ, ಈ, ಅಕ್ಷರಗಳ ವಿವರಣೆಯಾದ ಶಿವಃ, ಶಕ್ತಿಃ, ಕಾಮಃ, ಎಂಬುವುಗಳೂ ಋಷಭ ಮತ್ತು ಗಾಂಧಾರ ಸ್ವರಗಳೂ ಧೀಮಹಿ ಪದವಿರುವ ಮನೆಗಳಲ್ಲಿರುವುವು. ಅಲ್ಲದೆ ಶ್ರೀರಾಮನು ವಾನರರೊಡನೆ ಸಮುದ್ರ ತೀರಕ್ಕೆ ಬಂದು ಸೇತುಬಂಧನಮಾಡಿ ಲಂಕಾಪಟ್ಟಣವನ್ನು ಸೇರಿದ ಅನಂತರ ಯುದ್ಧಕ್ಕೆ ಪ್ರಾರಂಭವಾಗುವವರೆಗಿನ ಕಥೆಯ ಅಂತರಾರ್ಥವು ಕೂಡ ಪ್ರತ್ಯಾಹಾರ ಮಾಡಿ ಧ್ಯಾನಮಾಡುವ ತತ್ವಪ್ರತಿಪಾದಕವಾಗಿಯೇ ಇರುವುದು. ಆದುದರಿಂದ ಎಲ್ಲವೂ ಏಕತತ್ವಾರ್ಥವಾದವುಗಳೇ ಆಗಿವೆ. ಧೀಮಹಿಪದದಲ್ಲಿ ಶ್ರೀಲಲಿತಾಮಂತ್ರ

ದಲ್ಲಿನ ಮನ್ಮಥಶಕ್ತಿಯಾದ ಕಾಮಃ ಎಂಬುವುದು ಇರುವ ತತ್ವವೇನೆಂದರೆ—ಧ್ಯಾನ ಮಾಡುವ ಮುಮುಕ್ಷುವು ದೇಹವು ತಾನಲ್ಲವೆಂದೂ ಧ್ಯಾನಕಾಲದಲ್ಲಿ ಗೋಚರ ವಾಗುವ ತೇಜಸ್ಸೇ ತಾನೆಂದೂ ಪರಾಭಕ್ತಿಯೆನಿಸುವ ಸೋಹಂ ಕಾಮನೆಯಿಂದ ಧ್ಯಾನಮಾಡಬೇಕೆಂಬ ತತ್ವವನ್ನು ಸೂಚಿಸುತ್ತದೆ. ಇದರ ವಿವರಣೆಯು ಬಹು ಸ್ಪಷ್ಟವಾಗಿ ರಾಮಾಯಣದ ಅಂತರಾರ್ಥದಲ್ಲಿ ಬರುವುದು. ಮುಖ್ಯವಾಗಿ ಸೋಹಂ ಕಾಮನೆಯಿಂದ ಪಾರ್ವತೀಪರಮೇಶ್ವರ (ಶಕ್ತಿಯುಕ್ತನಾದ ಶಕ್ತ) ನನ್ನು ಧ್ಯಾನ ಮಾಡುವಿಕೆಯೇ ಧೀಮಹಿ ಪದದ, ಶ್ರೀಲಲಿತಾಮಂತ್ರ ಮತ್ತು ಋಷಭ ಗಾಂಧಾರ ಸ್ವರಗಳ ತತ್ವವಾಗಿವೆ.

**ಧಿಯೋಯೋನಃ ||** ಧಿಯೋಯೋನಃ ಎಂಬುದರಲ್ಲಿ ಧಿಯಃ, ಯಃ, ನಃ ಎಂಬ ಮೂರು ಪದಗಳಿವೆ. ಧಿಯಃ ಬುದ್ಧಿಗಳನ್ನು, ಯಃ-ಯಾರು, ನಃ-ನಮ್ಮಗಳ ಎಂದರ್ಥವಾಗಿ ನಮ್ಮ ಬುದ್ಧಿಯನ್ನು ಯಾರು ಪ್ರೇರಿಸುವುರೋ ಅಂತಹವರ ಸ್ಥಾನವಾಗಿದೆ. ಅಂದರೆ ನಾನು, ನನ್ನಬುದ್ಧಿಯನ್ನು ಪ್ರೇರಿಸುವವರು ಎಂಬ ಪ್ರತ್ಯೇಕವಾದ ವಸ್ತುಗಳಿರುವುವು. ಇವುಗಳಲ್ಲಿ ಧೀ ಎಂದರೆ ಬುದ್ಧಿ. ಇದು ಜಡಪ್ರಕೃತಿಗೆ ಸೇರಿದ್ದು. ಇಂತಹ ಬುದ್ಧಿಯನ್ನು ಪ್ರಕಾಶಪಡಿಸಿಕೊಂಡಿರುವವನು ಪ್ರತಿಫಲಿತಚೈತನ್ಯನಾದ ಜೀವಚೈತನ್ಯನು. ಅಲ್ಲದೆ ಬುದ್ಧಿಯ ವಿಷಯವ್ಯಾಪಾರ ಗಳಿಗೆ ಕಾರಣವಾದವುಗಳು ಒಂದನೆಯದು ನಮ್ಮಲ್ಲಿರುವ ಸೂರ್ಯ, ಎರಡನೆಯದು ಚಂದ್ರ, ಮೂರನೆಯದು ಅವಿದ್ಯಾ. ಇವುಗಳಲ್ಲಿ ಅವಿದ್ಯೆಯು ಪ್ರಥಮದಲ್ಲಿ ನಶಿಸಬೇಕು. ಅನಂತರ ಚಂದ್ರಸೂರ್ಯರು ಒಂದಾಗಿ ಶುದ್ಧವಾದ ' ನಾನು ' ಎಂಬ ಜ್ಞಾನಮಾತ್ರ ಉಳಿಕೆಯಾಗುವುದು. ತದನಂತರ ಶುದ್ಧವಾದ 'ನಾನು' ಎಂಬುದು ಕೂಡ ಅಖಂಡಾಕಾರವಾಗಿ ಪರಬ್ರಹ್ಮನಲ್ಲಿ ಲಯವಾದರೆ ಜೀವಚೈತನ್ಯನು ತನ್ನ ಸ್ವಸ್ವರೂಪವಾದ ಪರಬ್ರಹ್ಮನಾಗುತ್ತಾನೆ.

ಬುದ್ಧಿ, ಬುದ್ಧಿಯನ್ನು ಪ್ರಕಾಶಪಡಿಸಿಕೊಂಡಿರುವ ಜೀವಚೈತನ್ಯ ಮತ್ತು ಅವಿದ್ಯಾಶಕ್ತಿಗಳು ಧಿಯೋಯೋನಃ ಎಂಬುದರ ' ಧಿ ' ಅಕ್ಷರದ ಮನೆಯ ತತ್ವ ದಲ್ಲಿವೆ. ಇದಕ್ಕನುಸಾರವಾಗಿ ಶ್ರೀಲಲಿತಾಮಂತ್ರದಲ್ಲಿ ಲ, ಹ್ರೀಂ ಅಕ್ಷರ ಇದರ ವಿವರಣೆಯಾದ ಕ್ಷಿತಿಃ ಎಂಬುದು ಇರುವುದು. ಅಲ್ಲದೆ ಈ ಮನೆಯಲ್ಲಿ ಈ ತತ್ವ ಕ್ಕನುಸಾರವಾದ ಅಂತರಗಾಂಧಾರಸ್ವರವೂ ಇರುವುದು. ಅನಂತರ ವಿಷಯ ವ್ಯಾಪಾರಕ್ಕೆ ಕಾರಣರಾದ ಸೂರ್ಯ ಮತ್ತು ಚಂದ್ರರು ಶ್ರೀಲಲಿತಾಮಂತ್ರದ ಹ ಮತ್ತು ಸ ಅಕ್ಷರದ ವಿವರಣೆಯಾಗಿ ಧಿಯೋಯೋನಃ ಎಂಬುದರಲ್ಲಿ ಯೋಯೋ ಎಂಬ ಅಕ್ಷರಗಳ ತತ್ವವಾಗಿರುತ್ತಾರೆ. ಸೂರ್ಯ ಚಂದ್ರರ ತತ್ವಕ್ಕನುಸಾರ ವಾಗಿಯೇ ಮಧ್ಯಮ ಪ್ರತಿಮಧ್ಯಮ ಸ್ವರಗಳು ಯೋಯೋ ಅಕ್ಷರಗಳ ಸ್ಥಾನ

ಗಳಲ್ಲಿರುತ್ತವೆ. ಚಂದ್ರನು ಸೂರ್ಯನೊಡನೆ ಸೇರುವುದರ ಮೂಲಕ ಅಂದರೆ ಧ್ಯಾನಾಭ್ಯಾಸಮಾಡುತ್ತಿದ್ದ ಮುಮುಕ್ಷುವು ಧ್ಯಾನದ ಪರಿಪಕ್ವಾವಸ್ಥೆಗೆ ಬಂದಾಗ ಅಂತರ್ಮುಖದಲ್ಲಿ ಸೂರ್ಯರೂಪವಾದ ತೇಜಸ್ಸು ಚಂದ್ರರೂಪವಾದ ಓಂಕಾರ ನಾದಗಳೆರಡೂ ಏಕೀಭವಿಸಿಕೊಂಡು ತೇಜೋನಾದವಿದ್ಯಾ ಸೋಪಾನವಾಗುವುದು. ಈ ತೇಜೋನಾದವಿದ್ಯಾ ಸೋಪಾನವಾಗುವುದರ ಮೂಲಕ ಧಿ ಅಕ್ಷರದ ತತ್ವ ದಲ್ಲಿರುವ ಅವಿದ್ಯಾಶಕ್ತಿಗಳೆಲ್ಲಾ ನಶಿಸುವುವು. ಈ ಮೇಲಿನ ತತ್ವಸಮರ್ಥನೆಗೆ ಅನುಸಾರವಾಗಿ ರಾಮಾಯಣದ ಯುದ್ಧಕಾಂಡದಲ್ಲಿ ಇಂದ್ರಜಿತು ಕುಂಭಕರ್ಣ ಮುಂತಾದ ರಾಕ್ಷಸರ ನಿಗ್ರಹ, ಶ್ರೀರಾಮಚಂದ್ರನಿಗೆ ಅಗಸ್ತ್ಯರಿಂದ ಆದಿತ್ಯ ಹೃದಯದ ಉಪದೇಶ, ಶ್ರೀರಾಮನಿಗೆ ಸೂರ್ಯನು ಪ್ರತ್ಯಕ್ಷವಾಗುವಿಕೆ ಮುಂತಾದ ಕಥೆಯ ಅಂತರಾರ್ಥವು ಈ ತೇಜೋನಾದವಿದ್ಯೆಯ ಸೋಪಾನವಾಗಿ ಬಹು ಮುದ್ದಾಗಿ ಅನ್ವಯವಾಗುವುದು.

ಧಿಯೋಯೋನಃ ಎಂಬುದರಲ್ಲಿನ ನಃ ಎಂಬಕ್ಷರದ ಮನೆಯಲ್ಲಿ ವಿಸ್ತಾರಾರ್ಥ ವುಳ್ಳ ಪಂಚಮಸ್ವರವೂ, ಶ್ರೀಲಲಿತಾಮಂತ್ರದ ಕ ಅಕ್ಷರ, ಇದರ ವಿವರಣೆಯಾದ ಸ್ಮರಃ ಎಂಬುದೂ ಇರುವುದು. ನಃ ಎಂದರೆ ನಮ್ಮಗಳ ಎಂದರ್ಥ. ಮತ್ತೊಂದಿಲ್ಲದೆ ಅಂದರೆ ನೋಡುವಪದಾರ್ಥ ನೋಡುವಿಕೆಗಳೆರಡೂ ಇಲ್ಲದೆ ನೋಡುವವನಾದ ನಾನು ಎಂಬ ಶುದ್ಧವಾದ ಜ್ಞಾನಮಾತ್ರ ಉಳಿಕೆಯಾಗುವ ಸೋಪಾನದ ತತ್ವಾರ್ಥ ಪ್ರತಿಪಾದಕವಾಗಿಯೇ 'ನಃ' ಎಂಬ ಅಕ್ಷರವು ಇರುವುದಾಗಿದೆ. ಅಂದರೆ ಸಮಾಧಿಯ ಅಭ್ಯಾಸಕಾಲದಲ್ಲಿ ಅವಿದ್ಯಾನಿಗ್ರಹವಾಗಿ ಸೂರ್ಯಚಂದ್ರರು ಏಕೀಭವಿಸಿಕೊಂಡು ನಾನು ಎಂಬ ಶುದ್ಧಜ್ಞಾನದಲ್ಲಿ ಅಡಗಿ 'ನಾನು' ಎಂಬ ಶುದ್ಧಜ್ಞಾನ ಮಾತ್ರ ಉಳಿಮೆಯಾಗುವ ಸೋಪಾನವೇ ನಃ ತತ್ವವಾಗಿರುವುದು. ಹೇಗೆಂದರೆ ಹಂಸಃ ಎನ್ನುವುದು ಮಾರ್ಪಟ್ಟು ಸೋಹಂ ಆಗಿ ಅನಂತರ ಅಹಂ ನಿಲ್ಲುವಿಕೆಯ ತತ್ವ ವಾಗುವುದು. ಪ್ರಪಂಚವ್ಯಾಪಾರಕ್ಕೆ ಸೂರ್ಯಚಂದ್ರರೇ ಕಾರಣ. ಇದರಂತೆ ನಮ್ಮಲ್ಲೂ ಹ ಅಕ್ಷರದ ತತ್ವದ ಸೂರ್ಯನೂ ಸ ಅಕ್ಷರದ ತತ್ವದ ಚಂದ್ರನೂ ಅನುಸ್ವಾರದ ತತ್ವದ ಅವಿದ್ಯೆಯೂ ಇರುವುದು. ಸ ಅಕ್ಷರವು ಹಕಾರಕ್ಕೂ ಸಕಾರಕ್ಕೂ ಮಧ್ಯೆ ಇರುವ ಬಿಂದುವಿನ ಸಂಪರ್ಕವನ್ನು ಬಿಟ್ಟು ಹ ಅಕ್ಷರದ ಹಿಂದಕ್ಕೆ ಬಂದು ಹ ಅಕ್ಷರದೊಡನೆ (ಅಂದರೆ ಚಂದ್ರನು ಸೂರ್ಯನೊಡನೆ ಕಲೆಯುವಿಕೆ) ಸೇರಿದರೆ ಹಂಸಃ ಹೋಗಿ ಸೋಹಂ ಆಗುವುದು. ಅನಂತರ ಸ ಅಕ್ಷರವು ಹ ಅಕ್ಷರದೊಡನೆ ಅಭೇದದಿಂದ ಕಲೆತುಹೋದರೆ (ಚಂದ್ರನು ಸೂರ್ಯನಲ್ಲಿ ಲಯವಾದರೆ) ಅಹಂ ಒಂದೇ ಉಳಿಮೆಯಾಗುವುದು. ಅಂದರೆ ಸಮಾಧಿಯನ್ನು ಅಭ್ಯಾಸಮಾಡುತ್ತಿದ್ದ ಅಧಿಕಾರಿಯಲ್ಲಿ ನಾದವು ತೇಜಸ್ಸಿನಲ್ಲಿ ಅಡಗಿ ತೇಜಸ್ಸು ಶುದ್ಧವಾದ ಅಹಂ ಜ್ಞಾನಸ್ವರೂಪವಾಗುವುದು. ಈ ತತ್ವಾರ್ಥಕ್ಕನುಸಾರವಾಗಿ

ರಾಮಾಯಣದಲ್ಲೂ ಶ್ರೀರಾಮನು ರಾವಣನ ನಿಗ್ರಹಕ್ಕೆ ಉಪಯೋಗಿಸಿದ ಬ್ರಹ್ಮಾಸ್ತ್ರವೇ ಸೋಹಂ ಆಗುವಿಕೆಯ ಅಸ್ತ್ರದ ತತ್ವವಾಗಿರುವುದು. ರಾವಣನು ನಿಗ್ರಹವಾಗಿ ಸೀತಾದೇವಿಯು ಶ್ರೀರಾಮನ ಸಮೀಪಕ್ಕೆ ಬರುವ ಆಂತರಾರ್ಥವೇ 'ನಾನು' ಎಂಬ ಶುದ್ಧಜ್ಞಾನಮಾತ್ರ ಇರುವ ಸೋಪಾನವಾಗಿದೆ.

ನಾನು ಎಂಬ ಜ್ಞಾನಮಾತ್ರದ ಸೋಪಾನವು ಸ್ಥಾಯಿಯಾಗಿ ನಿಲ್ಲುವುದಿಲ್ಲ. 'ನಾನು' ಎಂಬ ಜ್ಞಾನವು ಅಖಂಡಾಕಾರವೆಂದರೆ ವಿಸ್ತಾರವಾಗಿ ಸರ್ವವ್ಯಾಪಕವನ್ನು ಹೊಂದುವುದೆಂದರೆ ಪರಬ್ರಹ್ಮರೂಪವಾಗುವುದು. ಈ ತತ್ವಸಮರ್ಥನೆಯನ್ನನುಸರಿಸಿ ನಃ ಇರುವ ಮನೆಯಲ್ಲಿ ವಿಸ್ತಾರವಾಗುವ ಅರ್ಥವುಳ್ಳ ಪಂಚಮಸ್ವರವೂ ಶ್ರೀಲಲಿತಾಮಂತ್ರದ ಕ ಅಕ್ಷರದ ವಿವರಣೆಯಾದ ಮನ್ಮಥಶಕ್ತಿಯೂ ಸ್ಮರಃ ಎಂಬುದೂ ಇರುವುವು. ಪಂಚಮಸ್ವರದ ತತ್ವವೇ 'ನಾನು' ಎಂಬ ಜ್ಞಾನವು ಅಖಂಡಾಕಾರಸ್ವರೂಪವೆಂದರೆ ವಿಸ್ತಾರವಾಗುವಿಕೆಯಾಗಿರುವುದು. ಸ್ಮರಃ ಎನ್ನುವುದರ ತತ್ವವು 'ನಾನು' ಎಂಬ ಶುದ್ಧಜ್ಞಾನವು ಪರಬ್ರಹ್ಮಸ್ವರೂಪವೇ ಹೊರತು ಅನ್ಯಥಾ ಇಲ್ಲವೆಂಬುದನ್ನು ಜ್ಞಾಪಿಸಿಕೊಂಡು ಆ ಪರಬ್ರಹ್ಮದಲ್ಲಿ ಮುಳುಗಲು ಹೋಗುವಿಕೆಯೇ ಸ್ಮರಃ ಎಂಬುದರ ತತ್ವವು. ಈ ತತ್ವಕ್ಕನುಸಾರವಾಗಿಯೇ ರಾಮಾಯಣದಲ್ಲೂ ತನ್ನ ಸಮೀಪಕ್ಕೆ ಬಂದ ಸೀತಾದೇವಿಯನ್ನು ಶ್ರೀರಾಮನು ತಿರಸ್ಕರಿಸುವ ಶ್ರೀಸೀತಾದೇವಿಯು ಅಗ್ನಿಪ್ರವೇಶಮಾಡಲು ಯತ್ನಿಸುವ ವಿಚಾರಗಳ ಅಂತರಾರ್ಥವು ಬಹು ಚೆನ್ನಾಗಿ ಮೇಲಿನ ತತ್ವಗಳಿಗೆ ಅನ್ವಯವಾಗುವುದು.

**ಪ್ರಚೋದಯಾತ್** || ಪ್ರಚೋದಯಾತ್ ಎನ್ನುವುದೇ ಶ್ರೀಗಾಯತ್ರೀ ಮಂತ್ರದ ಕೊನೆಯ ಪದ. ಪ್ರಚೋದಯಾತ್ ಎಂದರೆ ಚೆನ್ನಾಗಿ ಪ್ರೇರಿಸುವುದೆಂದು ಅರ್ಥ. ಇಲ್ಲಿ ಯಾವುದಕ್ಕೆ ಪ್ರೇರಣೆಯೆಂದರೆ ಧಿಯೋಯೋನಃ ಎಂಬುದರ ಅಂತ್ಯದಲ್ಲಿ ವಿವರಿಸಿರುವ 'ನಾನು' ಎಂಬ ಜ್ಞಾನಮಾತ್ರದ ಇರುವಿಕೆಯು ಪರಬ್ರಹ್ಮದಲ್ಲಿ ಅಭೇದದಿಂದ ಸೇರುವಿಕೆ. ಹೀಗೆ ಸೇರುವಿಕೆಯಿಂದುಂಟಾಗುವ ಪ್ರತಿಫಲಿತಚೈತನ್ಯನಾದ ಜೀವಚೈತನ್ಯನಿಗೆ ಯಾವ ಉಪಾಧಿಗಳೂ ಇಲ್ಲದಂತಾಗಿ ಪರಬ್ರಹ್ಮತಾದಾತ್ಮ್ಯನಾಗುವಿಕೆಗಳಿಗೆ ಪ್ರೇರಣೆಯುಂಟಾಗುವುದು. ಈ ತತ್ವಕ್ಕನುಸಾರವಾಗಿ ಶುದ್ಧಧೈವತಸ್ವರವು ಪ್ರಚೋದಯಾತ್ ಪದದ ಪ್ರ ಅಕ್ಷರದ ಮನೆಯಲ್ಲಿರುವುದು. ಧೈವತಸ್ವರದ ತತ್ವವಾದ ಬುದ್ಧಿಯು ತೈಲಧಾರೆಯಂತೆ ಪರಬ್ರಹ್ಮದಲ್ಲಿ ಪ್ರವಹಿಸಿಕ್ಕೊಂಡು ಲಯವನ್ನು ಪಡೆದಿರುವುದರಿಂದ ಬುದ್ಧಿಯಲ್ಲಿರುವ ಪ್ರತಿಫಲಿತಚೈತನ್ಯನಾದ ಜೀವಚೈತನ್ಯನು ಉಪಾಧಿಗಳಿಂದ ಬಿಡುಗಡೆ ಹೊಂದಿದವನಾಗಿ ಪರಬ್ರಹ್ಮತಾದಾತ್ಮ್ಯದಿಂದ ಸಾಕ್ಷಾತ್ಕಾರವನ್ನು ಹೊಂದಿರುವನು. ಈ ಸೋಪಾನವು ಪರಬ್ರಹ್ಮ ಸೋಪಾನವೆನ್ನುವುದಕ್ಕೆ ಸರಿಯಾಗಿ ಶ್ರೀಲಲಿತಾ ಮಂತ್ರದ ಪರಬ್ರಹ್ಮಪ್ರತಿಪಾದಕವಾದ ಹ ಅಕ್ಷರವು ಇದರ ವಿವರಣೆಯಾದ

ಹಂಸಃ ಎಂಬುವುಗಳು ಪ್ರಚೋದಯಾತಿನ ಪ್ರ ಅಕ್ಷರದ ಮನೆಯಲ್ಲಿರುವುವು. ಅಂದರೆ ಜೀವಚೈತನ್ಯನು ತನ್ನ ಸ್ವಸ್ವರೂಪವಾದ ಪರಬ್ರಹ್ಮನಾಗಿರುವ ಸೋಪಾನ ವಾದುದರಿಂದ ಹಂಸಃ ಎನ್ನುವುದು ಈ ಸ್ಥಳದಲ್ಲಿರುವುದು. ಅಲ್ಲದೆ ರಾಮಾಯಣ ದಲ್ಲಿ ಸೀತಾದೇವಿಯು ಅಗ್ನಿಪ್ರವೇಶಮಾಡಿರುವಕಥಾ ಅಂತರಾರ್ಥವಾಗಿ 'ನಾನು' ಎಂಬ ಶುದ್ಧಜ್ಞಾನವು (ಶುದ್ಧಸತ್ವಪ್ರಧಾನ ಮಾಯೆಯು) ಅಗ್ನಿನಾಮಕವಾದ ಸ್ವಯಂಪ್ರಕಾಶವೆನಿಸುವ ಚಿಜ್ಜ್ಯೋತಿಯಲ್ಲಿ ಅಭೇದದಿಂದ ಐಕ್ಯವಾಗಿರುವ ತತ್ವ ವನ್ನೇ ಪ್ರತಿಪಾದಿಸುವುದು.

ಸಮಾಧಿಯನ್ನು ಅಭ್ಯಾಸಮಾಡುತ್ತಿದ್ದ ಅಧಿಕಾರಿಯ ಬುದ್ಧಿವೃತ್ತಿಯು ಏಕಾಕಾರವಾಗಿ ಪರಬ್ರಹ್ಮದಲ್ಲಿ ಪ್ರವಹಿಸುತ್ತಿದೆ. ಶುದ್ಧವಾದ 'ನಾನೆಂಬ' ಜ್ಞಾನವು ಕೂಡ ಪರಬ್ರಹ್ಮದಲ್ಲಿ ಸೇರಿರುವುದು. ಜೀವಚೈತನ್ಯನು ಪರಬ್ರಹ್ಮನ ತಾದಾತ್ಮ್ಯ ನಾಗಿರುವನು. ಇಂತಹ ಸ್ಥಿತಿಗೆ ಜೀವಬ್ರಹ್ಮಸಾಕ್ಷಾತ್ಕಾರವೆಂದೂ ನಿರ್ವಿಕಲ್ಪಸಮಾಧಿ ಯೆಂದೂ ಅದ್ವೈತಸಿದ್ಧಿಯೆಂದೂ ಜೀವನ್ಮುಕ್ತಸ್ಥಿತಿಯೆಂದೂ ಹೆಸರು. ಹೀಗೆ ನಿರ್ವಿಕಲ್ಪಸಮಾಧಿಸ್ಥಿತಿಯಿಂದ ಬಹಿರ್ಮುಖವಾಗಿ ದೇಹಪತನದವರೆಗೆ ಜೀವನ್ಮುಕ್ತ ಅಥವ ಪರಮಹಂಸರೆನಿಸಿಕೊಂಡು ದೇವತಾಸಮಾನರಾದವರಾಗಿ ಇರುತ್ತಾರೆ. ಬ್ರಹ್ಮಸಾಕ್ಷಾತ್ಕಾರವಾದ ಸಮಾಧಿಯಿಂದ ಬಹಿರ್ಮುಖರಾಗಿ ಜೀವನ್ಮುಕ್ತ ಸ್ಥಿತಿಯಲ್ಲಿ ರುವ ತತ್ವಪ್ರತಿಪಾದನೆಯೇ ಪ್ರಚೋದಯಾತ್ ಪದದ ದ್ವಿತೀಯಾಕ್ಷರವಾದ 'ಚೋ' ಅಕ್ಷರದ ತತ್ವವಾಗಿರುವುದು. ಈ ತತ್ವಕ್ಕನುಸಾರವಾಗಿಯೇ ಶ್ರೀಲಲಿತಾ ಮಂತ್ರದ ಲ, ಹ್ರಿಂ ಅಕ್ಷರ ಮತ್ತು ಇದರ ವಿವರಣೆಯಾದ ಶಕ್ರಃ ಎಂಬುದು ಇರುವುದಾಗಿದೆ. ಶಕ್ರಃ ಎಂದರೆ ದೇವೇಂದ್ರನೆಂದು ಅರ್ಥ. ಅಂದರೆ ಜೀವ ನ್ಮುಕ್ತನು ದೇವತಾ ಸಮಾನನಾಗಿರುತ್ತಾನೆಂಬ ತಾತ್ಪರ್ಯ. ಅಲ್ಲದೆ 'ಚೋ' ಅಕ್ಷರದ ಮನೆಯಲ್ಲಿರುವ ಚತುಶ್ರುತಿಧೈವತ ಮತ್ತು ಶುದ್ಧನಿಷಾದಸ್ವರಗಳ ತತ್ವಗಳೂ ಮೇಲಿನ ತತ್ವಗಳಿಗೆ ಅನುಸಾರವಾಗಿಯೇ ಇವೆ. ಅಲ್ಲದೆ ಅಗ್ನಿಪ್ರವೇಶ ಮಾಡಿದ ಸೀತಾದೇವಿಯು ಪುನಃ ಅಗ್ನಿಯಿಂದ ಹೊರಕ್ಕೆ ಬರುವಿಕೆ ಅನಂತರ ಅಯೋಧ್ಯೆಗೆ ಬಂದು ಪಟ್ಟಾಭಿಷಕ್ತನಾಗುವಿಕೆಯ ಅಂತರಾರ್ಥಗಳು ಮೇಲಿನ ತತ್ವಾರ್ಥಗಳನ್ನು ದೃಢೀಕರಿಸುತ್ತವೆ.

ಜೀವನ್ಮುಕ್ತಸ್ಥಿತಿಯಲ್ಲಿದ್ದ ಪುಣ್ಯಾತ್ಮನಿಗೆ ದೇಹಪತನಕಾಲವು ಪ್ರಾಪ್ತವಾದ ಕಾಲದಲ್ಲಿ ಪ್ರಥಮದಲ್ಲಿ 'ನಾನು' ಎಂಬ ಶುದ್ಧಜ್ಞಾನವು (ಶುದ್ಧಸತ್ವಪ್ರಧಾನ ಮಾಯೆಯು) ಸಚ್ಚಿದಾನಂದಸ್ವರೂಪವಾದ ಪರಬ್ರಹ್ಮದಲ್ಲಿ ಪುನಃ ಉದಯಿಸದಂತೆ ಲಯವಾಗುವುದು. ಈ ತತ್ವಪ್ರತಿಪಾದನೆಯೇ ಪ್ರಚೋದಯಾತ್ ಪದದಲ್ಲಿರುವ ದ ಅಕ್ಷರದ ತತ್ವವಾಗಿರುವುದು. ಈ ತತ್ವಕ್ಕನುಸಾರವಾಗಿಯೇ ಶ್ರೀಲಲಿತಾ ಮಂತ್ರದಲ್ಲಿನ ಸ ಅಕ್ಷರ ಇದರ ವಿವರಣೆಯಾದ ಪರಾ ಎಂಬುದು ಇದೇ ಮನೆಯಲ್ಲಿ

ಇರುವುದಾಗಿದೆ. ಈ ತತ್ತ್ವಕ್ಕನುಸಾರವಾಗಿಯೇ ನಿಷಾದಸ್ವರವೂ ಕೂಡ ಇದೇ ಮನೆಯಲ್ಲಿರುವುದು. ನಿಷಾದಸ್ವರದ ತತ್ವದಲ್ಲಿರುವ ವಿರಾಟ್‌ಸ್ವರೂಪಿಣಿಯಾದ ಶ್ರೀ ಚಾಮುಂಡೇಶ್ವರಿಯು ಸರ್ವವನ್ನು ಲಯಮಾಡಿಕೊಂಡು ಷಡ್ಜ (ಸ) ಸ್ವರದ ತತ್ವವಾದ ಪರಬ್ರಹ್ಮಸ್ವರೂಪವಾಗುವುದು. ರಾಮಾಯಣದ ಉತ್ತರಕಾಂಡದಲ್ಲಿ ಸೀತಾದೇವಿಯು ಭೂಪ್ರವೇಶಮಾಡಿದ ಅಂತರಾರ್ಥವು ಮೇಲಿನ ತತ್ವಕ್ಕೆ ಅನುಸಾರವಾಗಿಯೇ ಇದೆ.

ದೇಹದಲ್ಲಿದ್ದ 'ನಾನು' ಎಂಬ ಶುದ್ಧಜ್ಞಾನವು ಪುನರಾವರ್ತಿರಹಿತವಾದ ಪರಬ್ರಹ್ಮಸ್ವರೂಪ ಯಾವಾಗ ಆಯಿತೋ ಆಗ ದೇಹದಲ್ಲಿರುವ ದೇವತೆಗಳ ಅಂಶವಾಗಿದ್ದ ಪಂಚಪ್ರಾಣಗಳೂ ಇಂದ್ರಿಯಗಳೂ ತಮತಮಗೆ ಕಾರಣವಾದ ಬ್ರಹ್ಮಾಂಡದ ದೇವತೆಗಳ ಶಕ್ತಿಗಳಲ್ಲಿ ಸೇರಿಹೋಗುವುವು. ಹೀಗೆ ಸೂಕ್ಷ್ಮಶರೀರವೂ ಕೂಡ ಭಂಗವಾಗುವುದರಿಂದ ಪ್ರತಿಫಲನಕ್ಕೆ ಅವಕಾಶವೇ ಇಲ್ಲ. ಆದುದರಿಂದ ಪ್ರತಿಫಲಿತಚೈತನ್ಯನಾಗಿದ್ದ ಜೀವಚೈತನ್ಯನು ತನ್ನ ಸ್ವಸ್ವರೂಪವಾದ ಪರಬ್ರಹ್ಮವೇ ಆಗುವನು. ಇದೇ ದೇಹಪತನಕಾಲದಲ್ಲಿ ಆಗುವ ವಿದೇಹಮುಕ್ತಿ. ಈ ತತ್ವಕ್ಕನುಸಾರವಾಗಿಯೇ ಕ, ಲ, ಹ್ರೀಂ ಎಂಬ ಶ್ರೀಲಲಿತಾಮಂತ್ರದ ಅಂತ್ಯಾಕ್ಷರಗಳೂ ಇವುಗಳ ವಿವರಣೆಯಾದ ಮಾರ, ಹರಿಃ ಎಂಬುವುಗಳೂ ಷಡ್ಜ ಸ್ವರವೂ (ಸ) ಅಂತ್ಯದ ಮನೆಗಳಲ್ಲಿ ಇರುವುವಾಗಿವೆ. ರಾಮಾಯಣದಉತ್ತರ ಕಾಂಡದಲ್ಲಿ ಶ್ರೀರಾಮಚಂದ್ರನು ಸಕಲರೊಡನೆ ಸರಯೂನದಿಯನ್ನು ಪ್ರವೇಶಿಸಿ ಸ್ವರ್ಗವನ್ನು ಸೇರಿದ ಕಥಾಭಾಗದ ಅಂತರಾರ್ಥವು ಕೂಡ ಮೇಲಿನ ತತ್ವವನ್ನು ದೃಢೀಕರಿಸುವುದು.

ಮನುಷ್ಯನು ಜೀವನ್ಮುಕ್ತಿ ವಿದೇಹಮುಕ್ತಿಗಳನ್ನು ಹೊಂದುವಿಕೆಯ ವಿಚಾರವನ್ನು ಮೇಲೆ ತಿಳಿಸಿತು. ಜಗತ್ತು ಲಯವಾಗಿ ಪರಬ್ರಹ್ಮ ಒಂದೇ ಉಳಿವುಯಾಗುವಿಕೆಯ ತತ್ವವು ವಿದೇಹಮುಕ್ತಿಯ ಕ್ರಮದಲ್ಲಿ ಸೇರಿರುತ್ತೆ. ಜಗತ್ತು ಲಯವಾಗುವ ವಿಚಾರವನ್ನು ಶ್ರೀಲಲಿತಾಮಂತ್ರದ ಅಂತ್ಯಪಾದದಲ್ಲಿ ತಿಳಿಸಿಯೇ ಇದೆ. ಜಗತ್ತಿನಲಯಕ್ಕೂ ವಿದೇಹಮುಕ್ತಿಗೂ ಇರುವ ತಾರತಮ್ಯವೇನೆಂದರೆ–ಮಡಕೆಯು ಒಡದಂತೆ ಸೂಕ್ಷ್ಮದೇಹದ ಬಲೆಯು ಛಿದ್ರವಾಗುವುದರಿಂದ ಪುನರ್ಜನ್ಮಕ್ಕೆ ಅವಕಾಶವಿಲ್ಲ. ದೇಹದಲ್ಲಿ ಭೂತತನ್ಮಾತ್ರೆಗಳು ಜಗತ್ತಿನ ಆಯಾಯಾ ಭೂತಗಳಲ್ಲಿ ಸೇರುವುವು. ಜಗತ್ತಿನ ಲಯದಲ್ಲಾದರೊ ಪಂಚಭೂತದ ತನ್ಮಾತ್ರೆಗಳು ಅವ್ಯಕ್ತಸ್ಥಿತಿಯಾಗಿ ಪರಬ್ರಹ್ಮಸ್ವರೂಪವಾದ ಓಂ ಮತ್ತು ಹ್ರೀಂ ಗಳಲ್ಲಿರುವ ಬಿಂದುಸ್ವರೂಪದಲ್ಲಿ ಅಡಗುವುವು. ಶ್ರೀ ಗಾಯತ್ರೀಮಂತ್ರದಲ್ಲೂ ಬೀಜಾಕ್ಷರವಾದ ತತ್ ಎಂಬುದರ ಅರ್ಧಾಕ್ಷರದಲ್ಲಿ ಭೂತಾತ್ಮಕವೆಲ್ಲಾ ಅಡಗುವುವು. ಪುನಃ ಸೃಷ್ಟಿಗೆ ಪ್ರಾರಂಭವಾದಾಗ ಉದಯಿಸುವುವು. ಇದೇ ವಿದೇಹಮುಕ್ತಿಗೂ ಜಗತ್ತಿನ

ಲಯಕ್ಕೂ ಇರುವ ಭೇದ. ೨೪ ನೆಯ ಮನೆಯಲ್ಲಿರುವ ಷಡ್ಜ (ಸ) ಸ್ವರವೂ, ಶ್ರೀ ಗಾಯತ್ರೀ ಬೀಜಾಕ್ಷರವಾದ 'ತತ್' ಎಂಬುದೂ, ಶ್ರೀಲಲಿತಾಮಂತ್ರದ 'ಹ್ರೀಂ' ಬೀಜಾಕ್ಷರವೂ, ರಾಮಾವತಾರಕ್ಕೆ ಮೂಲವಾದ 'ಮಹಾವಿಷ್ಣುವಿನ' ಇರುವಿಕೆಯೂ, ಮುಖ್ಯವಾಗಿ ಸೃಷ್ಟಿಯಾದಿಯಲ್ಲಿ ಪರಬ್ರಹ್ಮವೊಂದೇ ಇತ್ತೆಂಬ ತತ್ವಪ್ರತಿಪಾದಕ ವಾಗಿವೆ. ಪರಬ್ರಹ್ಮದಿಂದ ಪುನಃ ಸೃಷ್ಟಿಯು ಉದಯಿಸಿ ಅನಂತರ ಲಯವಾಗಿ ಪುನಃ ಪರಬ್ರಹ್ಮವೊಂದೇ ಬೀಜವೃಕ್ಷನ್ಯಾಯದಂತಾಗುವುದರಿಂದ ಸರ್ವವೂ ಪರ ಬ್ರಹ್ಮವೇ ಆಗಿರುವುದರಿಂದ ಅದ್ವೈತವೇ ಆಗಿದೆ. ಅಲ್ಲದೆ ಶ್ರೀ ಮಹಾವಿಷ್ಣುವು ಶ್ರೀ ರಾಮಾವತಾರವನ್ನು ತಾಳಿದ್ದಾಗ ವೈಕುಂಠವು ಪಾಳಾಗಿರಲಿಲ್ಲ. ಮಹಾವಿಷ್ಣುವು ವೈಕುಂಠದಲ್ಲಿ ಇದ್ದೇಇದ್ದುಕೊಂಡು ರಾಮಾವತಾರವೆತ್ತಿದ್ದಂತೆ ಪರಬ್ರಹ್ಮವು ತನ್ನ ಸ್ಥಾನದಲ್ಲಿದ್ದುಕೊಂಡು ಪ್ರತಿಫಲಿತವಾಗಿ ಜೀವಚೈತನ್ಯನೆನಿಸಿಕೊಂಡಿತ್ತು. ಮೋಕ್ಷ ದಲ್ಲಿ ಶ್ರೀರಾಮನು ಪುನಃ ಶ್ರೀ ಮಹಾವಿಷ್ಣುವಾದಂತೆ ಪ್ರತಿಫಲನಕ್ಕೆ ಅವಕಾಶವಿಲ್ಲ ದ್ದರಿಂದ ಜೀವಚೈತನ್ಯವು ತನ್ನ ಸ್ವಸ್ವರೂಪವಾದ ಪರಬ್ರಹ್ಮವೇ ಆಗುವುದು. ಈ ವಿಧದಿಂದಲೂ ಪಾರಮಾರ್ಥಿಕವಾದುದು ಅದ್ವೈತವೇ.

* * *

ಶ್ರೀ ಸರಸ್ವತೀಮಹಿಮಾರೂಪವಾದ ವೀಣೆಯ ಮನೆಗಳನ್ನಿಟ್ಟುಕೊಂಡು ಶ್ರೀ ಗಾಯತ್ರೀ, ಶ್ರೀಲಲಿತಾಪಂಚದಶಾಕ್ಷರೀ ಮಂತ್ರಗಳ ಮತ್ತು ಶ್ರೀರಾಮ ಚಂದ್ರನ ಲೀಲಾವಿಭೂತಿಯ ತತ್ವಗಳನ್ನು ಸಮನ್ವಯಮಾಡಿ ಬಹುಸೂಕ್ಷ್ಮವಾಗಿ ಇದುವರೆಗೂ ತಿಳಿಸಿತು. ವೀಣೆಯಲ್ಲಿನ ತಂತಿಗಳು ಶ್ರೀಲಲಿತಾಮಂತ್ರದಲ್ಲಿ ಯಾವ ತತ್ವದಲ್ಲಿರುವುದೆಂಬುದನ್ನೂ ಸಹ ತಿಳಿಸಬೇಕಾಗಿದೆ. ಶ್ರೀಸರಸ್ವತೀ ವೀಣೆಯ ತತ್ವಾರ್ಥವು ನಾದಬ್ರಹ್ಮಪ್ರತಿಪಾದಕವಾಗಿ ಓಂಕಾರನಾದದಿಂದ ಸಕಲ ಸೃಷ್ಟಿ ಸ್ಥಿತಿಲಯಗಳಾಗುವುದರ ವಿವರಣೆಯಾಗಿದೆ. ಹೀಗೆ ನಾದಬ್ರಹ್ಮದಿಂದ ಸೃಷ್ಟಿ ಯೆಂದರೆ ವೇದಗಳಿಂದಲೇ ಎಂಬದಾಗಿ ತಿಳಿದುಕೊಳ್ಳಬೇಕು. ವೇದಗಳು ಅವ್ಯಕ್ತ ವಾಗಿದ್ದಾಗ ಪರಬ್ರಹ್ಮವಾಗಿದ್ದು ಸೃಷ್ಟಿ ಸ್ಥಿತಿ ಲಯಗಳ ಕಾರ್ಯಗಳಿಗೋಸ್ಕರ ಓಂಕಾರನಾದರೂಪವಾಗಿ ವ್ಯಕ್ತಸ್ಥಿತಿಯನ್ನು ಪಡೆಯುತ್ತವೆಂದು ವೀಣಾರಹಸ್ಯ ಗ್ರಂಥದಲ್ಲಿ ತಿಳಿಸಿಯೇ ಇರುವುದು. ಓಂಕಾರನಾದರೂಪವಾಗಿ ವೇದಗಳು ಉದ ಯಿಸುವುದೆಂಬುದೂ ಹ್ರೀಂಕಾರನಾದರೂಪವಾಗಿ ವೇದಗಳು ಉದಯಿಸುವು ದೆಂಬುದೂ ಏಕಾರ್ಥವಾದವುಗಳಾಗಿವೆ. ಹ್ರೀಂ ಬೀಜಾಕ್ಷರದಲ್ಲಿನ ಹಕಾರಾಕ್ಷರದ ತತ್ವವೇ ಋಗ್ವೇದ, ರಕಾರದ ತತ್ವವೇ ಯಜುರ್ವೇದ, ಈಕಾರಾಕ್ಷರದ ತತ್ವವೇ ಸಾಮವೇದ, ಅನುಸ್ವಾರದ ತತ್ವವೇ ಅಥರ್ವಣವೇದ. ಆದ್ದರಿಂದ ಶ್ರೀ ಸರಸ್ವತೀ ವೀಣೆಯಲ್ಲಿರುವ ನಾಲಕ್ಕು ತಂತಿಗಳ ರಹಸ್ಯಾರ್ಥಗಳು ಹ್ರೀಂ ಬೀಜಾಕ್ಷರದ ತತ್ವದಲ್ಲಿಯೂ ಇದ್ದೇಇರುವುವು. ಈ ತತ್ವವನ್ನು ವೀಣಾರಹಸ್ಯಗ್ರಂಥದೊಡನೆ ಸಮನ್ವಯಮಾಡಿ ತಿಳಿದುಕೊಳ್ಳಬಹುದು.

ಶ್ರೀ ಗಾಯತ್ರೀಮಂತ್ರಕ್ಕೂ, ಶ್ರೀಲಲಿತಾಪಂಚದಶಾಕ್ಷರೀ ಮಂತ್ರಕ್ಕೂ, ಶ್ರೀ ಸಪ್ತಮಾತೃಕಾಂಬಾ ತಾದಾತ್ಮ್ಯವಾದ ಸಪ್ತಸ್ವರಗಳಿಗೂ, ಶ್ರೀ ಸರಸ್ವತೀ ಮಹಿಮಾರೂಪವಾದ ವೀಣೆಗೂ, ಶ್ರೀರಾಮಚಂದ್ರನ ಚರಿತ್ರೆಯ ಅಂತರಾರ್ಥಕ್ಕೂ ಸಮನ್ವಯಮಾಡಿ ತಿಳಿಸಿರುವುದರಲ್ಲಿ ಎಲ್ಲವೂ ಏಕಾರ್ಥವಾದವುಗಳಾಗಿ ಸಾಕ್ಷಾತ್ ಪರಬ್ರಹ್ಮತತ್ವವನ್ನೇ ಪ್ರತಿಪಾದಿಸುವುವು. ಸಂದರ್ಭಗಳಿಗನುಸಾರವಾದ ಎಲ್ಲಾ ದೇವತಾ ಅವತಾರಗಳ ತತ್ವಾರ್ಥಗಳು ಇದೇ ರೀತಿಯಲ್ಲೇ ಪರಬ್ರಹ್ಮಪ್ರತಿಪಾದಕ ವಾಗಿರುವುವು. ಮೇಲೆ ಬರೆದಿರುವ ಸಮನ್ವಯಗಳ ಜೊತೆಗೆ ಶ್ರೀ ಗಾಯತ್ರೀ, ಶ್ರೀ ಸಪ್ತಮಾತೃಕಾಂಬಾ, ಶ್ರೀಲಲಿತಾಮಹಾತ್ರಿಪುರಸುಂದರೀ, ಶ್ರೀ ಸರಸ್ವತೀ, ಶ್ರೀರಾಮಚಂದ್ರರ ಲೀಲಾವತಾರಗಳ ವಿಭೂತಿಗಳ ರಹಸ್ಯಾರ್ಥಗಳನ್ನಿಟ್ಟುಕೊಂಡು ವಿಮರ್ಶೆಮಾಡಿ ತಿಳಿದುಕೊಂಡರೆ ಆಂತರ್ಯವಾದ ರಹಸ್ಯವೆಲ್ಲಾ ಗೊತ್ತಾಗಿ ಅದ್ವೈತಾಮೃತಸ್ವರೂಪವಾದ ವಿದ್ಯಾನಂದವನ್ನು ಅನುಭವಿಸಬಹುದಲ್ಲದೆ ಅನು ಭವಕ್ಕೂ ತಂದುಕೊಂಡು ಅದ್ವೈತಾಮೃತದಲ್ಲಿ ಮುಳುಗಿ ಪುನರಾವರ್ತಿರಹಿತವಾದ ಶಾಶ್ವತವಾದ ಪರಬ್ರಹ್ಮಸಾಯುಜ್ಯವನ್ನು ಹೊಂದಬಹುದು.

* * *

ಶ್ರೀಲಲಿತಾ ಮಹಾತ್ರಿಪುರಸುಂದರೀಮಂತ್ರದ ರಹಸ್ಯಾಮೃತವನ್ನು ಸ್ಫುರಣೆಗೆ ಕೊಟ್ಟು ಆ ಅಮೃತಕ್ಕೆ ನನ್ನನ್ನು ಭಾಗಿಯನ್ನಾಗಿ ಅನುಗ್ರಹಮಾಡಿದ ಶ್ರೀಲಲಿತಾ ಮಹಾತ್ರಿಪುರಸುಂದರೀ ಪರದೇವತೆಗೂ, ಸೌಂದರ್ಯಲಹರಿಯ ಒಂದೇ ಒಂದು ಶ್ಲೋಕದಲ್ಲಿ ಶ್ರೀಲಲಿತಾಮಂತ್ರದ ರಹಸ್ಯಗಳನ್ನೆಲ್ಲಾ ಗೂಢವಾಗಿಟ್ಟು ಮುಮುಕ್ಷು ಗಳನ್ನು ಉದ್ಧಾರಮಾಡಿರುವ ಪರಾವತಾರವೂ ಸರ್ವಜ್ಞಮೂರ್ತಿಗಳೂ ಆದ ಶ್ರೀಶಂಕರಭಗವತ್ಪಾದರವರಿಗೂ ಸಾಷ್ಟಾಂಗ ದಂಡಪ್ರಣಾಮದೊಡನೆ ಈ ಗ್ರಂಥ ವನ್ನು ಪೂರ್ಣಗೊಳಿಸುವೆನು.

ಶ್ರೀಲಲಿತಾಮಹಾತ್ರಿಪುರಸುಂದರೀ ಚರಣಾರವಿಂದಾರ್ಪಣಮಸ್ತು.

ಓಂ ತತ್ಸತ್.

---

# ಶ್ರೀಮದ್ರಾಮಾಯಣದ ಅಂತರಾರ್ಥ

ಅಥವಾ

# ಮೋಕ್ಷಮಾರ್ಗ ಪ್ರದೀಪಿಕೆ

---

ದೇವತಾ ಅವತಾರಗಳಿಗೂ ಮನುಷ್ಯಾದಿ ಸಕಲಪ್ರಾಣಿಗಳು ಜನ್ಮಪಡೆಯು ವಿಕೆಗೂ ಭೇದವಿರುವುದು. ಜೀವರುಗಳು ಸುಖದುಃಖ ಕರ್ಮಪಾಶದಿಂದ ಜನ್ಮಗಳನ್ನು ಪಡೆಯುವರು. ದೇವತಾ ಅವತಾರಿಗಳು ಕರ್ಮಪಾಶಬದ್ಧರಲ್ಲ. ಸೃಷ್ಟಿಸ್ಥಿತಿಲಯ ಮತ್ತು ಲೋಕೋದ್ಧಾರದ ಕಾರ್ಯಗಳಿಗೋಸ್ಕರ ಲೀಲಾವತಾರ ಗಳಾಗುವುವು. ಅವತಾರಗಳ ಚರಿತ್ರೆಗಳು ಸೃಷ್ಟಿ, ಸ್ಥಿತಿ, ಮೋಕ್ಷಗಳ ಯಾವು ದಾದರೂ ಒಂದು ಮುಖ್ಯತತ್ವಗಳನ್ನಂತರ್ಭೂತವುಳ್ಳದ್ದಾಗಿ ಇಂತಹ ಅಂತರ್ಯವಾದ ತತ್ವಗಳು ಬ್ರಹ್ಮಾಂಡವಿರುವವರೆಗೂ ಇರುತ್ತವೆ. ಇದರಂತೆ ಶ್ರೀರಾಮಚಂದ್ರ ಸ್ವಾಮಿಯ ಲೀಲಾವತಾರದ ಚರಿತ್ರೆಯಾದ ಶ್ರೀಮದ್ರಾಮಾಯಣವು ಜ್ಞಾನ ಮಾರ್ಗದ ತತ್ವಗಳನ್ನೊಳಗೊಂಡಿದೆ ಎಂಬುದನ್ನು ಶ್ರೀಮದ್ರಾಮಾಯಣದ ಅಂತರಾರ್ಥ ಅಥವಾ ಮೋಕ್ಷಮಾರ್ಗಪ್ರದೀಪಿಕೆ ಗ್ರಂಥವು ತಿಳಿಸುವುದು.

ಶ್ರೀಮದ್ರಾಮಾಯಣದ ಕಥಾನಾಯಕರಾದ ಶ್ರೀರಾಮ, ಲಕ್ಷ್ಮಣ, ಭರತ, ಶತ್ರುಘ್ನರನ್ನು ಕ್ರಮವಾಗಿ ಜ್ಞಾನ, ವಿರಕ್ತಿ, ನಿರಭಿಮಾನ, ಸ್ವಾರ್ಥತ್ಯಾಗಗಳಿಗೂ, ವಾಯುಪುತ್ರನಾದ ಹನುಮಂತನನ್ನು ಶ್ವಾಸೋಚ್ಛ್ವಾಸಕ್ಕೂ ವಾಲಿ ಸುಗ್ರೀವಾದಿ ಗಳನ್ನು ಪಂಚಪ್ರಾಣಗಳಿಗೂ, ರಾವಣಾದಿ ರಾಕ್ಷಸರೆಲ್ಲರನ್ನೂ ಕಾಮ, ಕ್ರೋಧ, ಮೋಹ ಮುಂತಾದ ಅಜ್ಞಾನದ ಕಾರ್ಯಭೇದಗಳಿಗೂ ಅನ್ವಯಿಸಿರುವುದು. ಅಂದರೆ ಶ್ರೀಮದ್ರಾಮಾಯಣದಲ್ಲಿ ಬರುವ ಎಲ್ಲಾ ಕಥಾನಾಯಕರನ್ನೂ ಸ್ಥಳ ಗಳನ್ನೂ ಅವರವರು ನಡೆಸಿರುವ ಕಾರ್ಯಗಳನ್ನೂ ಉಪನಿಷದ್ವಾಕ್ಯ, ಶ್ರೀಕೃಷ್ಣಪರ ಮಾತ್ಮನ ಮತ್ತು ಶ್ರೀ ಶಂಕರಭಗವತ್ಪಾದರವರ ಆಧಾರ ವಾಕ್ಯಗಳೊಡನೆಯೂ ಚಿತ್ರಗಳೊಡನೆಯೂ ಮಾನವದೇಹಕ್ಕೆ ಅನ್ವಯಮಾಡಿರುತ್ತೆ. ಮುಖ್ಯವಾಗಿ ರಾವಣನು ಸೀತಾದೇವಿಯನ್ನು ಅಪಹರಿಸುವವರೆಗಿನ ರಾಮಾಯಣದ ಅಂತ ರಾರ್ಥವು ಮನುಷ್ಯರಿಗೆ ಅಜ್ಞಾನಪ್ರಾಪ್ತಿಯಾಗಿರುವ ವಿಧವನ್ನು ತೋರಿಸುವುದು. ಶ್ರೀರಾಮಚಂದ್ರಸ್ವಾಮಿಯು ರಾವಣಾದಿಗಳನ್ನು ನಿಗ್ರಹಿಸಿ ಅಯೋಧ್ಯೆಯಲ್ಲಿ ಪಟ್ಟಾಭಿಷಿಕ್ತನಾಗಿ ರಾಜ್ಯವಾಳುತ್ತಿದ್ದ ಅಂತರಾರ್ಥವು ಮನುಷ್ಯನು ಅಜ್ಞಾನವನ್ನು ಹೋಗಲಾಡಿಸಿಕೊಂಡು ತಮ್ಮಲ್ಲಿಯೇ ತಾವು ಜ್ಞಾನಸೋಪಾನವನ್ನು ಅಂದರೆ ಮೋಕ್ಷವನ್ನು ಹೊಂದುವ ತತ್ವವನ್ನು ವ್ಯಕ್ತಪಡಿಸುವುದು.

---

## ಸಂಧ್ಯಾವಂದನೆಯ ತತ್ವಾರ್ಥ

ಋಗ್ಯಜುಸ್ಸಾಮಶಾಖಾ ಸಂಧ್ಯಾವಂದನೆಯ ಮಂತ್ರಗಳು, ಅವುಗಳ ಅರ್ಥ ಮತ್ತು ಅಂತರ್ಯವಾದ ತತ್ವಾರ್ಥಗಳೊಡನೆ ವಿವರಿಸಿ ಈ ಗ್ರಂಥದಲ್ಲಿ ಬರೆಯಲ್ಪಟ್ಟಿರುವುದು. ಸಂಧ್ಯಾಕಾಲ, ಸಂಧ್ಯಾಕರ್ಮ, ಸಂಧ್ಯಾಶಕ್ತಿಗಳ ವಿಚಾರಗಳನ್ನೂ ಸಹ ವಿಮರ್ಶಪೂರ್ವಕವಾಗಿ ಬರೆದಿದೆ.

---

## ಶ್ರೀಸರಸ್ವತೀಮಹಿಮೆ (ವೀಣಾರಹಸ್ಯ)

ಶ್ರೀ ಸರಸ್ವತೀದೇವಿಯ ಹಸ್ತಗಳಲ್ಲಿರುವ ಪುಸ್ತಕ, ಅಕ್ಷಮಾಲಿಕೆ ವೀಣೆಗಳ ಅಂತರ್ಯವಾದ ದೇವತಾತ್ಮಕವಾದ ತತ್ವಗಳನ್ನು ಹೊರಸೂಸಿ ಆ ದೇವಿಯ ಮಹಿಮೆಯನ್ನು ಈ ಗ್ರಂಥದಲ್ಲಿ ಬರೆದಿರುವುದು. ಒಂದು ಚಿತ್ರದ ವಿಚಾರವೆಲ್ಲಾ ಪ್ರಥಮದಲ್ಲಿ ಚಿತ್ರಗಾರನ ಜ್ಞಾನದಲ್ಲಿದ್ದು ಅನಂತರ ಚಿತ್ರರೂಪವಾಗಿ ಹೊರಪಡುವಂತೆ ಪರಮಾತ್ಮವಿಚಾರ ಮೊದಲುಗೊಂಡು ಈ ಜಗತ್ತಿನ ಸೃಷ್ಟಿಸ್ಥಿತಿಲಯಗಳ ಸಕಲ ವಿಚಾರಗಳ ಜ್ಞಾನಭಂಡಾರವೂ ಶ್ರೀ ಸರಸ್ವತೀದೇವಿಯ ಹಸ್ತದಲ್ಲಿರುವ ಪುಸ್ತಕದಲ್ಲಿರುವುದರಿಂದ ವಿದ್ಯೆಗೆ (ಜ್ಞಾನಕ್ಕೆ) ಶ್ರೀ ಸರಸ್ವತೀದೇವಿಯು ಅಧಿದೇವತೆಯಾಗಿರುತ್ತಾಳೆ. ಶ್ರೀದೇವಿಯ ಹಸ್ತದಲ್ಲಿರುವ ಅಕ್ಷಮಾಲಿಕೆಯು ಓಂಕಾರನಾದದ ವಿವರಣೆಯಾದ ಅಕ್ಷರಶಕ್ತಿಗಳಾಗಿವೆಯೆಂದರೆ ವರ್ಣಾತ್ಮಕಶಕ್ತಿಗಳಾಗಿವೆ. ಚಿತ್ರಗಾರನು ತನ್ನಲ್ಲಿರುವ ಭಾವರೂಪಜ್ಞಾನದಂತೆ ಲೇಖಣಿಯಿಂದ ಚಿತ್ರವನ್ನು ಬರೆಯುವಂತೆ ಶ್ರೀಸರಸ್ವತೀದೇವಿಯು ತನ್ನ ಪುಸ್ತಕದಲ್ಲಿರುವ ಜ್ಞಾನಭಂಡಾರವನ್ನು ಅನುಸರಿಸಿ ನಾದಶಕ್ತಿಗಳರೂಪವಾದ ಲೇಖಣಿಯಿಂದ ಬ್ರಹ್ಮಾಂಡವನ್ನು ರಚಿಸುವಳು. ಅಂದರೆ ಜಗತ್ತಿನ ರಚನೆಯು ಮತ್ತು ಮನುಷ್ಯದೇಹದ ರಚನೆಯು ವೀಣಾರಚನೆಯ ಮೇಲೆಯೇ ಇರುವುದು. ಈ ಮಹಿಮೆಯನ್ನೇ ಶ್ರೀಸರಸ್ವತೀದೇವಿಯ ಹಸ್ತಗಳಲ್ಲಿರುವ ವೀಣೆಯು ಪ್ರತಿಪಾದಿಸುವುದು. ಶ್ರೀದೇವಿಯ ಹಸ್ತಗಳಲ್ಲಿರುವ ವೀಣೆಯಲ್ಲಿನ ನಾಲಕ್ಕು ತಂತಿಗಳನ್ನು ಋಗ್ಯಜುಸ್ಸಾಮಾಥರ್ವಣಗಳಾದ ನಾಲಕ್ಕು ವೇದಗಳಿಗೆ ಅನ್ವಯಮಾಡಿರುವುದರಿಂದ ವೇದದ ಮಹಿಮೆಯ ವಿಚಾರಗಳೂ ಈ ಗ್ರಂಥದಲ್ಲಿ ಬಂದಿವೆ. ಅಲ್ಲದೆ ವೀಣೆಯ ೨೪ ಮನೆಗಳಲ್ಲಿರುವ ಸಂಗೀತಶಾಸ್ತ್ರದ ಸಪ್ತಸ್ವರಗಳ ಮತ್ತು ಸಪ್ತಸ್ವರಗಳಿಗೆ ಅಭಿಮಾನಿದೇವತೆಗಳಾದ ಸಪ್ತಮಾತೃಕೆಯರ ಮಹತ್ತಿನ ವಿಚಾರವೂ, ಪ್ರಾಚೀನವಾಗಿರುವ ನಮ್ಮ ಭರತಖಂಡದ ಸಂಗೀತಶಾಸ್ತ್ರದ ಹೆಚ್ಚುಗಾರಿಕೆಯ ವಿಚಾರವೂ ನಾದೋಪಾಸನೆಯ ವಿಚಾರವೂ ಈ ಗ್ರಂಥದಲ್ಲಿ ಬಂದಿವೆ. ವೀಣೆಯಲ್ಲಿರುವ ತತ್ವಗಳನ್ನು ವಿವರಿಸಿರುವ

ಚಿತ್ರ, ವೀಣೆಯನ್ನು ಮನುಷ್ಯಶರೀರಕ್ಕೆ ಅನ್ವಯಿಸಿರುವ ಚಿತ್ರ, ಶ್ರೀಕೃಷ್ಣಪರಮಾತ್ಮನು ಧರಿಸಿರುವ ಕೊಳಲಿನ ತತ್ವವನ್ನೂ ಮನುಷ್ಯಶರೀರದಲ್ಲಿ ತೋರಿಸುವ ಚಿತ್ರಗಳೂ ಸಹ ಈ ಗ್ರಂಥದಲ್ಲಿರುವುದು.

---

## ಭಕ್ತಿಸುಧಾರಸ

ಶ್ರೀನಾರದಮಹರ್ಷಿಗಳು ಪ್ರಪಂಚದ ಅಜ್ಞಾನಕೂಪದಲ್ಲಿ ಬಿದ್ದು ಒದ್ದಾಡುತ್ತಿರುವ ಮನುಷ್ಯರ ಉದ್ಧಾರಕ್ಕೋಸ್ಕರ ಭಕ್ತಿಶಾಸ್ತ್ರವನ್ನು ೮೪ ಸೂತ್ರಗಳಲ್ಲಿ ಉಪದೇಶರೂಪವಾಗಿ ಹೊರಪಡಿಸಿರುತ್ತಾರೆ. ಈ ೮೪ ಸೂತ್ರಗಳ ಅರ್ಥ ಮತ್ತು ವಿವರವಾದ ತಾತ್ಪರ್ಯಗಳನ್ನು ಈ ಗ್ರಂಥದಲ್ಲಿ ಬರೆದಿರುತ್ತದೆ: ಭಕ್ತಿಯಸ್ವರೂಪವೇನು? ಭಕ್ತಿಯನ್ನು ಅನುಸರಿಸುವದರಿಂದ ಆಗುವ ಪ್ರಯೋಜನವೇನು? ಎಂಬ ವಿಚಾರಗಳನ್ನು ತಿಳಿದುಕೊಳ್ಳಲು ಈ ಗ್ರಂಥದಲ್ಲಿ ಅನುಕೂಲವಿದೆ. ಅಲ್ಲದೆ ಶ್ರೀಶಂಕರಭಗವತ್ಪಾದರವರ ಭಜಗೋವಿಂದ ಮತ್ತು ಲಘುವಾಕ್ಯವೃತ್ತಿ ಶ್ಲೋಕಗಳ ಅರ್ಥ ಮತ್ತು ವಿವರಣೆಗಳನ್ನೂ ಸಹಾ ಈ ಗ್ರಂಥದಲ್ಲಿ ಸೇರಿಸಿರುವುದರಿಂದ ಭಕ್ತಿಯ ಜೊತೆಗೆ ಜ್ಞಾನ ಮತ್ತು ವೈರಾಗ್ಯದ ವಿಚಾರಗಳನ್ನು ತಿಳಿಯಲು ಅನುಕೂಲವಿದೆ.

---

## ಗ್ರಂಥಗಳ ವಿಚಾರದಲ್ಲಿ ಪೂಜ್ಯರಾದ ಮಠಾಧಿಪತಿಗಳ ಅನುಗ್ರಹವಾದ ವಾಕ್ಕುಗಳು ಮತ್ತು ಪಂಡಿತೋತ್ತಮರ ಅಭಿಪ್ರಾಯಗಳು.

**ಶ್ರೀಮದ್ರಾಮಾಯಣದ ಅಂತರಾರ್ಥಗ್ರಂಥವನ್ನು** ಶ್ರೀಮತ್ಪರಮಹಂಸ ಇತ್ಯಾದಿ ಬಿರುದಾಂಕಿತರಾದ ಶ್ರೀಶೃಂಗೇರೀ ಪೀಠವನ್ನಲಂಕರಿಸಿರುವ **ಶ್ರೀಮಜ್ಜಗದ್ಗುರು ಶ್ರೀಚಂದ್ರಶೇಖರಭಾರತೀ ಮಹಾಸ್ವಾಮಿಗಳವರ** ಚರಣಕಮಲ ಸನ್ನಿಧಾನಂಗಳಲ್ಲಿ ಶ್ರೀ ಗುರುಗಳವರ ಅನುಜ್ಞೆಯನ್ನು ಪಡೆದು ಭಕ್ತಿಪೂರ್ವಕವಾಗಿ ಸಮರ್ಪಿಸಲ್ಪಟ್ಟಿದೆ. ಅಲ್ಲದೆ ಈ ಗ್ರಂಥವಿಚಾರದಲ್ಲಿ **ಶ್ರೀಜಗದ್ಗುರು ಶ್ರೀ ಚಂದ್ರಶೇಖರಭಾರತೀ ಮಹಾಸ್ವಾಮಿಗಳವರ** ಅನುಗ್ರಹವಾದ ಅಭಿಪ್ರಾಯವೇನೆಂದರೆ:— " **ಈ ಗ್ರಂಥರಚನೆಯಲ್ಲಿ ನೀವು ತೋರಿಸಿರುವ ಅತಿಶಯವಾದ ಅನುಭವವನ್ನೂ, ಭಕ್ತಿವಿಶೇಷವನ್ನೂ ನೋಡಿ ಅತ್ಯಂತ ಸಂತೋಷಪಟ್ಟು** ಪರಮಶ್ರೇಯಸ್ಸುಂಟಾಗಬೇಕೆಂದು " ಅನುಗ್ರಹಿಸಿರುತ್ತಾರೆ.

---

ಮೈಸೂರು ಶ್ರೀಮನ್ಮಹಾರಾಜರವರ ಆಸ್ಥಾನದ ಧರ್ಮಾಧಿಕಾರಿಗಳಾಗಿ ಮಹಾವಿದ್ವಾನ್ ಮಹಾ ಮಹೋಪಾಧ್ಯಾಯ ವಿದ್ಯಾನಿಧಿ ವಿದ್ಯಾವಾಚಸ್ಪತಿ ವೇ|| ಬ್ರಂಹ ಶ್ರೀ|| ವಿರೂಪಾಕ್ಷ ಶಾಸ್ತ್ರಿಗಳೆಂಬ ನಾಮಾಂಕಿತದಿಂದಿದ್ದು ಸನ್ಯಾಸಾಶ್ರಮ ಸ್ವೀಕರಿಸಿ ಶ್ರೀಕೂಡಲಿ ಶೃಂಗೇರೀ ಪೀಠವನ್ನಲಂಕರಿಸಿದ್ದ ಶ್ರೀಮತ್ಪರಮಹಂಸ ಇತ್ಯಾದಿ ಬಿರುದಾಂಕಿತರಾದ ಶ್ರೀಮಜ್ಜಗದ್ಗುರು **ಶ್ರೀವಿದ್ಯಾಭಿನವವಾಲುಕೇಶ್ವರ ಭಾರತೀ ಮಹಾಸ್ವಾಮಿಗಳವರ** ಅನುಗ್ರಹಪೂರ್ವಕವಾದ ಅಭಿಪ್ರಾಯವು

**ಶ್ರೀಮದ್ರಾಮಾಯಣದ ಅಂತರಾರ್ಥಗ್ರಂಥ ವಿಚಾರದಲ್ಲಿ**

ಶ್ರೀಮದಗಣಿತ ಗುಣಮಣಿ ಗಣಾಲಂಕೃತ ರುಚಿರತರ ಶುಭಸ್ವರೂಪ ಶ್ರೀರಾಮ: ದಿವ್ಯಚರಿತಂ ವರ್ಣಯಿತುಂ ಕಃಶಕ್ನೋತಿ ? ಶ್ರೀಮದಾದಿ ಶೇಷಾಣಾಮಪಿ ಅಸಾಧ್ಯವರ್ಣನಂ ಪಾವನಚರಿತಂ ಶ್ರೀಮದ್ರಾಮಾಯಣಂ ಅಹಂ ವರ್ಣಯಾಮೀತಿ ಯೋ ಅಭಿಮನ್ಯತೆ, ಸ ಹಾಸ್ಯಾಸ್ಪದಂ ವಿದುಷಾಂ ನಿರಂತರಾ ಮನಸ್ಕ ಸಮಾಧಿಪರಿಪೂರ್ಣ | ಪರಮಯೋಗೀಂದ್ರಹೃದಯ ಕರ್ಣಿಕೋಪರಿಸ್ಥಿತ ಜಗತ್ಪವಿತ್ರೀಕಾರ್ಯಪದದ್ಭುತ ಮಹಾಪ್ರಭಾವಪದ ಶ್ರೀ ರಾಮತತ್ವ ವಿಜ್ಞಾನೇ ಶ್ರೀಮದ್ರಾಮಾಯಣಾಂತರಾರ್ಥ ಪ್ರಕಾಶಕೋ ಅಯಂಗ್ರಂಥಃ ಸುಲಭೋಪಾಯ ಏವ ಭವೇತ್.

ಸರ್ವ ವೇದಾಂತ ವಾಕ್ಯಾನಾಂ ಬ್ರಹ್ಮಣ್ಯೇವ ಮಹಾತಾತ್ಪರ್ಯಮಿತಿ ಭಗವತ್ಪಾದೈಃ ಶ್ರೀಮಚ್ಛಂಕರಾಚಾರ್ಯ ಸ್ವಾಮಿಭಿಃ ಅಭಿದಾನಾದಯಂ ಗ್ರಂಥೋ ಅಪಿ ಬ್ರಹ್ಮತತ್ವ ಪ್ರತಿಪಾದನ ಪರತ್ವಾತ್ ಶಾಸ್ತ್ರಾನು ರೋಧ್ಯೇ ವೇತ್ಯಸ್ಮಾಕಮಾಶಯಃ

**ಸಂಧ್ಯಾವೀಣಾತತ್ವಾರ್ಥಗ್ರಂಥ ವಿಚಾರದಲ್ಲಿ**

"ಶ್ರುತಿಸ್ಮೃತ್ಯಾದಿ ಪ್ರಮಾಣಾವಿರೋಧೇನ ಪರದೇವತಾ ಪರಮಾನುಗ್ರಹಮಾತ್ರ ಸಂಸ್ಫುರಿತ ಸದ್ಯುಕ್ತಿನಿಚಯೇನ ವಿರಚಿತಃ **ಸಂಧ್ಯಾವೀಣಾತತ್ವಾರ್ಥ** ನಾಮಕೋಽಯಂ ಗ್ರಂಥಃ ಸಮ್ಯಗ್ವ್ಯಲೋಕಿ | ಅತ್ರ ಅನೇಕ ದುರವಗಾಹಾ ವಿಷಯಾಃ ಪ್ರತಿಪಾದಿತಾಃ | ಕಿಂಚಾಸ್ಮಿನ್ಗ್ರಂಥೇ ವಾಣೀಪಾಣಿಸ್ಥ ವೀಣಾದಂಡಃ ಗಾಯತ್ರೀ ಸಮತಯಾ ಶ್ಲಾಘ್ಯಾಕಯಾ ನಿರೂಪಿತಃ | ಅಪಿಚ ಶಾಸ್ತ್ರಾನುಸಾರೇಣ ವೇದಾಪೌರುಷೇಯತ್ವಂ ಸಮ್ಯಕ್ ನಿರೂಪಿತಂ | ಏತದ್ಗ್ರಂಥಕರ್ತುಃ ಏತಾದೃಶ ಗ್ರಂಥರಚನಾಶಕ್ತಿಃ ದೇವತಾನುಗ್ರಹ ಬಲಾದೇವ ಸಂಜಾತಾ ನಾನ್ಯಥೇತಿ ಮನ್ಯಾಮಹೇ | ಅಯಂಗ್ರಂಥಃ ಸಕಲ ಜನಾನಾಮಾನಂದದಾಯಕೋ ವರ್ತತ ಇತಿ ದೃಢ ಮಾವೇದಯಾಮಃ || "

ಶ್ರೀಮೇಲುಕೋಟೆ ಯತಿರಾಜಮಠದ ಪೀಠಸ್ಥರಾದ ಶ್ರೀಮತ್ಪರಮ ಹಂಸೇತ್ಯಾದಿ ಬಿರುದಾಂಕಿತರಾದ **ಶ್ರೀಯತಿರಾಜಸಂಪತ್ಕುಮಾರ** ರಾಮಾನುಜ ಸ್ವಾಮಿಗಳವರ ಅನುಗ್ರಹವಾದ ಅಭಿಪ್ರಾಯವು.

**ಶ್ರೀಮದ್ರಾಮಾಯಣದ** ಅಂತರಾರ್ಥ ಎಂಬ ಗ್ರಂಥವನ್ನು ಅನೇಕ ಸ್ಥಳದಲ್ಲಿ ವಿಚಾರಮಾಡಿ ನೋಡಿದೆವು. ಅಂತರಾರ್ಥವು ಉಪನಿಷತ್ತು ಮುಂತಾದ ಪ್ರಮಾಣದ ಆಧಾರದ ಮೇಲೆ ರಾಮಾಯಣದ ವಾಕ್ಯಗಳನ್ನು ಸಮಗೂಡಿಸಿ ವಿಚಾರಮಾಡಲ್ಪಟ್ಟಿದೆ ಈ ವಿಧವಾದ ರಾಮಾಯಣದ ಅಂತರಾರ್ಥ ನಿರೂಪಣೆ ಮಾಡಿದ ಗ್ರಂಥವು ಇದೇ ಮೊದಲನೆಯದಾಗಿರುತ್ತೆ. ಈ ವಿಧವಾದ ಪ್ರಯತ್ನವು ನಿಮಗೆ ಉಂಟಾಗುವುದಕ್ಕೆ ಜನ್ಮಾಂತರದ ಸುಕೃತವಿಶೇಷವು ಮೂಲವಾಗಿ ಸದ್ಗುರುಗಳ ಅನುಗ್ರಹವು ವೃದ್ಧಿಗೆ ಕಾರಣವಾಗಿರುತ್ತೆ. ಕಥಾಭಾಗವಲ್ಲದೆ ತತ್ವಾರ್ಥ ವನ್ನು ಅಪೇಕ್ಷಿಸುವವರಿಗೆ ಈ ಗ್ರಂಥವು ಸುಲಭವಾಗಿ ಮಾರ್ಗವನ್ನು ತೋರಿಸು ತ್ತದೆ. ಇದನ್ನು ನೋಡಿ ನಾವು ಬಹಳ ಸಂತೋಷಪಟ್ಟೆವು. ರಾಮಾಯಣ ಪ್ರತಿಪಾದ್ಯನಾದ ಶ್ರೀರಾಮಚಂದ್ರಭಗವಂತನು ನಿಮ್ಮ ಭಕ್ತಿಗೆ ಮೆಚ್ಚಿ ನಿಮಗೆ ಇಹಪರ ಸೌಖ್ಯಗಳನ್ನು ಉಂಟುಮಾಡಲೆಂದು ಮಾಡುವ ಮಂಗಳಾಶಾಸನ.

**ಸಂಧ್ಯಾವೀಣಾತತ್ವಾರ್ಥಗ್ರಂಥ ವಿಚಾರದಲ್ಲಿ :—**

ಗಾಯತ್ರೀ ಮಪಿವಲ್ಲಕೀ ಮಸುಮತಾಂ ದೇಹಾಸ್ಥಿನಿಶ್ರೇಣಿಕಾಂ ।
ಪರ್ಯಾವೃತ್ಯಧಿಯೈಕ ಯೋನಿ ಭವತಾಂ ತಸ್ಯತ್ರಿಕಸ್ಯಸ್ವತಃ ॥
ವಿಜ್ಞಾಯ ಶ್ರುತಿಮಂತ್ರಯೋಗ ಭರತಾಚಾರ್ಯಾಗಮ ಪ್ರಕ್ರಿಯಾ ।
ಪಿಂಡೀಕೃತ್ಯ ನಿದರ್ಶನೈ ರ್ವ್ಯವೃಣುತ ಶ್ರೀ ಸುಬ್ಬರಾಯಃಕೃತೀ ॥

———

ಧಾರವಾಡದ ಶ್ರೀ ಶಂಕರಾಚಾರ್ಯರವರ ಪಾಠಶಾಲಾ ಪ್ರಿನ್ಸಿಪಾಲರಾದ **ವೇ॥ ಬ್ರಂಹ್ಮ॥ ಶ್ರೀ॥ ವಿದ್ವಾನ್॥ ನಾಗೇಶಶಾಸ್ತ್ರಿಗಳವರ** ಅಭಿಪ್ರಾಯವು.

ಮಹಾರಾಜಶ್ರೀ ಶ್ರೀರಾಮಭಕ್ತಪರಾಯಣ ಎಡತೊರೆ ಸುಬ್ಬರಾಯರು ರಚಿಸಿದ **ಶ್ರೀಮದ್ರಾಮಾಯಣದ ಅಂತರಾರ್ಥವೆಂಬ** ಪುಸ್ತಕವನ್ನು ಅವ ಲೋಕನ ಮಾಡಿದೆನು. ಲೋಕೋದ್ಧಾರಕವಾಗಿ ಲೀಲಾಮಾನುಷವಿಗ್ರಹವನ್ನು ಧರಿಸಿ ಅನೇಕ ಅದ್ಭುತಚರಿತ್ರೆಗಳನ್ನು ಮಾಡಿ ವ್ಯವಹಾರವಲ್ಲದೆ ಪರಮಾರ್ಥವನ್ನು ಕೂಡ ಅಧಿಕಾರಾನುಗುಣವಾಗಿ ಜನರಿಗೆ ತೋರ್ಪಡಿಸಿರುವುದಾಗಿ ಶ್ರೀರಾಮ ಕೃಷ್ಣಾದಿಗಳ ಅವತಾರಗಳಲ್ಲಿನ ಲೀಲೆಯಿಂದ ತಿಳಿದುಬರುವುದು. ಅವತಾರದ ವ್ಯವಹಾರಿಕ ಚರಿತ್ರವನ್ನು ಮಾತ್ರ ಪರ್ಯಾಲೋಚಿಸಿ ಕೆಲವು ಅಲ್ಪಜ್ಞರು ಸಂಕ

ಚಿತವಾದ ಸ್ವಬುದ್ಧಿಗೆ ಅನುಸರಿಸಿ ದೋಷಾರೋಪಣೆಗಳನ್ನು ಕೂಡ ಮಾಡಲು ಸಂಕೋಚಮಾಡುವುದಿಲ್ಲ. ಈ ಮಾತನ್ನೇ ಭಗವಂತನು ಗೀತೆಯಲ್ಲಿ “ಅವಜಾನಂತಿ ಮಾಂ ಮೂಢಾಃ ಮಾನುಷೀಂ ತನುಮಾಶ್ರಿತಂ। ಪರಂಭಾವ ಮಜಾನಾಂತೋ ಮಮಭೂತ ಮಹೇಶ್ವರಂ” ಎಂದಪ್ಪಣೆ ಕೊಟ್ಟಿರುವನು. ಮಹಾತ್ಮರು ಮಾತ್ರ ಭಗವಚ್ಚರಿತ್ರೆಯಲ್ಲಿರುವ ಪಾರಮಾರ್ಥಿಕ ಅಂಶವನ್ನು ಕಂಡುಹಿಡಿದು ಅದರಿಂದ ತಮಗೆ ಅಧ್ಯಾತ್ಮಜ್ಞಾನದ ವಿಕಾಸವಾಗುವಂತೆ ಪ್ರಯತ್ನಿಸುವರು. ಶ್ರೀ. ಸುಬ್ಬರಾಯರವರು ಶ್ರೀರಾಮಚರಿತ್ರೆಯಲ್ಲಿನ ಅಧ್ಯಾತ್ಮಭಾಗವನ್ನು ತಿಳಿಯಲಪೇಕ್ಷಿಸುವ ಭಕ್ತರಿಗೋಸ್ಕರವಾಗಿ ಬಹು ಶ್ರಮದಿಂದ ಅಂತರಾರ್ಥವನ್ನು ರಚಿಸಿ ಶ್ರೀರಾಮಾಯಣ ಮತ್ತು ತತ್ವಪ್ರೇಮಿಯಾದ ಜನತೆಯನ್ನು ಬಹು ಉಪಕೃತವನ್ನಾಗಿ ಮಾಡಿರುವರು. ಈ ಅಂತರಾರ್ಥವು ಅಧ್ಯಾತ್ಮಜ್ಞಾನಸ್ವರೂಪವನ್ನೂ ಅದಕ್ಕೆ ಸಾಧನವಾದ ಯೋಗಶಾಸ್ತ್ರದ ರಹಸ್ಯವನ್ನೂ ಬಹು ಚೆನ್ನಾಗಿ ತಿಳಿಸಿಕೊಡುವುದು. ಈ ಗ್ರಂಥಕಾರರು ಲೌಕಿಕ ಕಾರ್ಯದಲ್ಲಿ ವ್ಯಾವೃತರಾಗಿದ್ದರೂ ಸುಕೃತ ವಿಶೇಷದಿಂದ ಈ ವಿಧವಾದ ಸಾರಗರ್ಭಿತವಾದ ಗ್ರಂಥವನ್ನು ರಚಿಸಿದ್ದು ಬಹು ಶ್ಲಾಘನೀಯವಾಗಿದೆ. ಈ ಗ್ರಂಥವನ್ನು ಜಿಜ್ಞಾಸುಗಳು ಪರಮಾದರದಿಂದ ಸಂಗ್ರಹಿಸಿ ಇದರ ವಾಚನದಿಂದ ತತ್ವವನ್ನು ತಿಳಿದುಕೊಂಡು ಸಚ್ಚಿದಾನಂದ ಸ್ವರೂಪನಾದ ಶ್ರೀಜಾನಕೀ ಜಾನಿಯ ಅನುಗ್ರಹಕ್ಕೆ ಪಾತ್ರರಾಗಲೆಂತಲೂ, ಈ ಗ್ರಂಥಕಾರರಿಗೆ ಆಯುರಾರೋಗ್ಯ ಐಶ್ವರ್ಯಾಭಿವೃದ್ಧಿಯಾಗಲೆಂತಲೂ ಆಶಿಸುತ್ತೇನೆ.

---

ಶ್ರೀಶೃಂಗೇರೀ ಶ್ರೀಜಗದ್ಗುರುಸಂಸ್ಥಾನದ ಪಾಠಶಾಲಾ ವಿಶ್ರಾಂತ ಅಧ್ಯಕ್ಷರು **ವೇ॥ ಬ್ರಂ॥ ಶ್ರೀ॥ ನರಸಿಂಹಮೂರ್ತಿ ಶಾಸ್ತ್ರಿಗಳವರ** ಅಭಿಪ್ರಾಯವು.

ಮ॥ ರಾ॥ ಯಡತೊರೆ ಸುಬ್ರಾಯರವರು “**ಶ್ರೀಮದ್ರಾಮಾಯಣದ ಅಂತರಾರ್ಥ**” ಗ್ರಂಥವನ್ನು ಶ್ರೀ. ಶ್ರೀ ಜಗದ್ಗುರು ಮಹಾಸ್ವಾಮಿಗಳವರ ಕರುಣಾ ಕಟಾಕ್ಷಕ್ಕೆ ಪಾತ್ರವಾದದ್ದನ್ನಾಗಿ ಮಾಡಬೇಕೆಂದು ಶೃಂಗೇರಿಗೆ ಬಂದಿದ್ದ ಕಾಲದಲ್ಲಿ ಗ್ರಂಥವನ್ನು ಪ್ರಥಮದಲ್ಲಿ ನಾನು ಪರಿಶೀಲಿಸಿದೆನು. ಅಲ್ಲದೆ ಮುದ್ರಿತವಾದ ಅನಂತರದಲ್ಲೂ ಅವಲೋಕಿಸಿದೆನು. ಈ ಗ್ರಂಥವು ಜ್ಞಾನಯೋಗಗಳ ಸಾರವಾಗಿ ತನ್ನನ್ನು ತಾನು ತಿಳಿದುಕೊಳ್ಳುವ ಅಮೃತಪ್ರಾಯವಾದ ಸ್ವಾನುಭವದ ಮಾರ್ಗವನ್ನು ವ್ಯಕ್ತಪಡಿಸುವುದು. ಈ ಗ್ರಂಥವನ್ನು ನಾನು ಓದಿಸಿ ಕೇಳುವ ಕಾಲದಲ್ಲಿ ಈ ಗ್ರಂಥಕರ್ತರಿಗೆ ಸಂಸ್ಕೃತದಲ್ಲಷ್ಟೊಂದು ಪರಿಶ್ರಮವಿದ್ದಂತೆ ಕಂಡುಬರಲಿಲ್ಲ. ಆದರೆ ಈ ಗ್ರಂಥರಚನಾಕ್ರಮವನ್ನು ಕೇಳಿ ನನಗೆ ಆಶ್ಚರ್ಯವಾಯಿತು. ಶ್ರೀರಾಮಚಂದ್ರಸ್ವಾಮಿಯ ಲೀಲಾವತಾರದಲ್ಲಿನ ರತ್ನಪ್ರಾಯವಾದ ಮೋಕ್ಷಮಾರ್ಗದ

ಅಂತರಾರ್ಥವನ್ನು ಇದುವರೆಗೂ ಯಾರೂ ಹೊರಪಡಿಸಿರಲಿಲ್ಲ. ಪ್ರಥಮದಿಂದ ಅಂತ್ಯದವರೆಗೂ ಶ್ರೀಮದ್ರಾಮಾಯಣಕ್ಕೆ ಶಾಸ್ತ್ರಸಮ್ಮತವಾದ ಅಂತರಾರ್ಥವು ಹೊಳೆದು ಅಮೋಘವಾದ ಉಪನಿಷದ್ವಾಕ್ಯಗಳೊಡನೆ ಅನ್ವಯಿಸಿ ಬರೆಯುವುದು ಪುಸ್ತಕಾವಲೋಕನ ಪಾಂಡಿತ್ಯಮಾತ್ರದಿಂದ ಸಾಧ್ಯವಾಗಲಾರದೆಂದೂ, ಜಗನ್ಮಾತೆಯ ವರಪ್ರಸಾದದ ಫಲವೇ ಆಗಿದೆಯೆಂದೂ ನಾನು ಅಭಿಪ್ರಾಯಪಡುತ್ತೇನೆ. ಶ್ರೀ. ಶ್ರೀ ಜಗದ್ಗುರು ಮಹಾಸ್ವಾಮಿಗಳವರೂ ಕೂಡ ಈ ಗ್ರಂಥವಿಚಾರದಲ್ಲಿ ಅತ್ಯಂತ ಸಂತೋಷಪಟ್ಟು ನನ್ನೊಡನೆ ಅಪ್ಪಣೆ ಮಾಡಿರುತ್ತಾರೆ.

ಅಲ್ಲದೆ ಮ॥ ರಾ॥ ಸುಬ್ರಾಯರಿಂದ ಈಚೆಗೆ ರಚಿತವಾದ ರತ್ನಪ್ರಾಯವಾದ ರಹಸ್ಯಾರ್ಥಗಳನ್ನೊಳಗೊಂಡ “**ಸಂಧ್ಯಾವೀಕ್ಷಾತತ್ವಾರ್ಥ**” ಗ್ರಂಥವನ್ನೂ ಅವಲೋಕಿಸಿದೆನು. ಮುಖ್ಯವಾಗಿ ಶ್ರೀ ಗುರುಗಳವರ ಮತ್ತು ಶ್ರೀ ಶಾರದಾಂಬಾ ಅನುಗ್ರಹದ ಫಲವೇಯೆಂದು ಹೇಳಬೇಕಾಗಿದೆ.

ಈ ಗ್ರಂಥಕರ್ತರು ಪರಮ ಭಕ್ತರು, ಅಂತರ್ಮುಖಿಗಳು. ಈ ಸದ್ಗ್ರಂಥಗಳು ಲೋಕದಲ್ಲಿ ಪ್ರಖ್ಯಾತಿಹೊಂದಿ ಆಸ್ತಿಕಮಹನೀಯರ ಹೃದಯಾಹ್ಲಾದಕರವಾಗಿರಲೆಂದು ಶ್ರೀ ಜಗದಂಬೆಯನ್ನು ಪ್ರಾರ್ಥಿಸುತ್ತೇನೆ.

---

ನ್ಯಾಯಾಚಾರ್ಯ, ಮೀಮಾಂಸಪಿದ್ವಾನ್, ಮೀಮಾಂಸತೀರ್ಥ, ವೇದಾಂತವಾಗೀಶ, ವೇದಕೇಸರಿ, ಸಾಂಖ್ಯಯೋಗಶಿಖಾಮಣಿ, ಮೀಮಾಂಸರತ್ನ ವೇ॥ ಬ್ರ॥ ಶ್ರೀಮಾನ್॥ ಮೈಸೂರು ತಿರುಮಲ ಕೃಷ್ಣಮಾಚಾರ್ಯರವರ ಅಭಿಪ್ರಾಯವು.

ಶ್ರೀಮತ್, ಬ್ರಂಹ ಶ್ರೀ, ವೇದಮೂರ್ತಿಗಳಾದ ಯಡತೊರೆ ಸುಬ್ರಾಯರವರಿಂದ ರಚಿತವಾದ “**ಶ್ರೀಮದ್ವಾಲ್ಮೀಕಿ ರಾಮಾಯಣಾಂತರಾರ್ಥ**” ಎಂಬ ಈ ಸದ್ಗ್ರಂಥದಲ್ಲಿ ಕಥಾಸಾರಾಂಶದೊಂದಿಗೆ ಅಧ್ಯಾತ್ಮ ತತ್ವವೂ ಮತ್ತು ಅದಕ್ಕೆ ಮುಖ್ಯಮಾರ್ಗವಾದ ಯೋಗರಹಸ್ಯಸಾರವೂ ಬಹು ಸುಂದರವಾಗಿಯೂ, ಸಾರವತ್ತಾಗಿಯೂ ನಿರೂಪಿತವಾಗಿರುತ್ತೆ.

ಅತ್ಯುತ್ತಮವಾದ ಈ ಮಾನವ ಜನ್ಮವನ್ನು ಹೊಂದಿದ ಜೀವಿಯು ಮಾಡಬೇಕಾದ ಕರ್ತವ್ಯವೂ ಅದರ ಫಲವೂ ಎಂತಹುದೆಂಬುದು ಈ ಗ್ರಂಥದಲ್ಲಿ ಉದಹರಿಸಿರುವ ಚಿತ್ರಪಠಗಳಿಂದಲೇ ಸುಲಲಿತವಾಗಿ ಗೋಚರವಾಗುವುದು. ಈ ಗ್ರಂಥಕರ್ತರಿಗೆ ಈ ಗ್ರಂಥರಚನಾ ಸಾಮರ್ಥ್ಯವು ಪೂರ್ವಜನ್ಮದ ಸಿದ್ಧಿ ಮತ್ತು ಶ್ರೀರಾಮಾನುಗ್ರಹದ ಫಲವೇ ಸರಿ. ಮಂತ್ರ, ಲಯ, ಹಠ, ರಾಜಯೋಗಗಳೆಂಬ ನಾಲ್ಕು ಯೋಗಮಾರ್ಗಗಳನ್ನೂ ಒಂದಕ್ಕೊಂದು ಮಿಶ್ರವಾಗದಂತೆ ಪ್ರಕಟಿಸಿರುವ ಈ

ಸದ್ಗ್ರಂಥವು ನಮ್ಮ ಸಂಶಯಗ್ರಂಥಿ ಭೇದನವನ್ನು ಮಾಡಿ ಆತ್ಮಸ್ವರೂಪವನ್ನು ತೋರಿಸುವುದರಲ್ಲಿ ಸಂದೇಹವಿಲ್ಲವೆಂದು ನಾನು ಪ್ರಮಾಣಿಸಬಲ್ಲೆನು.

ದ್ವೈತ, ಅದ್ವೈತ, ವಿಶಿಷ್ಟಾದ್ವೈತಗಳೆಂಬ ಮೂರು ಸಿದ್ಧಾಂತಗಳೂ ಪರಸ್ಪರ ವಿರೋಧಿಸದಂತೆ ಈ ಗ್ರಂಥಕರ್ತರು ಅನೇಕ ಉಪನಿಷತ್ ಸಾರವಾಕ್ಯಗಳನ್ನು ಉದಾಹರಿಸಿ ಸ್ವಾನುಭವದೊಂದಿಗೆ ವಿಚಾರಿಸಿರುತ್ತಾರೆ. ಆಸ್ತಿಕ ಮಹನೀಯರಿದನ್ನು ಅವಲೋಕಿಸಿ ಸಾರಗ್ರಾಹಿಗಳಾಗಿ ಶಾರೀರ, ಆಧ್ಯಾತ್ಮಿಕ ತತ್ವನಿಷ್ಠರಾಗಲು ಸಂದೇಹ ವಿಲ್ಲ. ಇಂತಹ ಗ್ರಂಥಕರ್ತರು ಪ್ರಕೃತಸ್ಥಿತಿಯಲ್ಲಿ ವಿರಳರೆಂದೇ ವಚಿಸಬಲ್ಲೆನು. ಪ್ರತಿಯೊಬ್ಬರಲ್ಲಿಯೂ ಈ ಗ್ರಂಥವು ಇರತಕ್ಕದ್ದಾಗಿದೆ.

---

ಶ್ರೀಮಾನ್ ಮೈಸೂರು ಮಹಾರಾಜರವರ ಆಸ್ಥಾನದ ಮಹಾವಿದ್ವಾನ್ ಪೌರಾಣಿಕರತ್ನ ವೇ|| ಬ್ರಂ|| ಶ್ರೀ|| ಹೊಳವನಹಳ್ಳಿ **ಶೇಷಾಚಾರ್ಯರವರ** ಅಭಿಪ್ರಾಯವು.

ಶ್ರೀಮಾನ್ ಮ|| ರಾ|| ಯಡತೊರೆ ಸುಬ್ರಾಯರು ಪೂರ್ವಾರ್ಜಿತ ಪುಣ್ಯದಿಂದ ಶ್ರೀರಾಮಭಕ್ತರಾದರು. ಇವರು ಶ್ರೀರಾಮೋತ್ಸವ ಸೇವಾದಿಗಳನ್ನು ತ್ರಿಕರಣ ಶುದ್ಧಿಯಿಂದ ಬಹುವರ್ಷಗಳಿಂದ ಮಾಡಿದರು. ಪ್ರಸನ್ನನಾದ ಶ್ರೀರಾಮಚಂದ್ರ ಮೂರ್ತಿಯ ಪ್ರೇರಣೆಯಿಂದಲೇ ಶ್ರೀಮದ್ರಾಮಾಯಣದ ಗೂಢಾರ್ಥವನ್ನು ಅಧ್ಯಾತ್ಮಪರವಾಗಿ ನಿರೂಪಿಸುವ ವಿಸ್ತಾರವಾದ ಗ್ರಂಥವನ್ನು ರಚಿಸಿರುತ್ತಾರೆ. ಇವರು ಸಂಸ್ಕೃತ ವಿದ್ಯಾವ್ಯಾಸಂಗ ವಿಶೇಷವಾಗಿ ಮಾಡದೆ ಇದ್ದರೂ ಇವರಿಗೆ ಗೂಢಾರ್ಥ ಸ್ಫುರಣವು ಶ್ರೀರಾಮಾನುಗ್ರಹದಿಂದಲೇ ಆಗಿರುವುದಾಗಿ ತಿಳಿಯ ಬೇಕಾಗಿದೆ. ದ್ರವ್ಯೋಪಪತ್ತಿ ಇಲ್ಲದಿದ್ದರೂ ಲೋಕೋಪಕಾರ ಕುತೂಹಲಿಗಳಾಗಿ ಮುದ್ರಣಮಾಡಿಸಿರುತ್ತಾರೆ. ತತ್ವಾರ್ಥಗ್ರಹಣಮಾಡುವ ಜನರಿಗೆ ಅತ್ಯುಪಕಾರಕ ವಾಗಿರುವ ಈ ಗ್ರಂಥವನ್ನು ನಾನು ನೋಡಿ ಬಹು ಸಂತುಷ್ಟನಾಗಿರುತ್ತೇನೆ. ವಿದ್ಯಾಪಕ್ಷಪಾತಿಗಳೂ ಮತ್ತು ಶ್ರೀರಾಮಭಕ್ತರೂ ಆದ ಮಹಾಜನರು ಈ ಪುಸ್ತಕ ವನ್ನು ತೆಗೆದುಕೊಂಡು ಆಮೂಲಾಗ್ರವಾಗಿ ಪಠನಮಾಡಿ ಗ್ರಂಥಕಾರರ ಶ್ರಮವನ್ನು ಸಾರ್ಥಕಪಡಿಸಬೇಕೆಂದು ಕೋರುತ್ತೇನೆ.

---

ದ್ರಾವಿಡ ದಿವ್ಯಪ್ರಬನ್ಧವನ್ನು ಸಂಸ್ಕೃತ ಶ್ಲೋಕವಾಗಿ ತರ್ಜುಮೆ ಮಾಡಿರುವ ಮತ್ತು ವೇದಾಂತ ಗ್ರಂಥಗಳನ್ನು ರಚಿಸಿರುವ, ಬೆಂಗಳೂರು ಸೆಂಟ್ರಲ್ ಕಾಲೇಜ್ ರಿಟೈರ್ಡ್ ಸಂಸ್ಕೃತ ಪ್ರೊಫೆಸರ್ ಶ್ರೀಮಾನ್|| **ವೇ|| ಎಂ. ಟಿ. ನರಸಿಂಹ ಅಯಂಗಾರ್ರವರ** ಅಭಿಪ್ರಾಯವು.

"ಮಲ್ಲೇಶ್ವರದಲ್ಲಿರುವ ಮ|| ರಾ|| ಎಡತೊರೆ ಸುಬ್ಬರಾಯರನ್ನು ಅನೇಕ ಸಂವತ್ಸರಗಳಿಂದ ಬಲ್ಲೆನು. ಇವರು ಶ್ರೀ ರಾಮಚಂದ್ರಸ್ವಾಮಿಯ ಪರಮ ಭಕ್ತರು ಯೋಗಾನುಷ್ಠಾನಪರರು. ಇದೇ ಮಲ್ಲೇಶ್ವರದಲ್ಲಿ ರಾಮಭಜನ ಸಭೆಯ ಕಾರ್ಯಗಳಲ್ಲಿ ಮುಖ್ಯಪಾತ್ರವನ್ನು ವಹಿಸಿದ್ದರು. ಇವರು ರಚಿಸಿರುವ "ಶ್ರೀ ಮದ್ರಾಮಾಯಣದ ಅಂತರಾರ್ಥ" ಗ್ರಂಥವನ್ನು ಕೈ ಬರವಣಿಗೆಯಲ್ಲಿದ್ದಾಗಲೇ ಕೆಲವು ಸಂವತ್ಸರಗಳ ಹಿಂದೆ ಅಲ್ಲಲ್ಲಿ ನನಗೆ ಅವರು ಓದಿ ಹೇಳಿದ್ದುದು ಜ್ಞಾಪಕವಿದೆ. ಈಗ ಅದು ಅಂದವಾಗಿ ಮುದ್ರಿತವಾಗಿದೆ. ಅಮೋಘವಾಗಿಯೂ, ವಿವರವಾಗಿಯೂ, ಯೋಗ ವೇದಾಂತಗಳ ಸಾರವಾಗಿಯೂ ಇರುವ ಈ ಗ್ರಂಥದ ಕೆಲವು ಭಾಗಗಳನ್ನು ಈಗಲೂ ಪರಿಶೀಲಿಸಿದೆನು. ನನಗೆ ಅತ್ಯಂತ ಸಂತೋಷವಾಯಿತು. ಎಲ್ಲಾ ಭಕ್ತರಿಗೂ, ವಿಚಾರ ಪರರಿಗೂ ಈ ಗ್ರಂಥವು ಅತ್ಯುಪಯುಕ್ತವಾದುದೆಂದು ಸಂತೋಷದಿಂದ ಸೂಚಿಸುತ್ತೇನೆ.

---

ಮೈಸೂರು ಯೂನಿವರ್ಸಿಟಿ ರಿಟೈರ್ಡ್ ರಿಜಿಸ್ಟ್ರಾರ್ ಮತ್ತು ಶ್ರೀಮನ್ಮಹಾರಾಜರವರ ಸಂಸ್ಕೃತ ಮಹಾಪಾಠಶಾಲಾ ಪ್ರೆಸಿಡೆಂಟರಾದ ಮ || ರಾ || **ವಿ. ಸುಬ್ರಹ್ಮಣ್ಯಯ್ಯ**ರವರ ಅಭಿಪ್ರಾಯವು.

ಶ್ರೀಮಾನ್ ಯಡತೊರೆ ಸುಬ್ರಾಯಶರ್ಮ ಎಂಬುವರು ರಚಿಸಿರುವ ಶ್ರೀಮದ್ರಾಮಾಯಣದ ಅಂತರಾರ್ಥ ಎಂಬ ಗ್ರಂಥವನ್ನು ಬಹು ಆನಂದದಿಂದ ಪಠಿಸಿದೆನು. ಈ ಗ್ರಂಥದಲ್ಲಿ ದೊಡ್ಡದಾದ ಶ್ರೀ ರಾಮಚರಿತ್ರೆಯಲ್ಲಿನ ಅಂತರಾರ್ಥವನ್ನು ನವೀನ ರೀತಿಯಲ್ಲಿ ಹೊರಪಡಿಸಿರುವುದು ಅತ್ಯಂತ ಸಂತೋಷಕರವಾಗಿದೆ. ಈ ಗ್ರಂಥ ರಚನೆಯ ವಿಷಯದಲ್ಲಿ ಇವರು ತಮ್ಮ ಪ್ರತಿಭೆಯನ್ನು ತೋರಿಸಿರುವರಲ್ಲದೆ ಬಹು ಗೌರವದಿಂದ ನೋಡಲ್ಪಡುವ ಶ್ರೀಮದ್ರಾಮಾಯಣದಲ್ಲಿ ರಾಜಯೋಗ ಸಂಬಂಧವಾದ ಅರ್ಥವನ್ನು ದೊಡ್ಡ ಪ್ರಯತ್ನದಿಂದ ಕಂಡುಹಿಡಿದಿರುವರು. ಈ ಗ್ರಂಥದ ಯೋಗ್ಯತೆಯ ವಿಷಯದಲ್ಲಿ ಮೈಸೂರು ದೇಶೀಯ ಸುಪ್ರಸಿದ್ಧರಾದ ಪಂಡಿತರೂ ಪೂಜ್ಯರಾದ ಅನೇಕ ಮಠಾಧಿಪತಿಗಳೂ ತಮ್ಮ ತಮ್ಮ ಅನುಮೋದನೆಯನ್ನು ಕೊಟ್ಟಿರುತ್ತಾರೆ. ರಾಜಯೋಗದಲ್ಲಿಯೂ ಮತ್ತು ಶ್ರೀರಾಮತತ್ವಾಮೃತದಲ್ಲಿಯೂ ಆಸಕ್ತಿಯುಳ್ಳ ಸಮಸ್ತರಿಗೂ ಈ ಗ್ರಂಥವು ಬಹು ಉಪಕಾರಕವಾಗಿದೆ.

---

ಮೈಸೂರು ಶ್ರೀಮನ್ಮಹಾರಾಜರವರ ಸಂಸ್ಕೃತ ಮಹಾಪಾಠಶಾಲಾ ಮೀಮಾಂಸಾ ಪ್ರಧಾನೋಪಾಧ್ಯಾಯರು ವೇ|| ಬ್ರಂಹ|| ಶ್ರೀ|| ವಿದ್ವಾನ್ **ಅರ್ಕೇಕೊಪ್ಪಂ ಸುಬ್ರಹ್ಮಣ್ಯಶಾಸ್ತ್ರಿಗಳ**ವರ ಅಭಿಪ್ರಾಯವು.

ವೇ॥ ಬ್ರಂ॥ ಯಡತೊರೆ ಸುಬ್ಬರಾಯ ಶರ್ಮಭಿಃ ವಿರಚಿತಂ **ಸಂಧ್ಯಾವೀಣಾ ತತ್ತ್ವಾರ್ಥ** ನಾಮಕಂ ಗ್ರಂಥಂ ಆಮೂಲಾಗ್ರಸು ಪಠಿತಂ । ತತ್ರವೀಣಾಯಾಃ ಗಾಯತ್ರ್ಯಾಶ್ಚ ಅತ್ಯಂತ ಸಾದೃಶ್ಯ ಮಸ್ತೀತಿ ಸರ್ವಪ್ರಮಾಣಾವಿರೋಧೇನ ನಿರೂಪಿತಂ ಸದ್ಯುಕ್ತ್ಯಾ ವೇದಾಪೌರುಷೇಯತ್ವಂಚ ಸಮರ್ಥಿತಂ । ಅನ್ಯೇಚ ಸೂಕ್ಷ್ಮತರಾ ವಿಷಯಾಃ ಅತ್ರಪ್ರದರ್ಶಿತಾಃ । ಅತಃ ಏತದ್ಗ್ರಂಥ ಕರ್ತಾರಃ ದೇವತಾನುಗ್ರಹಾದೇವ ಅಮಾನುಷೀಂಶಕ್ತಿಮವಲಂಬ್ಯ ಇಮಂಗ್ರಂಥಂ ವ್ಯರಚಯನ್ನಿತಿ। ಅಯಂ ಗ್ರಂಥಸ್ಸರ್ವೋಪಕಾರಕಶ್ಚ ವರ್ತತ ಇತಿ ಸುದೃಢ ಮಾವೇದಯಾಮಿ ॥

---

## THE OPINION OF DOCTOR SIR S. RADHAKRISHNAN, M.A., Ph.D., etc

Doctor of Philosophy of Universities of Calcutta and Oxford (London.)

Madras, 24—9—38

I have had the pleasure of reading in manuscripts the English translations of SANDHYA THATHWARTHA and VEENA RAHASYA by Mr. Y. Subbaraya Sarma. I was greatly impressed by the writer's learning and skill of interpretations. I have no doubt that those who read the works will find the reading both pleasant and profitable. I hope he will be enabled to publish these works and thus benefit a large circle of readers.

---

## THE OPINION OF PANDIT VISHVA BANDHU SASTRY, M.A., M.O.L.

Director, The Vishveshvarananda Vedic Research Institute, Benares.

In advising return of your typed script books SANDHYA THATHWARTHA, VEENA RAHASYA AND RAMAYANA ANTHARARTHA by registered post, I feel I must sincerely thank you for the deep and what is much more, devotional erudition which you have been

able to lavish on the themes treated in these works. I regard these works as an out-pouring of a heart that has been aiming at a superior spiritual elevation incident to its having subjected itself to a protracted course of faithfull, religious contemplation. Your works ought to be of great use to such devoted souls among the Hindus as are engaged on daily meditations and stand in need of symbolical interpretative framework on the basis of our most ancient and sacred vedic ideology

---

ಶ್ರೀಮಾನ್ ಮೈಸೂರು ಮಹಾರಾಜರವರ ಆಸ್ಥಾನದ ವೈಣಿಕ ವಿದ್ವಾನ್ ಮತ್ತು ಮೈಸೂರು ಗೌವರ್ನಮೆಂಟು ವಿದ್ಯಾಇಲಾಖಾ ಮ್ಯೂಜಿಕ್ ಬೋರ್ಡ್ ಛೇರ್‌ಮೆನ್ರಾದ ವೈಣಿಕಪ್ರವೀಣ **ಮ|| ರಾ|| ವಿ. ವೆಂಕಟಗಿರಿಯಪ್ಪನವರ** **ಅಭಿಪ್ರಾಯ.**

ಮ|| ರಾ|| ಯಡತೊರೆ ಸುಬ್ರಾಯಶರ್ಮರು ರಚಿಸಿರುವ ವೀಣಾರಹಸ್ಯ ಗ್ರಂಥವನ್ನು ಅವಲೋಕಿಸಿದೆನು. ಶ್ರೀ ಶಾರದಾಂಬೆಯ ಹಸ್ತದಲ್ಲಿರುವ ಮಹಾ ವೀಣೆಯು ಮನುಷ್ಯಶರೀರ ಮತ್ತು ಬ್ರಹ್ಮಾಂಡದ ರಚನೆಯತತ್ವದ ಆಧಾರದ ಮೇಲೆ ಇರುವುದೆಂಬ ಮಹತ್ವವನ್ನು ಹೊರಸೂಸಿ ಬರೆದಿರುವರು ವಾದ್ಯಗಳಲ್ಲೆಲ್ಲಾ ಶ್ರೇಷ್ಠವಾದ ಅಸ್ಮದಾದಿಗಳು ನುಡಿಸುವ ವೀಣೆಯ ತಂತಿಗಳ ಮತ್ತು ಪ್ರತಿಯೊಂದು ಮನೆಯ ನಾದವು ವೇದ ಮತ್ತು ವಿಶ್ವದ ತತ್ವವನ್ನನುಸರಿಸಿರುತ್ತೆಂಬುದನ್ನು ಸ್ಪಷ್ಟಪಡಿಸಿರುವರು. ವೀಣೆಯನ್ನು ಮನುಷ್ಯಶರೀರಕ್ಕೂ ಅನ್ವಯಿಸಿ ಸಚಿತ್ರದೊಡನೆ ಬಹು ಮುದ್ದಾಗಿ ಬರೆದಿರುವರು. ಅಲ್ಲದೆ ಭರತಖಂಡದ ನಮ್ಮ ಸಂಗೀತಶಾಸ್ತ್ರವು ವಿಶ್ವದ ರಚನಾಕ್ರಮದ ತತ್ವದ ಅಸ್ತಿಭಾರವನ್ನು ಎಡಬಿಡದೆ ಅನುಸರಿಸಿಕೊಂಡು ಇರತಕ್ಕ ಶಾಸ್ತ್ರವೆಂಬುದನ್ನು ಎತ್ತಿತೋರಿಸಿರುವರು. ಇವರು ಬರೆದಿರತಕ್ಕ ತತ್ವಗಳನ್ನು ನಿರ್ಧರಿಸಲು ಅನೇಕ ಸಂಗೀತಶಾಸ್ತ್ರ ಮತ್ತು ಉಪನಿಷದ್ವಾಕ್ಯಗಳ ಆಧಾರವನ್ನು ಕೊಟ್ಟಿರುವರು. ಭರತಖಂಡದಲ್ಲಿ ಈ ವಿಧವಾಗಿ ನಿರೂಪಣೆಮಾಡಿದ ಗ್ರಂಥವು ಇದೇ ಪ್ರಥಮದುದಾಗಿರುತ್ತೆ. ನಾದೋಪಾಸಕರೂ ತತ್ವಪ್ರಿಯರೂ ಈ ಗ್ರಂಥವನ್ನು ಪರಮಾದರದಿಂದ ಸಂಗ್ರಹಿಸಿ ತತ್ವಗ್ರಾಹಿಗಳಾಗಬೇಕಾಗಿ ಕೋರುತ್ತೇನೆ. ಭರತಖಂಡದ ಸಂಗೀತಶಾಸ್ತ್ರದ ಮಹತ್ವವನ್ನು ಬಾಲ್ಯದಿಂದಲೂ ಅರಿತುಕೊಳ್ಳಲು ಅನುಕೂಲವಾಗುವಂತೆ ಈ ಅಪರೂಪವಾದ ಗ್ರಂಥವು ಪ್ರತಿಯೊಂದು ವಿದ್ಯಾಶಾಲೆಯಲ್ಲೂ ಇರತಕ್ಕದ್ದಾಗಿದೆ.